# ಹೊಸತು

## ಒಳಗೇನಿದೆ.....




ಚಿತ್ರಗಳು : ಪಿ. ಮಹಮ್ಮದ್, ಸತೀಶ್ ಯಲ್ಲಾಪುರ, ಹರಿಣಿ, ದಿಲೀಪ್ ವಾಗೀಶ, ವಸಂತ ಹೊಸಬೆಟ್ಟು, ಬಿ. ವಿಲ್ಸನ್, ರವಿಕುಮಾರ್ ಅಜ್ಜೀಪುರ
ಮುಖಚಿತ್ರ : ಚೆ ಗೆವಾರ, ಹಳದಿ ಹೂ : ಶ್ರೀನಿವಾಸ್. ಎನ್
ವಿನ್ಯಾಸ : ನವಕರ್ನಾಟಕ ವಿನ್ಯಾಸ    ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

ಶ್ರೀ ಎಸ್. ಎಂ. ಕೃಷ್ಣ ಅವರ ಎರಡು ವರ್ಷಗಳ ಸಾಧನೆಗಳಲ್ಲಿ ಬೆಂಗಳೂರು ಕೃಷಿ ವಿಶ್ವವಿದ್ಯಾನಿಲಯದಲ್ಲಿ ನಡೆದ ಭೀಕರ ಹಲ್ಲೆಯನ್ನು ಯಾವ ಸ್ಥಾನದಲ್ಲಿರಿಸುತ್ತಾರೋ ತಿಳಿಯದು. ಗುಂಡುರಾವ್ ಸರ್ಕಾರವು ನರಗುಂದದಲ್ಲಿ ಮತ್ತು ಪಟೇಲ್ ಸರ್ಕಾರವು ಬಾಗೂರು – ನವಿಲೆಯಲ್ಲಿ ನಡೆಸಿದ ದೌರ್ಜನ್ಯವನ್ನು ಸರಿಗಟ್ಟದಿದ್ದರೆ ತಮ್ಮ 'ಖ್ಯಾತಿ'ಗೆ ಚ್ಯುತಿ ಬರಬಹುದೆಂಬ ಶಂಕೆಯಿಂದಲೋ ಏನೋ ಕೃಷಿ ವಿಶ್ವವಿದ್ಯಾಲಯದ ವಿದ್ಯಾರ್ಥಿಗಳನ್ನೂ ಅಧ್ಯಾಪಕರನ್ನೂ ಮನಸೋ ಇಚ್ಛೆ ಥಳಿಸಿದ್ದಾರೆ. ಯಾವ ಸಂಕೋಚ ಮತ್ತು ಪಕ್ಷಪಾತ ಇಲ್ಲದೆ ವಿದ್ಯಾರ್ಥಿನಿ - ಅಧ್ಯಾಪಿಕೆಯರನ್ನೂ ಬಾಸುಂಡೆ ಬರುವಂತೆ ಬಾರಿಸಿದ್ದಾರೆ. ಬೈಗುಳ ಸುರಿಮಳೆಯಂತೂ ರಾಜ್ಯದಲ್ಲಿ ಈ ವರ್ಷ ಬಾರದೆ ಹೋದ ಮಳೆಯನ್ನು ಮೀರಿಸಿದೆ. ಇದೆಲ್ಲಾ ಕೇವಲ ಜೈವಿಕ ತಂತ್ರಜ್ಞಾನದ ತೆವಲಿನ ಫಲವಲ್ಲ; ಅದು ಕೇವಲ ಪ್ರಾಸಂಗಿಕ. ನಿಜವಾದ ಸಂಗತಿ ಏನೆಂದರೆ ಕರ್ನಾಟಕವು ಅಳಿಯ ಸಂತಾನದ ಭಾರದಿಂದ ನುಚ್ಚುನೂರಾಗುತ್ತಿದೆ. ಬರೀ ಅಳಿಯಂದಿರಿಗೆ ಭೂಮಿಯ ಕಬಳಿಕೆಯನ್ನು ಬಿಟ್ಟುಕೊಡಬಾರದೆಂದು ಮಗಳ ಸ್ಥಾನದಲ್ಲಿ ನಿಂತು ತಾನೂ ಒಂದಷ್ಟು ಬಾಚಿಕೊಳ್ಳಲು ಕಿರಣ್ ಎಂಬ ಮಹಿಳೆ ಮುಂದಾಗಿದ್ದಾಳೆ. ಪಕ್ಕದಲ್ಲೇ ಇರುವ ನ್ಯಾಯಮೂರ್ತಿಗಳ ವಸತಿ ಸಮುಚ್ಚಯದ ನಿವಾಸಿಗಳು ಆಸಕ್ತಿ ತೋರಿಸಿದ್ದು ಒಂದು ವಿಶೇಷ. ಜೈವಿಕ ತಂತ್ರಜ್ಞಾನ ಸಂಶೋಧನೆಗಷ್ಟೇ ಸೀಮಿತವಾಗುವ ಪ್ರಕ್ರಿಯೆಯಾಗಿದ್ದರೆ ಇಂತಿಲ್ಲೇ ಭೂಮಿ ಬೇಕೆಂಬ ಆಗ್ರಹ ಅರ್ಥವಿಲ್ಲದ್ದು ಮತ್ತು ನೂರು ಎಕರೆಯೇ ಬೇಕೆಂಬ ಹಟ ಅಪ್ರಕೃತವಾದ್ದು. ಹಿಂದೆ ಸೆಂಟ್ರಲ್ ಜೈಲ್ ಇದ್ದ ಜಾಗದ ಒಂದು ಭಾಗದಲ್ಲಿ ಕೂಡ ಜೈವಿಕ ತಂತ್ರಜ್ಞಾನದ ಸಂಶೋಧನೆ ಸಾಧ್ಯ; ಆದರೆ ಅದರ ಬಳಿ ದೇವನಹಳ್ಳಿಯ ಅಂತರರಾಷ್ಟ್ರೀಯ ವಿಮಾನ ನಿಲ್ದಾಣ ಬರುವುದಿಲ್ಲ. ಅದು ಬರದಿದ್ದರೆ ಭೂಮಿಯನ್ನು ಕಬಳಿಸಬೇಕು ಏಕೆ ! ವಿಮಾನ ನಿಲ್ದಾಣದ ಬಳಿ ಭೂಮಿ ಇದ್ದರೆ ನಾಳೆ ವಿವಿಧೋಪಯೋಗಿ ತಂಗುದಾಣಗಳನ್ನೂ 'ಅತಿಥಿ ಗೃಹ'ಗಳನ್ನೂ ನಿರ್ಮಿಸಿ ಜೀವನ ಸಾರ್ಥಕ ಮಾಡಿಕೊಳ್ಳಬಹುದು. ಒಟ್ಟಿನಲ್ಲಿ ನಮ್ಮ ರಾಜ್ಯ ಅಭಿವೃದ್ಧಿಯ ಹಾದಿಯಲ್ಲಿ ಸಾಗಲು ಸಾವಿರ ಕೋಟಿ ಬಂಡವಾಳವನ್ನು ಹೂಡುವವರನ್ನು ಓಲೈಸಬೇಕು, ಅವರಿಗೆ ತೃಪ್ತಿಯಾಗುವಂತೆ ವಿಶ್ವವಿದ್ಯಾಲಯವನ್ನು ಭಗ್ನಗೊಳಿಸಬೇಕು. ಇದು ''ಹೈಟೆಕ್ ಮಾಫಿಯಾ'' ಪ್ರತಾಪ. ಇದರ ತೆಕ್ಕೆಗೆ ನಮ್ಮ ರಾಜ್ಯ ತಳ್ಳಲ್ಪಡಬೇಕೆ ಎಂಬುದನ್ನು ಸಾರ್ವಜನಿಕರು ಪರಿಶೀಲಿಸಬೇಕು.

ಕರ್ನಾಟಕ ವಿಶ್ವವಿದ್ಯಾಲಯಗಳ ಮಸೂದೆಯನ್ನು ಪ್ರಜಾಪ್ರಭುತ್ವ ವಿರೋಧಿ ನೆಲೆಯಲ್ಲಿ ತಿದ್ದುಪಡಿ ಮಾಡಿ ಅಂಗೀಕರಿಸಿದ ಸರ್ಕಾರವು ಇನ್ನೆಷ್ಟು ಇಂತಹ ದೌರ್ಜನ್ಯಗಳನ್ನು ಎಸಗುತ್ತದೆಯೆಂಬುದನ್ನು ಈಗಲೇ ಹೇಳಲಾಗದು. ಕೃಷಿ ವಿಶ್ವವಿದ್ಯಾನಿಲಯದಲ್ಲಿ ನಡೆದ ಹಲ್ಲೆಯನ್ನು ಮೀರಿಸುವ ದೌರ್ಜನ್ಯವು ಬೆಂಗಳೂರು - ಮೈಸೂರು ಹೆದ್ದಾರಿ ಮತ್ತು ಟೌನ್‌ಶಿಪ್‌ಗಳ ನಿರ್ಮಾಣದ ಸಮಯದಲ್ಲಿ ಹಳ್ಳಿಹಳ್ಳಿಯಲ್ಲೂ ಕಾಳ್ಗಿಚ್ಚಿನಂತೆ ಹರಡುವ ಎಲ್ಲ ಸೂಚನೆಗಳೂ ಇವೆ. ಮತಿಭ್ರಷ್ಟ ಸರ್ಕಾರದ ಜನವಿರೋಧಿ ನೀತಿಗಳ ಸರಮಾಲೆಯು ನಮ್ಮನ್ನು ನೇಣುಗಂಬಕ್ಕೆ ಕಳಿಸುತ್ತದೇನೋ ಎಂಬ ಭೀತಿ ಸ್ವಕಪೋಲ ಕಲ್ಪಿತವಂತೂ ಅಲ್ಲ. ಚನ್ನಪಟ್ಟಣ ಮತ್ತು ವಿಠಲೇನ ಹಳ್ಳಿಯಲ್ಲಿ ಉಂಟುಮಾಡಲಾದ ಪೊಲೀಸ್ ಭಯೋತ್ಪಾದಕತೆಯು ಇದಕ್ಕೆ ನಿದರ್ಶನ.

*   *   *

ಸೆಪ್ಟೆಂಬರ್‌ನಲ್ಲಿ ನಡೆದ ನ್ಯೂಯಾರ್ಕಿನ ಘಟನೆಯ ಪರಿತಾಪವನ್ನು ಕಡಿಮೆ ಮಾಡುವಂತೆ ಪ್ರಾರ್ಥಿಸಿ ದೇವತೆಗಳನ್ನು ತಣಿಸಲು ನಮ್ಮ ಶೃಂಗೇರಿ ಪೀಠಾಧ್ಯಕ್ಷರು ಒಂದು ವಿಪ್ರತಂಡವನ್ನು ನ್ಯೂಯಾರ್ಕಿಗೆ ಹೊತ್ತುಹಾಕುತ್ತಾರೆಂದು ವರದಿಯಾಗಿತ್ತು. ಆ ವಿದ್ವನ್ಮಣಿಗಳು ಅಲ್ಲಿಗೆ ಹೋಗಿ ಯಜ್ಞಮಾಡುತ್ತಾರೆಂಬ ವದಂತಿ. ಅಲ್ಲಿಯ ದೇವತೆಗಳೂ ನಮ್ಮ ಯಜ್ಞಗಳಿಂದ ತೃಪ್ತರಾಗುವ ದೇವತೆಗಳೂ ಭಿನ್ನರೋ ಅಲ್ಲವೋ ನಮಗೆ ತಿಳಿಯದು. ಆದರೆ ತಿಳಿದಿರುವ ವಿಷಯವೇನೆಂದರೆ ಶೃಂಗೇರಿ ಸ್ವಾಮಿಗಳು ಗುಜರಾತಿನಲ್ಲಿ ಭೂಕಂಪ ಆದನಂತರ ಅಲ್ಲಿ ಯಜ್ಞ ಮಾಡಿಸಲಿಲ್ಲ. ಬಹುಶಃ ಅಲ್ಲಿಯ ಬ್ರಾಹ್ಮಣೋತ್ತಮರ ಬಳಿ ಡಾಲರುಗಳ ಕಂತೆಗಳು ಇಲ್ಲದಿರುವುದು ಸ್ವಾಮಿಗಳ ತಾರತಮ್ಯ ಭಾವನೆಗೆ ಕಾರಣವೆ ? ಅದ್ವೈತ ಸುಖದಲ್ಲಿ ತನ್ಮಯರಾಗಿರುವರೆಂದು ಹೇಳಲಾದ ಸ್ವಾಮಿಗಳೇ ಹೀಗಾದರೆ ಭಯೋತ್ಪಾದಕರು ಇನ್ನೆಂತಹ ಮೃದುಹೃದಯಿಗಳಾಗಿರುತ್ತಾರೆಂದು ನಿರೀಕ್ಷಿಸೋಣ !

*   *   *

ಇನ್ನೊಂದು ವಿಷಯ : ಮೈಸೂರಿನ ಪೊಲೀಸರು ವೀರಪ್ಪನ್ ಸಹಚರರು ನಾಲ್ವರನ್ನು

೭ನೇ ಪುಟಕ್ಕೆ



ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೩ ಸಂಚಿಕೆ - ೪ ನವೆಂಬರ್ ೨೦೦೧

*ಪ್ರಧಾನ ಸಂಪಾದಕ*

ಜಿ. ರಾಮಕೃಷ್ಣ

*ಸಂಪಾದಕ ಮಂಡಲಿ*

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಸ್. ಪಾರ್ಥಸಾರಥಿ
ಮಲ್ಲೇಪುರಂ ಜಿ. ವೆಂಕಟೇಶ್
ಬಿ. ವಿ. ವೀರಭದ್ರಪ್ಪ
ಟಿ. ಶ್ರೀನಿವಾಸರಾಜು
ಕೆ. ಪಿ. ಸ್ವಾಮಿ

*ವ್ಯವಸ್ಥಾಪಕರು*

ಎಸ್. ಸುರೇಂದ್ರ
ಎ. ಆರ್. ಉಡುಪ

*ಮುದ್ರಕ-ಪ್ರಕಾಶಕ*

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

*ಮುದ್ರಣ*

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೮೩೯೭೪೨೬

*ಹೊಸತು ಕಚೇರಿಯ ವಿಳಾಸ*



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೦೩೫೮೦ / ೮೧ / ೮೨
**e-mail : nkp@bgl.vsnl.net.in**

# ಸಂಪಾದಕೀಯ

## ಯಾರ 'ಶಾಶ್ವತ ಸ್ವಾತಂತ್ರ್ಯ'ಕ್ಕಾಗಿ...

ವಿದೇಶಾಂಗ ನೀತಿಯಲ್ಲಿ ''ಶಾಶ್ವತ ಸ್ನೇಹಿತರಾಗಲಿ, ಶಾಶ್ವತ ಶತ್ರುಗಳಾಗಲಿ ಇರುವುದಿಲ್ಲ; ಸ್ವದೇಶದ ಹಿತಾಸಕ್ತಿಯೊಂದೇ ಶಾಶ್ವತ'' ಎಂಬ ಮಾತುಂಟು. ಪಾಕಿಸ್ತಾನದ ಅಧ್ಯಕ್ಷ ಇಂದಿನ ಸಂದರ್ಭದಲ್ಲಿ ತನ್ನ ಹಿತಾಸಕ್ತಿಯು ತನ್ನನ್ನು ನಂಬಿದ್ದ, ತಾನು ನಂಬಿಸಿದ್ದ ಸ್ನೇಹಿತರನ್ನು ಕೈ ಬಿಡುವುದೇ ಆಗಿದೆ ಎಂದು ಸಾರಿದ್ದಾರೆ. ಪ್ರವಾದಿ ಮಹಮ್ಮದರು ತಮ್ಮ ಕಾಲದಲ್ಲಿ ದಾಳಿ ಎದುರಿಸಬೇಕಾದಾಗ ತಾವು ಕಾಫಿರರೆಂದು ಕರೆಯುವ ಕ್ರಿಶ್ಚಿಯನ್ನರೊಡನೆ ಒಮ್ಮೆಯೂ, ಯೆಹೂದಿಗಳೊಡನೆ ಮತ್ತೊಮ್ಮೆಯೂ ತಾತ್ಕಾಲಿಕವಾಗಿ ಜಾಣ್ಮೆಯಿಂದ ಒಪ್ಪಂದ ಮಾಡಿಕೊಂಡಿದ್ದರೆಂಬ ಚಾರಿತ್ರಿಕ ಪ್ರಸಂಗವನ್ನು ತನ್ನ ನೀತಿಗೆ ಸಮರ್ಥನೆಯಾಗಿ ಅವರು ಉದಾಹರಿಸಿದ್ದಾರೆ. ಈ ನೀತಿಯಂತೆ ಪಾಕಿಸ್ತಾನದ ಆಳುವ ವರ್ಗ ಒಮ್ಮೆ ಭಾರತದ ವಿರುದ್ಧ ಚೀನದೊಡನೆ ಅಮೆರಿಕದೊಡನೆ, ಮತ್ತೊಮ್ಮೆ ರಷ್ಯದ ವಿರುದ್ಧ ತಾಲಿಬಾನಿನೊಡನೆ ಅಮೆರಿಕದೊಡನೆ, ಮಗದೊಮ್ಮೆ ಈಗ ಅಮೆರಿಕದೊಡನೆ ತಾಲಿಬಾನಿನ ವಿರುದ್ಧ, ಹೀಗೆ ಕೌಲು ಮಾಡಿಕೊಂಡು ತನ್ನ ಚಮತ್ಕಾರಮಯ ತತ್ವವಿಹೀನ ವರ್ತನೆಯನ್ನು ಸ್ಪಷ್ಟಪಡಿಸಿದೆ. ಇವರೊಡನೆ ವ್ಯವಹರಿಸುವವರು ಯಾವಾಗಲೂ ಅವರನ್ನು ನಂಬಲಾಗದು, ನಂಬಿಸಿ ಕತ್ತು ಕುಯ್ಯುವ ಜನ ಇವರು ಎಂಬುದಂತೂ ಮತ್ತೆ ಮತ್ತೆ ಅನುಭವಕ್ಕೆ ಬರುತ್ತಿದೆ. ಪದೇ ಪದೇ ಸೋತು ತಾಷ್ಕೆಂಟಿನಲ್ಲೋ, ಸಿಮ್ಲಾದಲ್ಲೋ, ಲಾಹೋರಿನಲ್ಲೋ ಒಡಂಬಡಿಕೆಗಳಿಗೆ ಸಹಿ ಹಾಕಿದರೂ ಅವರ ಸಹಿಗೆ ಯಾವ ಬೆಲೆಯೂ ಇಲ್ಲವೆಂಬಂತೆ ಪಾಕಿಸ್ತಾನ ನಡೆದುಕೊಂಡಿದೆ. ಹೀಗಿರುವಾಗ ಇಂದಿನ ಭಯೋತ್ಪಾದಕ ಸಂಬಂಧದ ಹಗರಣ ಮತ್ತು ಅಫ್ಘಾನಿಸ್ತಾನದ ಮೇಲೆ ನಡೆಯುತ್ತಿರುವ ಅಮೆರಿಕದ ದಬಾವಣೆಯ ಪರಿಸ್ಥಿತಿಯಲ್ಲಿ ಭಾರತ ತಕ್ಷಣದಲ್ಲಿ ಮತ್ತು ಮುಂಬರಲಿರುವ ದಿನಗಳಲ್ಲಿ ಅನುಸರಿಸಬೇಕಾದ ನೀತಿ ಹೇಗಿರಬೇಕು ಎಂಬುದು ಸದ್ಯದ ಗಂಭೀರ ವಿಷಯ.

ಒಂದು ಸ್ತರದಲ್ಲಿ ಅಮೆರಿಕ ತನ್ನೆಲ್ಲ ಆಧುನಿಕ ವಿಪುಲ ಶಸ್ತ್ರಸಾಮರ್ಥ್ಯಗಳಿದ್ದರೂ ತನ್ನನ್ನು ತಾನು ರಕ್ಷಿಸಿಕೊಳ್ಳಲಾರದೆ ಹೋದಂತೆ ಕಂಡುಬರುತ್ತಿದೆ. ಒಸಾಮಾ ತನ್ನನ್ನು ಮೊದಲೇ ಆಘಾತಿಸಲಿ, ತಾನು ಅವನ ಮೇಲೆ ಏರಿಹೋಗಲು ಕಾರಣ ಸೃಷ್ಟಿಯಾಗಲಿ ಎಂದು ಅಮೆರಿಕ ಕಾದಿತ್ತೇ ? ಅಮೆರಿಕ ಜಾರಿಗೊಳಿಸಬೇಕೆಂದಿದ್ದ ಅತ್ಯಾಧುನಿಕ ರಕ್ಷಣಾ ತಂತ್ರವ್ಯೂಹದಿಂದ ಆತ್ಮರಕ್ಷಣೆಗೆ ಏನೇನೂ ಪ್ರಯೋಜನವಾಗದೆಂದು ನ್ಯೂಯಾರ್ಕಿನ ಪ್ರಸಂಗದಿಂದ ಸ್ಪಷ್ಟವಾಗುತ್ತಿದೆ. ಮಹಾಭಾರತದ ಪರೀಕ್ಷಿತ್ ಮಹಾರಾಜ ಅಹಂಕಾರದಿಂದ ಬಡಪಾಯಿಯ ಮೇಲೆ ಪಾಪಕೃತ್ಯ ಎಸಗಿ, ನಂತರ ಎಲ್ಲೇ ಅವಿತುಕೊಂಡರೂ ತಕ್ಷಕನ ಜಿದ್ದಿಗೆ ಪಕ್ಕಾದಂಥ ಮತ್ತು ಆದಾದ ಮೇಲೆ ತಕ್ಷಕನ ಅನೇಕ ಸಮರ್ಥಕರು ಮುಂದೆ ಬಂದು ಅವನನ್ನು ಉಳಿಸಿದಂತೆ ಆಗಿದೆ ಇಂದಿನ ಅಮೆರಿಕಾದ ಪರಿಸ್ಥಿತಿ. ಕೇವಲ ಮಿಲಿಟರಿ ಶಸ್ತ್ರಾಸ್ತ್ರಗಳಿಂದ ರಕ್ಷಣೆ ಸಾಧ್ಯವಿಲ್ಲ. ಅಮೆರಿಕ ತಾನು ವಿಶ್ವದಾದ್ಯಂತ ಎಸಗುತ್ತಾ ಬಂದಿರುವ ವಿಶ್ವಾಸಘಾತುಕ ಕೃತ್ಯಗಳನ್ನು ಸ್ಮರಿಸಿ, ಆತ್ಮಾವಲೋಕನ ಮಾಡಿಕೊಂಡು, ಶತ್ರುತ್ವವನ್ನು ನೀಗಿಕೊಳ್ಳುವ ಪ್ರಾಮಾಣಿಕ ಪ್ರಯತ್ನ ಮಾಡಬೇಕು. ತಾನು ವಿಶ್ವದ ಏಕೈಕ ಪ್ರಭುವಾಗುವ ಮಹತ್ವಾಕಾಂಕ್ಷೆಯನ್ನು ಕೈ ಬಿಡಬೇಕು. ತನ್ನ ಬಲಕ್ಕೆ ತಕ್ಕ ವಿವೇಕವನ್ನು ಗಳಿಸಿಕೊಳ್ಳಬೇಕು. ಅದೊಂದೇ ಶಾಶ್ವತ ಆತ್ಮ ರಕ್ಷಣೆಯ ಮಾರ್ಗ. ಇಲ್ಲದಿದ್ದರೆ ಮೂಲೆಮೂಲೆಯಲ್ಲೂ ಗುಮ್ಮನನ್ನು ಕಾಣುತ್ತಾ ಆಂಥ್ರಾಕ್ಸ್ ಬಗ್ಗೆ ಗಾಬರಿಗೊಂಡಿರುವಂತೆ ಅಲ್ಲಿಯ ಪೌರರು ಕಾರಣವಿಲ್ಲದೆಯೂ ಶಾಂತಿ ಕಳೆದುಕೊಳ್ಳುವ ದುರಂತ ಮುಂದುವರಿಯುತ್ತದೆ.

ಅಮೆರಿಕದೊಡನೆ ಐದು ದಶಕಗಳ ಸಂಬಂಧದಿಂದ ಪಾಕಿಸ್ತಾನಕ್ಕೆ ಬಂದ ಭಾಗ್ಯವಾದರೂ ಏನು ? ಈ ಕಾಲಾವಧಿಯಲ್ಲಿ ಅದು ತನ್ನ ದೇಶ ವಿಭಜನೆಯನ್ನು ಅನುಭವಿಸಿತು. ಒಂದು ಗಟ್ಟಿ ನೆಲೆಯಲ್ಲಿ ಪ್ರಜಾಪ್ರಭುತ್ವಾತ್ಮಕ ಆಡಳಿತ ಕ್ರಮವನ್ನು ನೆಟ್ಟು, ಬೆಳೆಸಿ, ಉಳಿಸಿಕೊಳ್ಳಲಾಗಲಿಲ್ಲ. ಇರುವ ಭೂಪ್ರದೇಶದಲ್ಲೂ ಸಿಂಧ್, ಬೆಲೂಚಿಸ್ತಾನ್, ಫಕ್ತೂನಿಸ್ತಾನದ ಜನ ಪಶ್ಚಿಮ ಪಂಜಾಬಿನ ಮತಬಾಂಧವರಿಂದಲೇ ದಾರುಣ ತುಳಿತಕ್ಕೆ ಸಿಕ್ಕು ತಮ್ಮ ನಾಡಿನ ಐಕ್ಯತೆಯಲ್ಲಿ ನಂಬಿಗೆ ಕಳೆದುಕೊಂಡಿದ್ದಾರೆ. ದೇಶದ ಸಂಪತ್ತು ಹಾಗೂ ವಿದೇಶೀ ಸಾಲದ ಹೊಳೆಯೆಲ್ಲ ಕೆಲವೇ ಮೇಲ್ವರ್ಗದ ಪಂಜಾಬಿ ಮುಸಲ್ಮಾನರ ಕೈ ಸೇರಿದೆ. ಮಿಲಿಟರಿ ಅಧಿಕಾರವನ್ನು ಅವರೇ ನಿಯಂತ್ರಿಸುತ್ತಾರೆ. ತಮ್ಮ ಅರ್ಥ ವ್ಯವಸ್ಥೆ ನಿಭಾಯಿಸಲಾರದಷ್ಟು ಹೊರೆಯಾದ ಅಗಾಧ ಮಿಲಿಟರಿ, ಉಪಯೋಗಕ್ಕೆ ಬರದ ಅಣ್ವಸ್ತ್ರ ಮಹತ್ವಾಕಾಂಕ್ಷೆ ಇವೆಲ್ಲಾ ಆರ್ಥಿಕ ದಿವಾಳಿತನಕ್ಕೆ ಎಡೆಕೊಟ್ಟಿದೆ. ಈಗ ನೇರವಾಗಿ ಅಮೆರಿಕದ ಅಡಿಯಾಳಾಗಿ, ಜನತೆಗೆ ನಿಜಸ್ವರೂಪವನ್ನೂ ಮರೆಮಾಡಿ, ಮತಾಂಧತೆಯನ್ನು, ಭಾರತದ ವಿರುದ್ಧದ ದ್ವೇಷವನ್ನು ನಿರಂತರ ಊಡಿಸಿ, ಅದನ್ನು ಆಳುವ ತಂತ್ರವನ್ನಾಗಿ ಮಾಡಿಕೊಂಡಿದೆ ಅಲ್ಲಿಯ ಆಳುವ ವರ್ಗ. ಇದೇಕೆ ಅಮೆರಿಕದೊಡನೆ ಗಳಸ್ಯ ಕಂಠಸ್ಯ ಸ್ನೇಹ ಇವರ ಪರಿಸ್ಥಿತಿಯನ್ನು ಸರಿಪಡಿಸಲು ನೆರವಾಗಲಿಲ್ಲ ? ಅಮೆರಿಕದೊಡನೆ ನಿಕಟ ಸ್ನೇಹ ಪಡೆಯಲು ಹವಣಿಸಿದ ಯಾವುದೇ ಅಭಿವೃದ್ಧಿಶೀಲ ಅಥವಾ ಹಿಂದುಳಿದ ರಾಷ್ಟ್ರವೇ ಆಗಲಿ, ತಮ್ಮ ಸ್ಥಿತಿ ಉತ್ತಮಪಡಿಸಿಕೊಂಡ ಉದಾಹರಣೆ ಸಿಗುವುದಿಲ್ಲ.

ಇದೀಗ ಅಮೆರಿಕ ಪಾಕಿಸ್ತಾನದ ಅಣ್ವಸ್ತ್ರದ ಮೇಲೆ ತಮ್ಮ ಹತೋಟಿಯನ್ನು ಸ್ಥಾಪಿಸಲು ಇಂದಿನ ಭಯೋತ್ಪಾದಕ ಹಗರಣವನ್ನು ಉಪಯೋಗಿಸಿಕೊಂಡಿದೆ. ಇದು ಮೇಲುನೋಟಕ್ಕೆ ನಮಗೆ ಸ್ವಾಗತಾರ್ಹವೆನಿಸಬಹುದು. ಆದರೆ ಇಂದು ನಮ್ಮ ಪಾದದ ಡೀಗೋ ಗಾರ್ಸಿಯಾದ ಕ್ಷಿಪಣಿ ನೆಲೆಯಿಂದ ಆಫ್‌ಘಾನಿಸ್ತಾನದ ಮೇಲೆ ಹಲ್ಲೆ ನಡೆಸುತ್ತಿರುವ ಅಮೆರಿಕದ ಉದ್ದೇಶ ಇನ್ನೂ ಆಳವಾದುದು. ಅದು ಕೇವಲ ತಾಲೀಬಾನಿನ ಹುಟ್ಟಡಗಿಸುವ ಸೀಮಿತ ಉದ್ದೇಶದ್ದಲ್ಲ. ಡೀಗೋ ಗಾರ್ಸಿಯಾಕ್ಕೆ ಕಾಬೂಲಿಗಿಂತ ಬೆಂಗಳೂರು ಬಹಳ ಹತ್ತಿರ !

ಭಯೋತ್ಪಾದನೆಯನ್ನು ನಿರ್ಮೂಲನ ಮಾಡುವ ಸೋಗಿನಲ್ಲಿ ಜಗತ್ತಿನ ಎಲ್ಲೆಡೆ ಯುದ್ಧ ವಿಸ್ತರಣೆಗೆ ಅಮೆರಿಕ ಸ್ಪಷ್ಟವಾಗಿ ಸಜ್ಜಾಗುತ್ತಿದೆ. ಸದ್ಯದಲ್ಲೇ ಅದು ಇರಾನ್ ಮತ್ತು ಇರಾಕ್ ವಿರುದ್ಧ ಇರಬಹುದು. ಆಫ್‌ಘಾನಿಸ್ತಾನದ ಉತ್ತರದಲ್ಲಿ ನೆಲೆಯಿರುವ ಹೋರಾಟಗಾರರಿಗೆ ಇವರು ಅರ್ಥಪೂರ್ಣ ಬೆಂಬಲ ನೀಡರು. ಪ್ಯಾಲೆಸ್ತೀನ್‌ನಲ್ಲಿ ತೋರಿಕೆಯ ಶಾಂತಿಮಾರ್ಗ ಸುಗಮ ಮಾಡಿಕೊಂಡಾರು. ಪಾಕಿಸ್ತಾನ ಮತ್ತು ಆಫ್‌ಘಾನಿಸ್ತಾನಗಳನ್ನು ಒಮ್ಮೆ ಒಳಹೊಕ್ಕು ಇವರು ಸದ್ಯದಲ್ಲಿ ಹೊರಹೋಗರು. ಕಾಶ್ಮೀರದ ಸಮಸ್ಯೆಯ ದುರುಪಯೋಗ ಪಡೆದು, ಪ್ರತ್ಯಕ್ಷ-ಪರೋಕ್ಷ ಆಮಿಷ, ಬೆದರಿಕೆಗಳ ಮೂಲಕ ನಮ್ಮ ಅಣ್ವಸ್ತ್ರಗಳ ಮೇಲೂ ಹತೋಟಿ ಪಡೆಯಲು ಪ್ರಯತ್ನಪಡಬಹುದು. ಚೀನ ಮತ್ತು ರಷ್ಯದ ಗಡಿನಾಡುಗಳಲ್ಲಿ ಮಿಲಿಟರಿ ನೆಲೆ ಸ್ಥಾಪಿಸಿಯಾರು. ವಿಶ್ವಸಂಸ್ಥೆಯನ್ನು ಧಿಕ್ಕರಿಸಿ, ನೇಟೋ ಜೊತೆ ಸೇರಿ, ಹುಚ್ಚು ಕುದುರೆಯಂತೆ ವರ್ತಿಸುತ್ತಿದ್ದ ಜಗತ್ತಿನ ಏಕೈಕ ಸಾರ್ವಭೌಮ ಅಮೆರಿಕ ಈಗ ಅದರ ಸದಸ್ಯತ್ವ ಶುಲ್ಕದ ಬಾಕಿ ಚುಕ್ತಾ ಮಾಡಿದೆ ! ತಾನು ಹೇಳಿದಂತೆ ಕೇಳಿಕೊಂಡಿದ್ದ ಕೋಫಿ ಅಣ್ಣನಿಗೆ ನೊಬೆಲ್ ಪಾರಿತೋಷಕ ಕೊಡಿಸಿದೆ.

ಆ ಸಂಸ್ಥೆಯನ್ನು ತೆರೆಮರೆಯಲ್ಲಿ ತನ್ನ ದುರುದ್ದೇಶಗಳಿಗೆ ಸಾಧನವಾಗಿ ಉಪಯೋಗಿಸಲು ಮುಂದಾಗುತ್ತಿದೆ. ಭಾರತ ಅಮೆರಿಕದ ಬಾಲಬಡುಕ ಗೆಳೆಯನಾಗಿಬಿಟ್ಟರೆ ನಮ್ಮೆಲ್ಲಾ ಸಮಸ್ಯೆಗಳೂ ಪರಿಹಾರವಾಗಿಬಿಡುತ್ತವೆ ಎಂಬುದು ಭ್ರಮೆ. ಹಾಗೆ ಮಾತನಾಡುವವರು ನಮ್ಮ ರಾಜ್ಯ ಸೂತ್ರ ಹಿಡಿಯಲು ನಾಲಾಯಕ್ಕು.

ಕಳೆದ ಶತಮಾನದಲ್ಲಿ ನಡೆದ ಎಲ್ಲ ಯುದ್ಧಗಳಲ್ಲೂ ಅಮೆರಿಕದ ನೇರ ಕೈವಾಡವಿದೆ. ಆ ದೇಶದ ಆರ್ಥಿಕ ಹಿತಾಸಕ್ತಿಗೆ ಜಗತ್ತಿನಲ್ಲಿ ಸಂತತ ಪ್ರಕ್ಷುಬ್ಧ ಪರಿಸ್ಥಿತಿ ಅತ್ಯಗತ್ಯ. ಅವರಿಗೆ ಯಾರಾದರೂ ಒಬ್ಬ ಶತ್ರುವಿನ ಅಗತ್ಯ ನಿರಂತರವಾದುದು. ಇಂದಿನ ಪರಿಸ್ಥಿತಿಯನ್ನು ತಮ್ಮ ಕುಗ್ಗುತ್ತಿರುವ ಅರ್ಥವ್ಯವಸ್ಥೆಯ ಪುನಶ್ಚೇತನಕ್ಕೆ ಸುವರ್ಣಾವಕಾಶವಾಗಿ ಬಳಸಿಕೊಂಡಿದ್ದಾರೆ. ಅಮೆರಿಕದೊಡನೆ ವಿವಿಧ ಹಂತಗಳಲ್ಲಿ ಸಂಬಂಧ ಬೆಳೆಸುವುದು ನಮಗೆ ಅನಿವಾರ್ಯ. ಆದರೆ ಅವರೊಡನೆ ಸಂಪೂರ್ಣ ನಂಬಿಕೆಯ ಶಾಶ್ವತ ಸಂಬಂಧ ಎಂದಾದರೂ ಯಾರಿಗಾದರೂ ಸಾಧ್ಯವೇ ?

ಬಿನ್ ಲಾಡೆನ್ ಸೂತ್ರಗೊಂಬೆಯಾದ ಅಲ್-ಕೈದ್ ಎಂಬುದು ಕಾಶ್ಮೀರ ಸಮಸ್ಯೆ ಹಿಂದೂ-ಮುಸ್ಲಿಂ ಸಮಸ್ಯೆಯೆಂದು ವರ್ಣಿಸಿದೆ. ತನ್ಮೂಲಕ ನಮ್ಮ ರಾಷ್ಟ್ರದ ಮೂಲಭೂತ ಧರ್ಮನಿರಪೇಕ್ಷ ತತ್ವವನ್ನೇ ಪ್ರಶ್ನಿಸಿದೆ. ನಮ್ಮಲ್ಲೇ ಇನ್ನೊಂದು ದಿಕ್ಕಿನಿಂದಲೂ ಇದೇ ಕೆಲಸ ನಡೆಯುತ್ತಿದೆ. ಸದ್ಯದಲ್ಲಿ ಅಮೆರಿಕ ತಾಲಿಬಾನ್ ಮತ್ತು ಅಲ್-ಕೈದ್‌ಗಳನ್ನು ಹುಟ್ಟಡಗಿಸುವುದು ನಮಗೂ ಬೇಕು. ಅದಕ್ಕೆಂದೇ ಅಮೆರಿಕದ ಅಫ್‌ಘಾನಿಸ್ತಾನದ ವಿರುದ್ಧದ ಕಾರ್ಯಾಚರಣೆಗೆ ನಮ್ಮ ಬೆಂಬಲ. ಇದಕ್ಕಿಂತ ಹೆಚ್ಚು ನಿರೀಕ್ಷೆ ಭ್ರಮಾತ್ಮಕ. ಕಾಶ್ಮೀರದ ಭಯೋತ್ಪಾದಕ ವಿಷಯವನ್ನು ಪರಿಹರಿಸಲು ಅಮೆರಿಕವನ್ನು ಆಹ್ವಾನಿಸುವುದು ಅವಿವೇಕದ ಪರಮಾವಧಿ. ಇದು ಅವರ ನೇರ ಹಸ್ತಕ್ಷೇಪಕ್ಕೆ ಆಹ್ವಾನ. ಈ ಭಯೋತ್ಪಾದಕ ಪರಿಸ್ಥಿತಿಯನ್ನು ನಾವೇ ಪರಿಹರಿಸಿಕೊಳ್ಳಲಾಗದಿದ್ದರೆ ನಮಗೆ ಗೃಹಮಂತ್ರಿಗಳು ಏಕೆ ಬೇಕು ? ಇಷ್ಟು ದಿವಸ ನಮ್ಮ ಈ ಸಮಸ್ಯೆಯಲ್ಲಿ ಮೂರನೆಯವರ ಹಸ್ತಕ್ಷೇಪ ಸಹಿಸೆವು ಎಂದು ಕೇಂದ್ರದ ಸಮ್ಮಿಶ್ರ ಸರ್ಕಾರ ಹೇಳುತ್ತಿದ್ದುದು ಬರೇ ನಾಟಕವೇ ? ಅಮೆರಿಕದ ವಿದೇಶಾಂಗ ಕಾರ್ಯದರ್ಶಿ ಭಾರತಕ್ಕೂ ಪಾಕಿಸ್ತಾನಕ್ಕೂ ಓಡಿ ಬಂದದ್ದು ನಮ್ಮ ಸಹಾಯ ಯಾಚಿಸಲು ಅಲ್ಲ. ನಮಗೆ ಬೆದರಿಕೆ, ಎಚ್ಚರಿಕೆ ನೀಡಲು ಎಂಬುದು ಸ್ಪಷ್ಟ. ಪಾಕಿಸ್ತಾನದಲ್ಲಿ ತಮ್ಮ ಹಿತಾಸಕ್ತಿ ಕಾಪಾಡಿಕೊಳ್ಳಲು ಮುಷರಫ್ ಏನು, ಮಿಲಿಟರಿ ಏನು, ದೆವ್ವವೇ ಆದರೂ ಅವರೊಡನೆ ನಾವು ವ್ಯವಹಾರ ಮಾಡುತ್ತೇವೆ ಎಂಬುದು ಅಮೆರಿಕಾದ ನಿಲುವು. ತಮ್ಮ ಹಿತಾಸಕ್ತಿಗೆ ಚ್ಯುತಿ ಉಂಟಾಗದಿರಲು ಭಾರತವು ಪಾಕಿಸ್ತಾನದ ವಿರುದ್ಧ ಯಾವ ಕಾರ್ಯಾಚರಣೆಯನ್ನೂ ಮಾಡಕೂಡದೆಂದು ಹೇಳಲು ಪೊವೆಲ್ ಬಂದದ್ದು. ಈ ಬಗ್ಗೆ ಮುಷರಫ್‌ಗೆ ಆಶ್ವಾಸನೆ ನೀಡಿದ್ದು ತಿಳಿದ ವಿಷಯ. ಇದು ತುಂಬ ಎಚ್ಚರಿಕೆ ವಹಿಸಬೇಕಾದ ಸಂದರ್ಭ. ಅವರ ಹುನ್ನಾರವನ್ನು ವಿಫಲಗೊಳಿಸುವ ರೀತಿಯಲ್ಲಿ ನಮ್ಮ ವಿದೇಶಾಂಗ ನೀತಿಜ್ಞರು ಪಾವೆಲ್‌ರೊಡನೆ ನಡೆದುಕೊಂಡರೆ ? ಅಫ್‌ಘಾನಿಸ್ತಾನದ ಮುಂದಿನ ಆಗುಹೋಗುಗಳಲ್ಲಿ ನಮಗೆ ಪಾತ್ರವಹಿಸುವ ಹಕ್ಕಿದೆ ಎಂಬುದನ್ನು ಸ್ಪಷ್ಟ ಪಡಿಸಲು ಸಮರ್ಥರಾದರೆ ? ಆಜಾದ್ ಕಾಶ್ಮೀರವು ಕಾಶ್ಮೀರದ ಅವಿಭಾಜ್ಯ ಅಂಗ, ಕಾಶ್ಮೀರಕ್ಕೆ ಅಫ್‌ಘಾನಿಸ್ತಾನದೊಡನೆ ಗಡಿ ಇದೆ ಎಂದು ಮುಷರಫ್‌ರವರಿಗೆ ತಿಳಿಸುವ ಧೈರ್ಯ ಮಾಡಿಯಾರೆ ? ನಮ್ಮದೇ ಸ್ವತಂತ್ರ ವಿದೇಶಾಂಗ ನೀತಿಯಿದೆ, ನಮ್ಮದೇ ಹಿತಾಸಕ್ತಿಗಳಿವೆ, ಅವನ್ನೂ ನಾವೇ ರಕ್ಷಿಸಿಕೊಳ್ಳುತ್ತೇವೆ ಎಂದು ಹೇಳುವ ಢೋಂಗಿತನವಿದ್ದರೆ ಸಾಲದು, ಅದನ್ನು ಕಾರ್ಯಗತಗೊಳಿಸುವ ನೀತಿ ಬೇಕು. ಅದಿಲ್ಲದಿದ್ದರೆ ಭಾಜಪ ತನ್ನ ಅಧಿಕಾರ ಬಿಟ್ಟುಕೊಡುವುದು ರಾಷ್ಟ್ರದ ಹಿತಕ್ಕೆ ಒಳ್ಳೆಯದು.

ರಾಷ್ಟ್ರದ ವಿದೇಶಾಂಗ ನೀತಿಯನ್ನು ಇಂದು ರಾಷ್ಟ್ರವನ್ನು ಆಳುತ್ತಿರುವ ಅಲ್ಪಸಂಖ್ಯಾತ ಪಕ್ಷವು ಹಿಗ್ಗಾಮುಗ್ಗ ಎಳೆದಾಡುತ್ತಿರುವಾಗ ರಾಷ್ಟ್ರದ ವಿರೋಧ ಪಕ್ಷಗಳೂ ಜನತಾ ಚಳುವಳಿಗಳೂ ಕೈಲಾಗದವರಂತೆ ನೋಡುತ್ತಾ ಕುಳಿತಿರುವುದು ನಾಚಿಕೆಗೇಡು. ಕಳೆದ ಹತ್ತು ವರ್ಷಗಳಿಂದ ಅಭದ್ರವಾಗಿರುವ ಕೇಂದ್ರ ಸರ್ಕಾರ ಲೋಕಸಭೆಯನ್ನು ಅಶಕ್ತವನ್ನಾಗಿಸಿದೆ. ಇಂಥ ಸಂದರ್ಭದಲ್ಲಿ ಜನತೆ ಪರಿಣಾಮಕಾರಿ ಸಾಮೂಹಿಕ ಚಳುವಳಿಗಳನ್ನು ವ್ಯಾಪಕವಾಗಿ ನಡೆಸಿ, ಆಳುವವರ ಮೇಲೆ ಒತ್ತಡ ತರುವುದು ಅತ್ಯಗತ್ಯ. ಆಳುವ ಭಾಜಪ ಒಂದು ವಿಚಿತ್ರ ತರ್ಕ ಮುಂದಿಟ್ಟಿದೆ. ಸರ್ಕಾರ ಅಮೆರಿಕದ ಅಫ್‌ಘನ್ ಯುದ್ಧಕ್ಕೆ ಸಂಪೂರ್ಣ ಬೆಂಬಲ ಸೂಚಿಸಿರುವುದರಿಂದ ಯುದ್ಧ ವಿರೋಧಿ ಶಾಂತಿ ಚಳುವಳಿ ನಡೆಸುವವರು ಸರ್ಕಾರದ ವಿರೋಧಿಗಳೆಂದು ದೆಹಲಿಯಲ್ಲಿ ಅಂಥವರನ್ನು ಕೈದು ಮಾಡಿ ದಬ್ಬಾಳಿಕೆ ನಡೆಸಿದೆ. ಸ್ವದೇಶಿ ಭಕ್ತರಿಗೆ ಸ್ವದೇಶದ ಹಿತ, ಮರ್ಯಾದೆ, ಆತ್ಮಗೌರವದ ಮಾರ್ಗ ಯಾವುದೆಂದೂ ತಿಳಿಯದೇ ಹೋಯಿತೆ ? ಮುಸಲ್ಮಾನರಿಗೂ ಕ್ರೈಸ್ತ ಧರ್ಮದವರಿಗೂ ಅವರವರ ಧರ್ಮಗ್ರಂಥಗಳನ್ನು ಹೇಗೆ ಪಠಿಸಬೇಕೆಂದು ಉಪನ್ಯಾಸ ನೀಡುತ್ತಿರುವ ಪರಿವಾರದವರು ಇಂದಿನ ಅಮೆರಿಕದ ಯುದ್ಧ ಅವರೇ ಅಲ್ಲಗಳೆದಿದ್ದರೂ, ಇಸ್ಲಾಂ ವಿರುದ್ಧ ಯುದ್ಧವೆಂದು ಬೊಬ್ಬೆಯಿಡುತ್ತಿರುವ ಅಪಾಯಕಾರಿ ಬೆಳವಣಿಗೆಯನ್ನು ಹುಟ್ಟಡಗಿಸಬೇಕೆಂಬುದು ತುಂಬಾ ತುರ್ತಿನ ಕೆಲಸ.

ಭಯೋತ್ಪಾದನೆಯೆಂಬುದು ಹಲವೆಡೆಗಳಲ್ಲಿ ಸ್ವಾತಂತ್ರ್ಯವನ್ನು ಮೊಟಕುಗೊಳಿಸಿದಾಗ ಉದ್ಭವಿಸಿರುವ ಪ್ರತಿಕ್ರಿಯಾ ಸ್ವರೂಪದ ಪ್ರಕ್ರಿಯೆ. ''ಶಾಶ್ವತ ಸ್ವಾತಂತ್ರ್ಯ''ವೆಂದು ತಮ್ಮ ಮಿಲಿಟರಿ ಕಾರ್ಯಾಚರಣೆಗೆ ಹೆಸರಿಟ್ಟಿರುವ ಅಮೆರಿಕ ಮತ್ತೆ ಮತ್ತೆ ತಿಳಿಯಬೇಕಾದುದು ''ಸ್ವಾತಂತ್ರ್ಯ ಮತ್ತು ಪ್ರಗತಿ ಇಂದು ಅವಿಭಾಜ್ಯ'' ಎಂಬುದನ್ನು. ಅದನ್ನು ಉಪೇಕ್ಷಿಸಿ, ಇತರರ ಆರ್ಥಿಕ ಪ್ರಗತಿ ತನ್ನ ಸ್ವಂತ ಪ್ರಗತಿಗೆ ಧಕ್ಕೆ ಎಂದು ಭಾವಿಸಿದರೆ ಭಯೋತ್ಪಾದಕ ಪ್ರತಿಕ್ರಿಯೆ ಹಲವು ಹತ್ತು ಅನಿರೀಕ್ಷಿತ ಮಾರ್ಗಗಳಲ್ಲಿ ತಲೆ ಎತ್ತುತ್ತಲೇ ಇರುತ್ತದೆ. ಆಳುವ ವರ್ಗ ಅಂಥ ಪರಿಸ್ಥಿತಿಯಲ್ಲಿ ವಿಪತ್ಕಾರಕ ದಮನನೀತಿ ಅನುಸರಿಸಬಹುದು. ಆದರೆ ವಿಶಾಲ ಜನತೆ ಅದಕ್ಕೆ ಅವಕಾಶವಾಗದಂತೆ, ಪರಿಸ್ಥಿತಿಯನ್ನು ಸರಿಪಡಿಸುವಂತೆ ತಮ್ಮ ಸರಕಾರಗಳ ವಿರುದ್ಧ ಪ್ರಚಂಡ ಚಳುವಳಿಗಳ ಮೂಲಕ ಒತ್ತಡ ತರಬೇಕು. ಸಾಮಾಜಿಕ ಶಾಂತಿ ಬಯಸುವ ಅಮೆರಿಕದ ಜನತೆ ಮೊದಲು ಈ ಕೆಲಸ ಮಾಡಬೇಕು. ಯುದ್ಧ ಯಾವುದನ್ನೂ ಸರಿಪಡಿಸಿಲ್ಲ, ಈಗಲೂ ಸರಿಪಡಿಸುವುದಿಲ್ಲ.

*- ಕೆ. ಎಸ್. ಪಾರ್ಥಸಾರಥಿ*

* * *

*ಯೌವನಂ ಧನಸಂಪತ್ತಿಃ ಪ್ರಭುತ್ವಂ ಅವಿವೇಕಿತಾ ।*
*ಏಕೈಕಮಪ್ಯನರ್ಥಾಯ ಕಿಮು ಯತ್ರ ಚತುಷ್ಟಯಮ್ ॥*

ಯೌವ್ವನ ಮದ, ಅಪಾರ ಐಶ್ವರ್ಯ, ತಡೆಯಿಲ್ಲದ ಅಧಿಕಾರ, ಅವಿವೇಕ – ಇವು ಒಂದೊಂದೂ ಅನರ್ಥಕಾರಿಗಳೇ. ಇವು ನಾಲ್ಕೂ (ಅಮೆರಿಕದಲ್ಲಿ ಸೇರಿರುವಂತೆ) ಒಬ್ಬನಲ್ಲೇ ಕೂಡಿಬಿಟ್ಟರೆ ಏನೆಲ್ಲಾ ಅನಾಹುತ ಆದೀತು !

ತಿಂಗಳ ಪತ್ರಿಕೆ
ಹೊಸತು
ನಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ. ೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯ ✆ : ೨೨೫೧೩೪೮೨
ಕೆಂಪೇಗೌಡ ವೃತ್ತದ ಬಳಿ
ಬೆಂಗಳೂರು - ೫೬೦ ೦೦೯ ✆ : ೨೮೭೨೩೮೫
ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧ ✆ : ೪೪೧೦೦೬
ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪ ✆ : ೬೨೪೯೦೪
ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨ ✆ : ೨೪೩೦೨




## ಕುದುರೆಮುಖ

ಕುದುರೆಮುಖ ಚಳುವಳಿ ತೀವ್ರಗೊಳ್ಳುವ ಸಂದರ್ಭದಲ್ಲಿ ಸಿದ್ದನಗೌಡರು ಒಂದು ವಾಸ್ತವಿಕ ಹಿನ್ನೆಲೆಯನ್ನಿಟ್ಟುಕೊಂಡು, ಸಮಸ್ಯೆಯನ್ನು ವಿವೇಚನಾತ್ಮಕವಾಗಿ ಚೆನ್ನಾಗಿ ಅವಲೋಕಿಸಿದ್ದಾರೆ. ಇದು ಚಳುವಳಿಯ ವಿರೋಧವಾಗಲಿ ಪರವಾಗಲಿ ಅಲ್ಲ, ಎರಡನ್ನೂ ಬದಿಗಿಟ್ಟು ಚಳುವಳಿಯಲ್ಲಿ ಪಾಲ್ಗೊಳ್ಳುವವರಿಗೆ ಚಳುವಳಿಯ ಹಿಂದಿರುವ ಮೂಲ ವಿಷಯ ತಿಳಿಸಲು ಪ್ರಯತ್ನಿಸಿದ್ದಾರೆ. ವಿಷಯ ತೆಗೆದುಕೊಂಡು ಸಮಸ್ಯೆಯನ್ನು ಅರ್ಥಮಾಡಿಕೊಂಡು ನಿಮ್ಮನ್ನು ನೀವು ಜಿಜ್ಞಾಸೆಗೆ ತೊಡಗಿಸಿಕೊಂಡು ಖಚಿತ ನಿಲುವು ಪಡೆಯಲು ಸೂಚ್ಯವಾಗಿ ಕರೆ ಕೊಟ್ಟಿದ್ದಾರೆ. ಸ್ವಾಗತಾರ್ಹವಾದದ್ದು. ಈ ವಿಷಯದ ಹಿನ್ನೆಲೆಯಲ್ಲಿ ಚಿಂತನಶೀಲರಿಂದ ಇನ್ನಷ್ಟು ವಿವೇಚನಾತ್ಮಕ ಲೇಖನಗಳು ಈ ಪತ್ರಿಕೆಯ ಮೂಲಕ ಬರುವುದು ಒಳ್ಳೆಯದು.

*ಜಮಖಂಡಿ* — *ಅರ್ಜುನ ಕೋರಟಕರ*

ಸೆಪ್ಟೆಂಬರ್ ೨೦೦೧ ತಿಂಗಳ 'ಹೊಸತು' ಓದಿದೆ. ಉತ್ತಮ ಲೇಖನಗಳಿಂದ . ಮೂಡಿಬಂದಿದೆ. ಸಂಪಾದಕೀಯ ಚೆನ್ನಾಗಿದೆ. ನೀವೂ ಬೇರೆ ಬೇರೆ ಲೇಖನಗಳ ಕುರಿತು ಬರೆಯಿರಿ ಹಾಗೂ ಸಮಾಲೋಚಕ ಮಂಡಳಿಯ ಸದಸ್ಯರಿಂದಲೂ ಇಂದಿನ ೩ನೇ ಮಹಾಯುದ್ಧದ ಪ್ರಾರಂಭದಲ್ಲಿರುವ ಜಗತ್ತಿನ ಕುರಿತು ದೇಶದ ಭಯೋತ್ಪಾದನೆ, ವಿಶ್ವ ಭಯೋತ್ಪಾದನೆ ಕುರಿತು ಉತ್ಕೃಷ್ಟ ಲೇಖನಗಳನ್ನು ಬರೆಯಿಸಿರಿ.

ಇಂದು ಮತ್ತೊಮ್ಮೆ ಜನರಲ್ಲಿ ಅರಿವು ಮೂಡಿಸುವ ಕೆಲಸ, ಜಾಗೃತಿಗೊಳಿಸುವ ಕಾರ್ಯ ಸಾಗಬೇಕಾಗಿದೆ. ಈಗ ಎಡಪಂಥೀಯ, ರೈತ, ದಲಿತ, ಬಂಡಾಯ, ಪ್ರಗತಿಪರ ಎಲ್ಲಾ ಮನಸ್ಸುಗಳು ಒಂದಾಗಿ ಮತಾಂಧ, ಜಾತಿವಾದಿಗಳನ್ನು ಮೆಟ್ಟಬೇಕು. ಎಲ್ಲಾ ತಾತ್ವಿಕ ಭಿನ್ನಾಭಿಪ್ರಾಯಗಳನ್ನು ಬದಿಗೊತ್ತಿ ಬೀದಿಗಿಳಿದು ಹೋರಾಡಬೇಕಾಗಿದೆ.

ಉದ್ಯೋಗ ಕೊಡದ, ಅನ್ನ ನೀಡದ, ಭರವಸೆ ಮೂಡಿಸದ ಈ ಸರ್ಕಾರಗಳು ಜನವಿರೋಧಿ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವುದರಲ್ಲಿ ನಿರತವಾಗಿವೆ. ಜನರ ಅಮಾಯಕತೆ, ಬೌದ್ಧಿಕ ದೀವಾಳಿತನ ಕಂಡರೆ ಭಯವಾಗುತ್ತದೆ.

ವೈಚಾರಿಕ ಬರಹ, ಲೇಖನ, ಕವನ ಹೆಚ್ಚು ಹೆಚ್ಚು ತೀಕ್ಷ್ಣವಾಗಿ ಉಗ್ರವಾಗಿ ಮತ್ತಾಳ ಮತಾಂಧರ ಕಣ್ಣು ತೆರೆಸಲು ಸಹಾಯಕವಾಗುವಂತೆ ಮೂಡಿಬರಲಿ.

''ಹೊಸತು ಪತ್ರಿಕೆ ಚಿರಾಯುವಾಗಲಿ''

*ಗದಗ* — *ಹನುಮಂತಪ್ಪ ನಾಗೋಲಿ*

ಮುಕ್ಕಾಲು ಪಾಲು ವಿಶ್ವವೇ ಅಮೆರಿಕಾಪರವಾದ ಒಂದು ಬಗೆಯ 'ಸಕ್ಷೇಮ'ದ ಹುಸಿ ಸಹಾನುಭೂತಿಯ ಸಮೂಹ ಸನ್ನಿಗೆ ಬಿದ್ದು ಮಾತಾಡುತ್ತಿರುವಾಗ, ಎಲ್ಲಾ ಬಗೆಯ ಮಾಧ್ಯಮಗಳೂ ಅದನ್ನೇ ಲೊಚಗುಟ್ಟುತ್ತಿರುವ ಹೊತ್ತಿನಲ್ಲಿ 'ಹೊಸತು' (ಅಕ್ಟೋಬರ್ ೨೦೦೧)ವಿನ ಸಂಪಾದಕೀಯ 'ದೊಡ್ಡಣ್ಣ'ನ ಸ್ವಾರ್ಥ ಒಳಹುನ್ನಾರಗಳನ್ನು ಬಯಲಿಗೆ ನಿಲ್ಲಿಸಿದೆ. ಅಮೆರಿಕಾದ ಹಳಿ ಹುಳುಕುಗಳನ್ನು ಬೇಕೆಂದೇ ಮರೆತು ಮೈಮೇಲೆ ಬಿದ್ದು ಜೊತೆಗಾರನ 'ಪೋಜು' ಕೊಡುವ ಭಾರತಕ್ಕೆ ನಾಚಿಕೆಯಾಗಬೇಕು. ಹಾಗೆಂದು ಅಮಾಯಕರ ಮೇಲಿನ ಭಯೋತ್ಪಾದನೆಯನ್ನು ಯಾವ ಪಾಷಾಣಹೃದಯಿಯೂ ಸಮರ್ಥಿಸಲಾರ. ಭಯೋತ್ಪಾದನೆಯ ಹಿಂದಿನ ಪೋಷಕರ ಕ್ರೂರ ಲೆಕ್ಕಾಚಾರಗಳನ್ನು ಮುಂದಿಟ್ಟುಕೊಂಡು ಮಾತಾಡಬೇಕು.

*ತಗಡೂರು* — *ಮಂಜುನಾಥ್ ಗೀತಾ*




### *'ಹಿಗ್ಗು'*

ಹಿಗ್ಗು ಹಿಗ್ಗೆನ್ನುತ್ತ ಹೊರಗೇತಕರಸುವೆಯೊ ಗುಗ್ಗು?
ಕೊಟ್ಟದ್ದು ಬೆಳೆಯುವುದ ಕಂಡಾಗ ನೀ ಹಿಗ್ಗುವೆಯೊ!
ಕೊಡದಿರಲು ಕೊಳೆತು ಬಗ್ಗಡವಾಗಿ ಮುಗ್ಗುವೆಯೊ -
ದಾನವೇ ಸಂತೃಪ್ತಿ ಅತ್ರಿಸೂನು.

* * *

ನನ್ನ 'ಐಷಾರಾಮದ ಆಳದಲ್ಲಿ' ಕೃತಿಯ ಕುರಿತ ವಿಮರ್ಶೆ ಹಾಗೂ ಓದುಗರೊಬ್ಬರ ಪ್ರತಿಕ್ರಿಯೆಯನ್ನು ಗಮನಿಸಿ ಇದನ್ನು ಬರೆಯುತ್ತಿದ್ದೇನೆ.

ನನ್ನ ಈ ಕೃತಿಯನ್ನು ಪರಿಚಯಿಸುತ್ತಾ ಇಂದಿರಾ ಕುಮಾರಿಯವರು 'ಸಾರಾ ಅಬೂಬಕರ್ ಅಮೆರಿಕಾವನ್ನು ಚಿನ್ನದ ಹೊನ್ನಿನ ನಾಡೆಂದು ವರ್ಣಿಸಿ ಅಲ್ಲಿನ ಜೀವನವನ್ನು ಸ್ವರ್ಗ ಸಮಾನ ಮಾತ್ರವಲ್ಲ ಸ್ವರ್ಗವೇ ಎಂದು ಬಣ್ಣಿಸಿದ್ದಾರೆ' ಎಂದು ಒಂದೇ ವಾಕ್ಯದಲ್ಲಿ ವಿಮರ್ಶಿಸಿದ್ದಾರೆ. ಚಿನ್ನದ ನಾಡೆಂದು ನಾನು ಬರೆದದ್ದು (ವರ್ಣಿಸಿದ್ದಲ್ಲ) ಕ್ಯಾಲಿಫೋರ್ನಿಯಾವನ್ನು. ಯಾಕೆಂದರೆ ೧೮೪೮ರಲ್ಲಿ ಅಲ್ಲಿನ ನದಿಯೊಂದರಲ್ಲಿ ಹೊಳೆಯುವ ಚಿನ್ನದ ಅದಿರು ಗೋಚರಿಸಿ, ಅಪಾರ ಚಿನ್ನ ದೊರಕಿದಾಗ ಜನರು ಅದನ್ನು 'ಚಿನ್ನದ ನಾಡು' ಎಂದು ಕರೆದರು (ಇಂದಿಗೂ ಆ ಪ್ರದೇಶಕ್ಕೆ ಇದೇ ಹೆಸರಿದೆ). ನಾನು ಈ ಗೋಲ್ಡ್ ಕಂಟ್ರಿಯನ್ನೇ ಚಿನ್ನದ ನಾಡೆಂದು ಹೇಳಿದೆನೇ ಹೊರತು ಇಡೀ ಅಮೆರಿಕಾ ಚಿನ್ನದ ನಾಡೆಂದು ನಾನೆಲ್ಲೂ ಬರೆದಿಲ್ಲ. ಅಲ್ಲಿನ ಜನರ ಬದುಕನ್ನು ಕಂಡು, ೧೬೪ಪುಟಗಳ ಇಡೀ ಪುಸ್ತಕದಲ್ಲಿ ಒಂದೆಡೆ ಮಾತ್ರ ಹಾಗೆ ಬರೆದಿದ್ದೇನೇ ಹೊರತು ಈ ೧೬೪ ಪುಟಗಳಲ್ಲೂ ಅಮೆರಿಕಾದ ಸುಖ ಜೀವನವನ್ನು ಹೊಗಳಿಲ್ಲ, ಅಲ್ಲಿನ ಕರಿಯರ ಬದುಕು, ಅಲ್ಲಿನ ಮೂಲ ನಿವಾಸಿಗಳನ್ನು ಬಿಳಿಯರು ಹೊಡೆದೋಡಿಸಿದ ಬಗೆ, ಮೆಕ್ಸಿಕೋದಿಂದ ಯು. ಎಸ್. ಎ.ಗೆ ನುಸುಳಿ ಬರುವವರ ಬವಣೆ ಮುಂತಾದುವುಗಳೆಲ್ಲವನ್ನೂ ಸಾಕಷ್ಟು ವರ್ಣಿಸಿದ್ದೇನೆ ಹಾಗೂ ದಕ್ಷಿಣ ಭಾಗದಲ್ಲಿದ್ದ ಕಂಡೂ ಕೇಳರಿಯದ ಕರಿಯರಿಗಾಗಿ, ಗುಲಾಮ ಪದ್ಧತಿಯ ರದ್ದತಿಗಾಗಿ ಉತ್ತರ ಭಾಗದ ಬಿಳಿಯರೇ ದಕ್ಷಿಣದ ಬಿಳಿಯರೊಡನೆ ಹೋರಾಡಿದ್ದು ನನಗೆ ಅತ್ಯಂತ ಪ್ರಮುಖ ಘಟನೆಯಾಗಿ ಕಂಡಿತು. ಅಲ್ಲಿ ಓದಿದ ಒಂದಿಬ್ಬರು ಮುಸ್ಲಿಂ ಲೇಖಕಿಯರ ಕೃತಿಗಳ ಕುರಿತೂ ನಾನು ಇದರಲ್ಲಿ ವಿವರಿಸಿದ್ದೇನೆ.

*ಮಂಗಳೂರು* — *ಸಾರಾ ಅಬೂಬಕರ್*

### ಬರಗಾಲದಲ್ಲಿ ನೆರವು !

ನೀವು ಠಾಕ್ರೆ ಬಗ್ಗೆ ಬರೆದಿರಿ. ಈಗ ಹುಬ್ಬಳ್ಳಿಗೆ ಹುಟ್ಟುಹಬ್ಬ ಆಚರಿಸಲು ಬಂದ ವಿಶ್ವ ಹಿಂದೂ ಪರಿಷತ್ ಅಧ್ಯಕ್ಷರು ಹಲವಾರು ಜೀವ ತಿಂದು ಡೆಲ್ಲಿಗೆ ಹಾರಿದ್ದಾರೆ. ಬರಗಾಲಕ್ಕೆ ಸರ್ಕಾರ ಏನು ಮಾಡಿದೆ ಎಂದು ಕೂಗುವ ಭಾಜಪ ತಾನೀಗ ಶ್ರೀ ಅಶೋಕ್ ಸಿಂಘಲ್‌ಗೆ ಲಕ್ಷಗಳ ಕಟ್ಟಿನ ಉಡುಗೊರೆ ನೀಡಿದೆ. ಅವರು ಅದನ್ನು ತಮ್ಮ ಕಿಸೆಗೆ ಹಾಕಿಕೊಂಡರಲ್ಲ, ಬರಗಾಲದಿಂದ ನೊಂದವರಿಗಾದರೂ ನೀಡಿದರೆ ? ಅದೂ ಇಲ್ಲ, ಇವರೆಂಥ ಜನ ! ಅಯೋಧ್ಯೆಯಲ್ಲಿ ಮಂದಿರ ಕಟ್ಟುತ್ತಾರಂತೆ. ಬಡವರ ರಕ್ತದಲ್ಲಿ, ದೇಹದಲ್ಲಿ, ಹಸಿದ ಹೊಟ್ಟೆಯ ಮೇಲೆ.

*ಆನೆಗುಂಡಿ* — *ವ. ರಾಧಾಕೃಷ್ಣ*

*(ಈ ತಿಂಗಳು – ೩ ನೇ ಪುಟದಿಂದ)*

ಹಿಡಿದು ತನಿಖೆ ನಡೆಸಿದಾಗ ಡಾ॥ ರಾಜಕುಮಾರ್ ಕಾಡಿನಲ್ಲಿದ್ದಾಗ ಯಾವಾಗಲೂ ಅವರು ಕಾಡಿನಲ್ಲೇ ಇರುತ್ತಿರಲಿಲ್ಲ, ಗೋಪಾಲ್ ಬಂದಾಗ ಕಾಡಿಗೆ ಕರೆತರಲಾಗುತ್ತಿತ್ತು, ಬೇರೆಯಂತೆ ಅವರನ್ನು ಒಂದು ತೋಟದ ಮನೆಯಲ್ಲಿ ಇಡಲಾಗುತ್ತಿತ್ತು ಎಂದು ಹೇಳಿದ್ದಾರೆಂದು ವರದಿಯಾಗಿದೆ. ಮಾನ್ಯ ಡಾ॥ ರಾಜ್‌ಕುಮಾರ್ ಇದಕ್ಕೆ ಪ್ರತಿಯಾಗಿ ಏನೂ ಹೇಳಿದಂತೆ ತೋರುತ್ತಿಲ್ಲ. ಮಾಧ್ಯಮಪತಿಗಳು ಈ ಹೇಳಿಕೆಯ ಸತ್ಯಾಸತ್ಯತೆಗಳನ್ನು ಜನರಿಗೆ ತಿಳಿಸಿಕೊಡಲು ಮುಂದಾಗಿಲ್ಲದಿರುವುದು ಆಶ್ಚರ್ಯಕರವೆನಿಸುತ್ತದೆಯೆ ? ದಿನಕರ್ ದಿನಚರಿ ಪ್ರಕಟವಾದರೆ ಸತ್ಯ ತಿಳಿಯಬಹುದೇನೋ, ಅದು ಬೇರೆ ಸಂಗತಿ. ಆದರೆ ವೀರಪ್ಪನ್‌ನಿಂದ ಡಾ॥ ರಾಜಕುಮಾರ್ ಅವರಿಗೆ ಸಹನೀಯ ಆತಿಥ್ಯ ದೊರೆಯಿತೆಂಬುದೇ ಸಮಾಧಾನ !

* * *

ಖಾಸಗೀಕರಣವು ಏನು ಮಾಡಿದರೂ ಶ್ರೇಷ್ಠವೆಂಬ ಐತಿಹ್ಯವನ್ನು ದೇಶದಲ್ಲಿ ಒಂದು ದಶಕದಿಂದ ಹರಡಲಾಗುತ್ತಿದೆ. ಸದ್ಯದ ಕರ್ನಾಟಕ ಸರ್ಕಾರದ ನೇತಾರರು ಇದರಲ್ಲಿ ಶ್ರದ್ಧೆ ಇಟ್ಟಿದ್ದಾರೆ. ೧೯೯೦ರಲ್ಲಿ ಕೃಷಿ ವಿಶ್ವವಿದ್ಯಾಲಯವನ್ನು ಖಾಸಗಿಗೆ ವಹಿಸಬೇಕೆಂಬ ಮಾತು ಬಂದು ನಿಂತುಹೋಯಿತು. ಈಗ ವಿದ್ಯುತ್ ವಿತರಣೆಯನ್ನು, ಆಮೇಲೆ ಬೆಂಗಳೂರಿನಲ್ಲಿ ನೀರು ಸರಬರಾಜನ್ನು , ಖಾಸಗಿಗೆ ವಹಿಸುವ ಉದ್ದೇಶವಿದೆಯೆಂದು ಮುಖ್ಯಮಂತ್ರಿಗಳು ಆಗಾಗ್ಗೆ ಹೇಳುತ್ತಿರುತ್ತಾರೆ. ಬೆಂಗಳೂರಿನಲ್ಲಿ ವಾಹನ ಸಂಚಾರವನ್ನು ಎಲ್ಲೆಲ್ಲಿ ಏಕಮುಖ ಮಾಡಬೇಕೆಂಬ ಸಲಹೆ ನೀಡಲು ಅಮೆರಿಕಾದ ಒಂದು ಕಂಪೆನಿಗೆ ಐವತ್ತು ಲಕ್ಷ ರೂಪಾಯಿಗಳನ್ನು ಕೊಡಲಾಗಿದೆ. ಇದು ಬರಿ ನಾಚಿಕೆಗೇಡಿನ ಪ್ರಸಂಗವಲ್ಲ, ಇದು ಖಜಾನೆಯ ಲೂಟಿ. ನಮ್ಮಲ್ಲಿ ಇಂತಹ ಸಲಹೆ ಕೊಡುವ ಯೋಗ್ಯತೆಯುಳ್ಳ ಯಾವ ಪರಿಣತರೂ ಇಲ್ಲವೆಂದು ಇದರರ್ಥವಲ್ಲವೆ ? ಪರಿಣತರೆಲ್ಲಾ ತಲೆ ಚಚ್ಚಿಕೊಳ್ಳಲಿ ! ಈ ಸಲಹೆ ಜಾರಿಗೆ ಬಂದು ನಾಗರಿಕರು ಮತ್ತು ಸರ್ಕಾರ ಎಷ್ಟು ಪೆಟ್ರೋಲ್ ದಂಡ ಮಾಡುತ್ತಿದ್ದಾರೆಂಬುದು ಎಲ್ಲರಿಗೂ ತಿಳಿದಿದೆ. ಇದಾದ ನಂತರ ದೆಹಲಿಯಲ್ಲಿದ್ದಂತೆ ಸಿ. ಎನ್. ಜಿ. ನಿಯಮ ನಮ್ಮ ರಾಜ್ಯದ ಎಲ್ಲ ನಗರಗಳಿಗೂ ಅನ್ವಯಿಸಬಹುದು. ಈ ರೀತಿಯ ಭಯೋತ್ಪಾದನೆಗಳಿಂದ ಬೊಕ್ಕಸಕ್ಕೆ ನಷ್ಟ ಮತ್ತು ಜನಕ್ಕೆ ಕಷ್ಟ.

ವಿದ್ಯುತ್ ಸರಬರಾಜನ್ನು ಖಾಸಗಿಗೊಳಿಸುವ ಮುನ್ನ ಆಂಧ್ರ ಪ್ರದೇಶದ ಒಂದು ಅನುಭವವನ್ನು ಅರ್ಥಮಾಡಿಕೊಳ್ಳಬೇಕು. ಸ್ಪೆಕ್ಟ್ರಂ ವಿದ್ಯುತ್ ಉತ್ಪಾದನಾ ಸಂಸ್ಥೆಯು ಆಂಧ್ರದ ವಿದ್ಯುತ್ ಕ್ಷೇತ್ರವನ್ನು ಪ್ರವೇಶಿಸಿ ಒಂದು ಒಪ್ಪಂದ ಮಾಡಿಕೊಂಡಿತು.

ಒಪ್ಪಂದದ ನಂತರ ಮೊದಲು ತೀರ್ಮಾನವಾಗಿದ್ದ ಬೆಲೆಯ ಎರಡರಷ್ಟು ಬೆಲೆಯನ್ನು ಕೇಳಿತು. ಅದಕ್ಕೆ ಒಪ್ಪಿಗೆಯಿಲ್ಲದಿದ್ದರೆ ಉತ್ಪಾದನೆಯೇ ಸಾಧ್ಯವಿಲ್ಲವೆಂದು ಬೆದರಿಕೆ ಹಾಕಿತು. ಇದು ಎಂದೋ ನಡೆದ ಘಟನೆಯಲ್ಲ, ಇತ್ತೀಚಿನ ಈ ಘಟನೆಯಲ್ಲಿ ಆ ಖಾಸಗಿ ಸಂಸ್ಥೆಯ ಲೆಕ್ಕಪತ್ರಗಳನ್ನು ಪರಿಶೋಧಿಸಿರುವ ಬಿಲಿಮೋರಿಯ ಕಂಪೆನಿಯು ಒಂದು ವಿಷಯ ಹೊರಹಾಕಿದೆ. ಅದೇನೆಂದರೆ ಆ ಕಂಪೆನಿಯು ತಾನು ಖರ್ಚು ಮಾಡಿರುವ ಹಣವನ್ನು ಸುಳ್ಳಾಗಿ ಎರಡರಷ್ಟು ನಮೂದಿಸಿದೆ ಎಂಬುದು. ಅಂದರೆ ವಿನಾಕಾರಣ ವಿದ್ಯುತ್ ಬೆಲೆಯಲ್ಲಿ ಹೆಚ್ಚಳವನ್ನು ಕೇಳುತ್ತಿದೆ ಎಂದಾಯಿತು. ಮೊದಲು ಯೂನಿಟ್‌ಗೆ ರೂ. ೨.೧೩ ಎಂದಿದ್ದುದು ಈಗ ರೂ. ೪.೩೦ ಆಗಬೇಕೆಂದು ಒತ್ತಾಯಿಸುತ್ತಿದೆ. ಈ ಧೂರ್ತ ಕಂಪೆನಿಗೆ ಕಾರ್ಯ ನಿರ್ವಹಣೆಯ ಆಜ್ಞೆ ನೀಡುವ ಮುನ್ನ ರಾಷ್ಟ್ರೀಯ ಥರ್ಮಲ್ ಪವರ್ ಕಾರ್ಪೊರೇಷನ್‌ಗೆ ಇದೇ ಉತ್ಪಾದನಾ ಕೆಲಸವನ್ನು ವಹಿಸಲಾಗಿತ್ತು. ಆ ಸರ್ಕಾರಿ ಸಂಸ್ಥೆ ಭೂಮಿಯನ್ನು ಖರೀದಿಸಿ ಕೆಲಸ ಆರಂಭಿಸಿತ್ತು. ಆದರೆ ಯಾವುದೋ ಲಾಭಕ್ಕೆ ಅದನ್ನು ರದ್ದುಮಾಡಿ 'ಶ್ರೇಷ್ಠ' ಖಾಸಗಿ ಸಂಸ್ಥೆಗೆ ಆಜ್ಞೆ ನೀಡಲಾಯಿತು. ಈಗ ಪೇಚಿನ ಪ್ರಸಂಗ ಸರ್ಕಾರಕ್ಕೆ ಮತ್ತು ಹಣ ತೆತ್ತುವ ಫಜೀತಿ ಸಾರ್ವಜನಿಕರಿಗೆ ! ಚಂದ್ರಬಾಬು ಮಾರ್ಗದಲ್ಲಿ ಮುನ್ನಡೆಯಲು ಶ್ರೀ. ಕೃಷ್ಣ ಈಗಲಾದರೂ ನಿರಾಕರಿಸಬೇಕು. ಇರುವ ವ್ಯವಸ್ಥೆಯನ್ನೇ ಉತ್ತಮಗೊಳಿಸಿದರೆ ಸಾಕು.

* * *

ಹೋದೆಯಾ ಶನಿ ಎಂದರೆ ಬಂದೆ ಗವಾಕ್ಷೀಲಿ ಎನ್ನುವಂತೆ ಜಾರ್ಜ್ ಫರ್ನಾಂಡೀಸ್ ಮತ್ತೆ ರಕ್ಷಣಾ ಸಚಿವ. ವಾಜಪೇಯಿ ಸಂಸ್ಕೃತಿ ಎಷ್ಟು ಹೀನಾಯ ಮತ್ತು ಪ್ರಜಾಪ್ರಭುತ್ವ ವಿರೋಧಿ ಎಂಬುದು ಇದರಿಂದ ಮತ್ತೆ ಸಾಬೀತಾಗಿದೆ. ಅಧಿಕೃತ ನಿವಾಸವನ್ನೇ ಅತಿಭ್ರಷ್ಟ ವ್ಯವಹಾರಗಳನ್ನು ಕುದುರಿಸಲು ಬಿಟ್ಟುಕೊಟ್ಟಿದ್ದ ಜಾರ್ಜ್ ಇನ್ನುಮುಂದೆ ಜಯಾ ಜೇಟ್ಲಿ ಅವರಿಗೆ ಹೊರಗೆ ವ್ಯವಹಾರವನ್ನು ಎಚ್ಚರದಿಂದ ನಡೆಸುವಂತೆ ಹೇಳುತ್ತಾರೆ ! ಜೈ ಸಮತಾ ಜೈ ಜೆ.ಪಿ. ಎಂದು ಜಾರ್ಜ್ ಭುಜ ಕುಣಿಸಬಹುದು ! ಅಮೆರಿಕಾಕ್ಕೆ ವಾಜಪೇಯಿ ನೀಡಿರುವ ಬಳುವಳಿ ಇದು. ಬರೋಡ ಡೈನಮೈಟ್ ಫುಸ್ ಎನ್ನುವುದಿಲ್ಲ.

## ಸಾಮ್ರಾಜ್ಯಶಾಹಿ ಸಾಮ್ರಾಜ್ಯಕ್ಕೆ ಬೆಂಕಿ ಬಿತ್ತು

ಮನುಷ್ಯ ಕುಲವೇ ತಲೆತಗ್ಗಿಸುವಂತಾ ಅಮಾನುಷ ಕೃತ್ಯವಿದು. ಹಾಗಂತ ಜಗತ್ತೇ ಮಮ್ಮಲ ಮರುಗುತ್ತಿದೆ. ಜಗತ್ತಿನ ಬದುಕನ್ನೇ ನಿಯಂತ್ರಿಸಬಯಸಿದ್ದ ಯುದ್ಧದಾಹಿ ಅಮೆರಿಕಾದ ಮೇಲೆ ನಡೆದ ಭಯೋತ್ಪಾದಕರ ವಿಕೃತ ದಾಳಿಗೆ ಸಿಲುಕಿ ಸಾವಿರಾರು ಜೀವಗಳು ಕ್ಷಣಾರ್ಧದಲ್ಲಿ ಉರಿದಾಗಲಾದರೂ ವಿಷಾದ ಎಂದರೇನೆಂದು ಅರ್ಥವಾಗಿರಬಹುದೇನೋ. ಪ್ರಚೋದನೆ ನೀಡುವಾಗ ಅಮೆರಿಕಾದ ಅಧ್ಯಕ್ಷ ಕಂಡ ಖುಷಿ ಅಥವಾ ಸಮಾಧಾನ ಈಗ ಕಾಣಲಾಗುತ್ತಿಲ್ಲ, ಯಾಕೆಂದರೆ ಪ್ರಪಂಚದ ಉಗ್ರಗಾಮಿಗಳನ್ನು ಹುರಿದುಂಬಿಸುತ್ತಿದ್ದ ಅಮೆರಿಕಾ ನಾನು ಜಗತ್ತನ್ನು ನಿಯಂತ್ರಿಸುತ್ತಿದ್ದೇನೆಂಬ ಭ್ರಮೆಯಲ್ಲೇ ತನ್ನ ಹಿರಿತನದ ಪ್ರತಿಷ್ಠೆ ಕಳೆದುಕೊಂಡು ಮಂಗಳವಾರ ನಡುಗಿಹೋಯಿತು.

ಪ್ರಪಂಚದ ಬದುಕನ್ನು, ರಾಜಕೀಯವನ್ನು ತನ್ನ ಪ್ರಭುತ್ವದ ಅಂಕುಶದಲ್ಲಿ ಹಿಡಿದಿಟ್ಟುಕೊಳ್ಳುವ ಭರದಲ್ಲೇ ತನ್ನ ಭವಿಷ್ಯಕ್ಕೆ ಎಡವಟ್ಟಾಗಬಹುದಾದ ಸೂಕ್ಷ್ಮತೆಯ ಬಗ್ಗೆ ಗಮನಿಸದಿರುವುದು ಅಮೆರಿಕಾದ ಬೌದ್ಧಿಕ ಅಧಃಪತನಕ್ಕೆ ನಾಂದಿ ಹಾಡಿತು. ಅಫ್ಘಾನಿಸ್ಥಾನದ ಹುಟ್ಟಿಗೆ, ಮುಸ್ಲಿಂ ಮೂಲಭೂತವಾದಿಗಳ ನರ್ತನಕ್ಕೆ, ಭಾರತದ ವಿರುದ್ಧದ ಸಂಚಿಗೆ, ತಾನೇ ಬಲಿಯಾಗಿ ಸ್ವಯಂಕೃತ ಅಪರಾಧಿಯಾಗಿ ಅಮೆರಿಕಾ ಜಗತ್ತಿನ ನೊಂದ ಜನರೆದುರು ತಲೆತಗ್ಗಿಸುತ್ತದೆಂದು ಯಾರೂ ಭಾವಿಸಿರಲಿಲ್ಲ.

ಮಹಾಯುದ್ಧದ ಸಂದರ್ಭದಲ್ಲಿ ಜಪಾನಿನ ಮೇಲೆ ನಡೆಸಿದ್ದ ಅಮಾನುಷ ಕೃತ್ಯದಿಂದ ನಲುಗಿಹೋದ ಜಪಾನ್ ಈಗ ಚೇತರಿಸಿಕೊಳ್ಳುತ್ತಿದ್ದರೆ ಅಮೆರಿಕಾ ಕುಸಿಯತೊಡಗಿದೆ. ಅಂದು ಜಪಾನಿನ ಮುಗ್ಧ ನಾಗರಿಕರು ಅದೆಷ್ಟು ನೊಂದರು, ಅದೆಷ್ಟು ಲಕ್ಷ ಅಮಾಯಕರು ಗೋರಿಯಾದರು ಎಂಬ ಅರಿವಿರದೆ ತನ್ನ ಕೃತ್ಯದ ವಿಜಯೋತ್ಸವ ಆಚರಿಸಿಕೊಂಡಿತ್ತು. ಆಗ ಅಮೆರಿಕಾಗೆ ನೋವು ಎಂದರೇನೆಂದು ಅರ್ಥವಾಗಿರಲಿಲ್ಲ, ಸಾವಿನ ಹೆಬ್ಬಾಗಿಲ ಯಾತನೆಯ ಅರಿವಿರಲಿಲ್ಲ. ಯಾಕೆಂದರೆ ಅಮೆರಿಕಾಗೆ ಹಿಂಸೆ ನೀಡಿ ಅನುಭವವೇ ಹೊರತು ಹಿಂಸೆ ಅನುಭವಿಸಿದ ಉದಾಹರಣೆಗಳಿಲ್ಲ. ಅದು ಮೊನ್ನೆ ಅರ್ಥವಾಗಿರಬಹುದೆನಿಸುತ್ತದೆ.

ಹಾಗಂತ ನಾನೂ ಕೂಡ ಅಮೆರಿಕಾದ ಮೇಲೆ ಮೂಲಭೂತವಾದಿಗಳ ವಿಕೃತ ದಾಳಿಯನ್ನು ಸಮರ್ಥಿಸಿಕೊಳ್ಳುವುದಿಲ್ಲ. ಜೀವವಿರೋಧಿ ಧೋರಣೆಯನ್ನು ಮನುಷ್ಯ ಮಾನವೀಯ ನೆಲೆಗಟ್ಟಿನ ನೆಲೆಯಲ್ಲಿ ನಿಂತು ವಿರೋಧಿಸುವುದು ಅನಿವಾರ್ಯ. ಅಮೆರಿಕಾದ ಪ್ರಮುಖ ವಾಣಿಜ್ಯ ನಗರಗಳ ಮೇಲೆ ನಡೆಸಿದ ಉಗ್ರರ ದಾಳಿ ನಿಜಕ್ಕೂ ಅಮಾನವೀಯವಾದುದು. ಜಗತ್ತಿನ ವಾಣಿಜ್ಯ ಕೇಂದ್ರ ಬಿಂದುವನ್ನೇ ಗುರಿಯಾಗಿರಿಸಿ ಕೊಂಡಿದ್ದರ ಜೊತೆ ಕನಿಷ್ಠ ೩೦ ಸಾವಿರ ಮನುಷ್ಯ ಜೀವಿಗಳಿಗೆ ಸಾವಿನ ಹೆಬ್ಬಾಗಿಲು ತೆರೆದುಬಿಟ್ಟ ಕೃತ್ಯವಂತೂ ಅಮಾನುಷ. ಈ ಎಲ್ಲಾ ಕೃತ್ಯವೂ ಅಮೆರಿಕಾ ಸಾಕಿ ಬೆಳೆಸಿದ ಪಾಪದ ಫಲವೇ ಹೊರತು ಬೇರೇನೂ ಅಲ್ಲ.

ಏನೇ ಇರಲಿ ಅಮೆರಿಕಾದ ಮೇಲೆ ಮೂಲಭೂತವಾದಿಗಳ ಬರ್ಬರ ಕೃತ್ಯ ಯಾವ ಕುರಾನ್ ಕೂಡ ಸಹಿಸುವುದಿಲ್ಲ. ಧರ್ಮದ ಹೆಸರಿನಲ್ಲಿ ನಡೆಯುವ ನರಬಲಿ, ಅಮೆರಿಕಾದ ಮೇಲೆ ನಡೆದ ದಾಳಿ ಮನುಷ್ಯ ಕುಲದ ಮೇಲಾದ ಭೀಕರ ಅತ್ಯಾಚಾರ. ಈ ದಾಳಿಯನ್ನು ಅಮೆರಿಕ ಸೇಡಿನ ಕ್ರಮವಾಗಿ ಸ್ವೀಕರಿಸಿಬಿಟ್ಟರೆ ಪ್ರಪಂಚ ಮತ್ತೊಂದು ಮಹಾಯುದ್ಧವನ್ನೇ ಆಹ್ವಾನಿಸಿಬಿಡುವ ಭಯವನ್ನಂತೂ ತಳ್ಳಿಹಾಕುವಂತಿಲ್ಲ. ಈ ದಾಳಿಯನ್ನು ಪ್ಯಾಲೆಸ್ತೀನ್‌ಗಳು ಜಯದ ಸಂಕೇತವೆಂದು ಆಚರಿಸಿದ್ದು, ಸದ್ದಾಂ, ಖುಷಿಗೊಂಡದ್ದು, ನಿಜವಾದರೆ ಮುಂದೊದಗಬಹುದಾದ ಅಪಾಯದ ಕರೆಗಂಟೆಯಾಗಬಹುದು.

*ದಾವಣಗೆರೆ*

ಟಿ. ಎಸ್. ಷಣ್ಮುಖ

# ಸೆಕ್ಯುಲರಿಸಮ್ - ಒಂದು ಚರ್ಚೆ

೧೯೪೯ನೇ ಇಸವಿ ನವೆಂಬರ್ ತಿಂಗಳ ೨೬ನೇ ದಿನಾಂಕದಂದು ಭಾರತದ ನೂತನ ಸಂವಿಧಾನದ ಪ್ರಿಯಾಂಬಲನ್ನು ಅಂಗೀಕರಿಸಲಾಯ್ತು. ಆ ಪ್ರಿಯಾಂಬಲ್‌ನಲ್ಲಿ ಭಾರತದ ಪ್ರತಿಯೊಬ್ಬ ಪ್ರಜೆಗೂ ನ್ಯಾಯ, ಸ್ವಾತಂತ್ರ್ಯ, ಸಮಾನತೆ ಮತ್ತು ಭ್ರಾತೃತ್ವವನ್ನು ಒದಗಿಸಿ ಕೊಡುತ್ತೇವೆಂಬ ಆಶ್ವಾಸನೆಯೊಂದಿಗೆ ಭಾರತವನ್ನು 'ಸಾರ್ವಭೌಮ, ಸಮಾಜವಾದಿ, ಜಾತ್ಯಾತೀತ, ಜನತಾಂತ್ರಿಕ ಗಣರಾಜ್ಯ'ವಾಗಿ ರೂಪಿಸುವ ಆಶಯವನ್ನು ಪ್ರಕಟಿಸಲಾಯಿತು.

ಅಂದು ಸಮಾವೇಶಗೊಂಡಿದ್ದ ಸಂವಿಧಾನ ವಿದ್ವಾಂಸರ ಸಭೆಯಲ್ಲಿ 'ಸೆಕ್ಯುಲರ್' ಪದದ ಅರ್ಥ, ವ್ಯಾಪ್ತಿ, ಪ್ರಸ್ತುತತೆಗಳ ಬಗ್ಗೆ ಗೊಂದಲವಿತ್ತು. ಮತಭೇದವಿತ್ತು. ಸೆಕ್ಯುಲರ್ ಎಂಬ ಈ ಪದವು ಪಾಶ್ಚಿಮಾತ್ಯ ರಾಷ್ಟ್ರಗಳಿಂದ ಆಮದು ಮಾಡಿಕೊಂಡ ಅಗ್ಗದ ಸರಕೆಂದು ಕೆಲವರು ವಾದಿಸಿದ್ದರು. ಭಾರತದ ಅಲ್ಪಸಂಖ್ಯಾತರನ್ನು ತುಷ್ಟೀಕರಿಸುವುದಕ್ಕಾಗಿ ಧರಿಸಿದ ಹೊಸ ಮುಖವಾಡ ಅದೆಂದು ಕೆಲವರು ಟೀಕಿಸಿದ್ದರು. ಧಾರ್ಮಿಕ ನಂಬಿಕೆಗಳಲ್ಲಿ, ಜೀವನ ವಿಧಾನಗಳಲ್ಲಿ, ಸಾಂಸ್ಕೃತಿಕ ದೃಷ್ಟಿಕೋನಗಳಲ್ಲಿ - ಹೀಗೆ ಎಲ್ಲ ರಂಗಗಳಲ್ಲೂ ಬಹುಲತೆಯಿರುವ ಭಾರತದಂತಹ ಉಪಖಂಡದಲ್ಲಿ ಸೆಕ್ಯುಲರ್ ಸಿದ್ಧಾಂತವು ಪ್ರಸ್ತುತವೆನಿಸಬಲ್ಲುದೆ ? ಎಂದೂ ಅನೇಕರು ಹುಬ್ಬೇರಿಸಿದ್ದುಂಟು.

ಸಂವಿಧಾನ ಸ್ವೀಕೃತವಾಗಿ ೫೦ ವರ್ಷಗಳಾದರೂ ನಮ್ಮ ಬೌದ್ಧಿಕ ವಲಯ ಹೆಚ್ಚು ಬದಲಾಯಿಸಿಲ್ಲ. ಹೀಗಾಗಿ 'ಸೆಕ್ಯುಲರ್' ಪದದ ಹಿನ್ನೆಲೆ ಮತ್ತು ವ್ಯಾಪ್ತಿಯ ಕುರಿತು ಒಂದು ಹಿನ್ನೋಟ ಇಲ್ಲಿ ಪ್ರಸ್ತುತವೆನಿಸದೆ ಇರದು.

'ಸೆಕ್ಯುಲರಿಸಮ್' ಎನ್ನುವುದು ನಮ್ಮ ಸಂವಿಧಾನದಲ್ಲಿ ಕಂಡುಬರುವ ಒಂದು ಪದವಷ್ಟೇ ಅಲ್ಲ; ಅದಕ್ಕಿಂತ ಹೆಚ್ಚಿನ ವ್ಯಾಪ್ತಿ ಅದಕ್ಕುಂಟು. ಅದೊಂದು ಅರ್ಥಪೂರ್ಣವೂ, ಗಂಭೀರವೂ ಆದ ಕಲ್ಪನೆಯನ್ನು ಒಳಗೊಂಡಿರುವ ಪದ. ನಮ್ಮ ಜನರ ನಂಬಿಕೆ-ನಂಬಿಕೆಗಳ ಮಧ್ಯೆ ಬಿರುಕು ಬಿಟ್ಟು ಜನರು ಹೋಳು ಹೋಳಾಗುವುದನ್ನು ತಪ್ಪಿಸಬೇಕಾಗಿದ್ದರೆ ಈ ಪದದ ವ್ಯಾಪ್ತಿಯ ಗಂಭೀರ ಚಿಂತನೆ ನಡೆಯುವುದಗತ್ಯ.

ನಮ್ಮ ಸಂವಿಧಾನಕರ್ತರು ಸೆಕ್ಯುಲರ್ ಪದದ ವ್ಯಾಪ್ತಿಯನ್ನು ಮೊದಲು ಪರಿಗಣಿಸಿದ್ದು ೧೯೪೭-೪೯ರ ಅವಧಿಯಲ್ಲಿ. ಮತೀಯ ಹಿಂಸೆಯಿಂದ ದೇಶಕ್ಕೆ ದೇಶವೇ ಹತ್ತಿ ಉರಿಯತೊಡಗಿದ್ದ ಸಂದರ್ಭದಲ್ಲಿ. ಅಂದಿನ ದಿನಗಳಲ್ಲಿ ಸೆಕ್ಯುಲರಿಸಮ್ಮಿನ ಕಲ್ಪನೆ ಪ್ರಾಯೋಗಿಕವಾಗಿಯೇ ಇರಲಿಲ್ಲವೇಕೆ ? ಸಂವಿಧಾನಕರ್ತರ ದೂರದರ್ಶಿತ್ವ, ಮಾನವೀಯ ಅನುಕಂಪ ಮತ್ತು ರಾಷ್ಟ್ರೀಯ ಸಮಗ್ರತೆಯ ಕುರಿತು ಅವರಲ್ಲಿದ್ದ ಅಖಂಡ ವಿಶ್ವಾಸದ ಪ್ರತೀಕವಾಗಿ ಸೆಕ್ಯುಲರಿಸಮ್ಮಿನ ಕಲ್ಪನೆ ಮೂಡಿತು. ಧಾರ್ಮಿಕ ಅಸಹಿಷ್ಣುತೆ, ಮತೀಯ ದ್ವೇಷಗಳ ಗುಂಗಿನಲ್ಲಿ ಸುಸಂಸ್ಕೃತ ಜನವರ್ಗವು ಒಡೆದು ಹೋಳು ಹೋಳಾಗುವುದನ್ನು ತಪ್ಪಿಸುವುದಕ್ಕಾಗಿ ಸೆಕ್ಯುಲರಿಸಮ್ಮಿನ ಅಗತ್ಯವನ್ನು ಸಂವಿಧಾನಕರ್ತರು ಮನಗಂಡರು. ದೇಶದ ನಾಯಕತ್ವವು ಸುಸಂಸ್ಕೃತವಾಗಬೇಕಾಗಿದ್ದರೆ ಅದು ಯಾವುದೇ ಒಂದು ಧರ್ಮದ ಪರ, ಒಂದು ಜಾತಿಯ ಪರವಾಗಿ ವಕಾಲತ್ತು ವಹಿಸುವಂತಿರಬಾರದೆಂದು ಅವರ ಮೂಲ ಆಶಯವಾಗಿತ್ತು. ನಿಷ್ಪಕ್ಷ ನ್ಯಾಯದಾನ ಮತ್ತು ತಟಸ್ಥ ರಾಜ್ಯಭಾರವನ್ನು ಕೈಗೊಳ್ಳಬೇಕಾಗಿದ್ದರೆ ಮೊದಲು ಸರ್ಕಾರವು ನಿಷ್ಪಕ್ಷವಾಗಿದ್ದು ಧಾರ್ಮಿಕ ನಂಬಿಕೆಗಳ ವಿಚಾರವಾಗಿ ತಟಸ್ಥವಾಗಿರಬೇಕೆಂದು ಸಂವಿಧಾನಕರ್ತರ ಉದ್ದೇಶವಾಗಿತ್ತು. ಬಹುಲತೆಯ ನೆಲೆವೀಡಾದ ಭಾರತ ಉಪಖಂಡದ ವಿಚಾರವಾಗಿ ಈ ಕಲ್ಪನೆ ಹೆಚ್ಚು ಸತ್ಯವಾಗಿತ್ತು. ಈ ಕಲ್ಪನೆಯಿಂದ ಭಾರತದ ಪ್ರಥಮ ಪ್ರಧಾನಿ ನೆಹರೂ ಎಷ್ಟು ಆಕರ್ಷಿತರಾಗಿದ್ದರೆಂದರೆ ಅವರ ಪಾಲಿಗೆ ಸೆಕ್ಯುಲರಿಸಮ್ ಒಂದು ಫ್ಯಾಶನ್ ಆಗದೆ ಪ್ಯಾಶನ್ ಆಗಿ ಕಂಡಿತು. ನೆಹರೂ ಒಬ್ಬರೇ ಅಲ್ಲ, ಸ್ವಾತಂತ್ರ್ಯ ಸಂಗ್ರಾಮದಲ್ಲಿ ಪಾಲ್ಗೊಂಡ ಬಹುತೇಕ ನಾಯಕರೂ ಈ ಕಲ್ಪನೆಯಿಂದ ಆಕರ್ಷಿತರಾಗಿದ್ದವರೇ ! ಆಗಲೇ ವಿಭಕ್ತವಾಗಿದ್ದ ಭಾರತೀಯ ಸಮಾಜವು ಇನ್ನಷ್ಟು ಒಡೆದು ಹೋಗದಂತೆ ಕಾಪಾಡಬಲ್ಲ ಏಕಮಾತ್ರ ಮಂತ್ರದಂಡದಂತೆ ಸೆಕ್ಯುಲರಿಸಮ್ ಅವರಿಗೆ ಕಾಣಿಸಿತು. ಆ ಕಾಲದ ಸಾರ್ವಜನಿಕ ಭಾಷಣಗಳಲ್ಲಿ ಮತ್ತು ಪಕ್ಷಗಳ ಪ್ರಣಾಳಿಕೆಗಳಲ್ಲಿ ಸೆಕ್ಯುಲರಿಸಮ್ ಕೇಂದ್ರಸ್ಥಾನವನ್ನು ಅಲಂಕರಿಸಿದ್ದರಲ್ಲಿ ಆಚ್ಚರಿಯೇನೂ ಇಲ್ಲ. ಹೊಸದಾಗಿ ನಿರ್ಮಾಣವಾಗಬೇಕಾಗಿದ್ದ ರಾಷ್ಟ್ರದ ಬುನಾದಿ ಶಿಲೆಯಾಗಿ ಪರಂಪರಾಗತ ಭಾರತೀಯ ಸಮಾಜದ ಮೌಲ್ಯವೊಂದು ವಿಜೃಂಭಿಸಬೇಕಾದರೆ ಅದು ಸೆಕ್ಯುಲರಿಸಮ್ ಅಲ್ಲದೆ ಬೇರಾವುದೂ ಆಗಿರಲು ಸಾಧ್ಯವಿಲ್ಲವೆಂದು ಆ ಎಲ್ಲ ಹಿರಿಯರು ಮನಗಂಡರು. ಅವರೆಲ್ಲರ ಸಾಮೂಹಿಕ ಪ್ರಯತ್ನಗಳ ಫಲವಾಗಿ ಸಮಾಜದ ಪ್ರಜ್ಞಾವಂತರಲ್ಲಿ ಅನೇಕರು ಸೆಕ್ಯುಲರಿಸಮ್‌ನ್ನು ಒಂದು ಉದಾತ್ತ ಮೌಲ್ಯವೆಂಬುದನ್ನು ಗ್ರಹಿಸುವುದರಲ್ಲಿ ಯಶಸ್ವಿಯಾದರು.



ಸಾಹೇಬರು ಇಲ್ಲ ಯಾರಾಯ್ರೇ....
ಬಿಟ್ಟಿದ್ದ ಜುಟ್ಟು ತೆಗೆಸಿಕೊಂಡು
ಬರಲು ವಿದೇಶಕ್ಕೆ ಹೋಗಿದ್ದಾರೆ....!!

'ಸೆಕ್ಯುಲರಿಸಮ್' ಎನ್ನುವುದು ನಮ್ಮ ಸಂವಿಧಾನದಲ್ಲಿ ಕಂಡುಬರುವ ಒಂದು ಪದವಷ್ಟೇ ಅಲ್ಲ; ಅದಕ್ಕಿಂತ ಹೆಚ್ಚಿನ ವ್ಯಾಪ್ತಿ ಅದಕ್ಕುಂಟು. ಅದೊಂದು ಅರ್ಥಪೂರ್ಣವೂ, ಗಂಭೀರವೂ ಆದ ಕಲ್ಪನೆಯನ್ನು ಒಳಗೊಂಡಿರುವ ಪದ. ಮೊದಲಿಗೆ ಈ ಪದವನ್ನು ಸಂವಿಧಾನದಲ್ಲಿ ಸೇರಿಸಿರಲಿಲ್ಲ. ಸಂವಿಧಾನವು ಅಂಗೀಕೃತವಾದ ಇಪ್ಪತ್ತು ವರ್ಷಗಳ ನಂತರ ಅದನ್ನು ಹಾಗೂ ಜಾತ್ಯಾತೀತ ಎಂಬ ಕಲ್ಪನೆಗಳನ್ನು ಸೇರಿಸಲಾಯಿತು.

೧೯೭೦ರ ಬಳಿಕ ಸೆಕ್ಯುಲರಿಸಮ್‌ನ ಮಹತ್ವ ಮತ್ತು ಪ್ರಭಾವ ಇಳಿಮುಖವಾಯಿತು. ಮೂಲಭೂತವಾದ ವಿವಿಧ ರೂಪುರೇಷೆಗಳು ವಿವಿಧ ಸ್ತರಗಳಲ್ಲಿ ಹೆಚ್ಚು ಹೆಚ್ಚು ಜನರನ್ನು ಪ್ರಭಾವಿತಗೊಳಿಸಿದವು. ಪರಿಣಾಮವಾಗಿ ಸೆಕ್ಯುಲರಿಸಮ್ ಹಿಮ್ಮೆಟ್ಟಿತು. ಬಹುಸಂಸ್ಕೃತಿ ವಾದ ಮತ್ತು ಅವುಗಳ ನಡುವೆ ಸಾಮರಸ್ಯದ ಸೇತುವಾಗಿದ್ದ ಸೆಕ್ಯುಲರಿಸಮ್‌ನ ವಿರುದ್ಧದ ತಿರಸ್ಕಾರವಲ್ಲದಿದ್ದರೂ ಒಂದು ರೀತಿಯ ಅವಜ್ಞೆ ವ್ಯಾಪಕವಾಗಿ ಬೆಳೆಯಿತು.

ಜಾಗತಿಕಮಟ್ಟದ ವಿದ್ವದ್ವಲಯದಲ್ಲಿ ಮನೆಮಾತಾದ ಅನೇಕ ಪತ್ರಿಕೆಗಳೂ, ನಿಯತಕಾಲಿಕೆಗಳೂ ಕಾಲಕಾಲಕ್ಕೆ ಸೆಕ್ಯುಲರಿಸಮ್‌ನ ಮೂಲಗಳನ್ನು ಕುರಿತಂತೆ ಆರೋಗ್ಯಪೂರ್ಣ ಚರ್ಚೆಯನ್ನು ನಡೆಸಿವೆ, ಈಗಲೂ ನಡೆಸುತ್ತಲಿವೆ. ದಕ್ಷಿಣ ಏಷಿಯಾದಲ್ಲಿ ಸೆಕ್ಯುಲರಿಸಮ್ ಸಂಪೂರ್ಣ ವಿಫಲವಾಗಿದೆ ಎಂಬ ವಾದದ ಹಿನ್ನೆಲೆಯಲ್ಲಿ ನಮ್ಮಲ್ಲೂ ಆ ಚರ್ಚೆ ನಡೆಯಬೇಕಾಗಿದೆ. 'ಸಾಮಾಜಿಕ ಮೌಲ್ಯವಾಗಿ ಸೆಕ್ಯುಲರಿಸಮ್ ವಿಫಲವಾಗಿದೆ, ರಾಜಕೀಯ ಕಾರ್ಯ ನೀತಿಯಾಗಿ ಅವಾಸ್ತವಿಕವಾಗಿದೆ ಮತ್ತು ಭವಿಷ್ಯದ ಮಾರ್ಗಸೂಚಿಯಾಗಿಯೂ ಅದು ನಿಷ್ಕ್ರಿಯವಾಗಿದೆ' ಎಂಬ ವಾದಕ್ಕೆ ಉತ್ತರವಾಗಿ, ಸೆಕ್ಯುಲರಿಸಮ್ ಸಾಮಾಜಿಕ ನೀತಿಯಾಗಿ ಹೇಗೆ ಫಲಪ್ರದವಾಗಿದೆ ಎಂಬ ಚರ್ಚೆಯೂ ನಡೆಯಬೇಕಾಗಿದೆ. ಮತೀಯ ಅಸಹಿಷ್ಣುತೆಗೆ ಬಲಿಯಾಗಿ ಒಡೆದು ಛಿದ್ರವಾಗಿ ಹೋಗಬೇಕಾಗಿದ್ದ ಭಾರತದ ಜನರನ್ನು ಸೆಕ್ಯುಲರಿಸಮ್ ಹೇಗೆ ತಡೆದು ಒಂದಾಗಿ ನಿಲ್ಲಿಸಿದೆ ಎಂಬ ಅರಿವು ಮೂಡಿಸುವುದಕ್ಕೋಸ್ಕರ ಈ ಚರ್ಚೆ ಹೆಚ್ಚು ಅಗತ್ಯವಾಗಿದೆ.

ಭಾರತವು ಗಣರಾಜ್ಯವಾಗಿ ಸ್ವರ್ಣ ಮಹೋತ್ಸವವನ್ನು ಆಚರಿಸುತ್ತಿರುವ ಈ ವರ್ಷ, ಸಂವಿಧಾನದ ಆಶಯವಾದ ಸೆಕ್ಯುಲರಿಸಮ್ ಕುರಿತು ಆರೋಗ್ಯಪೂರ್ಣ ಚರ್ಚೆ ನಡೆಸಲು ಸಕಾಲವಾಗಿದೆ. ಅಗತ್ಯವೂ ಕೂಡ.

ಎಂ. ಎ. ಚಕ್ರಪಾಣಿ
ನಂ. ೧/೧೬೦, ಕುರದಗಡ್ಡಿ, ವೆಂಕಟೇಶ್ವರ ಗುಡಿಯ ಸಮೀಪ,
ಹೌಸಿಂಗ್ ಬೋರ್ಡ್ ಕಾಲನಿ
ಹಗರಿಬೊಮ್ಮನಹಳ್ಳಿ - ೫೮೩. ೨೧೨

# ಕೊಳಗೊಂಡ ಗರ್ವರಸಂ ಸೋರ್ದುದು ಆ ಸಾಮ್ರಾಜ್ಯಶಾಹಿ ಚಕ್ರವರ್ತಿಯಾ

ಪ್ರೊ॥ ಶಿವರಾಮಯ್ಯ



**ಪಂ**ಪ ಮಹಾಕವಿಯ ಆದಿ ಪುರಾಣವೆಂಬ ಕಾವ್ಯದಲ್ಲಿ ಕಥಾನಾಯಕ ಚಕ್ರವರ್ತಿ ಭರತೇಶನು ಷಟ್ ಖಂಡಗಳನ್ನು ಗೆದ್ದು ಬರುತ್ತ ವೃಷಭಾಚಲದ ಬಂಡೆ ಭಿತ್ತಿಯ ಮೇಲೆ ತನ್ನ ಭೂ ದಿಗ್ವಿಜಯದ ಪ್ರಶಸ್ತಿಯನ್ನು ಬರೆಯಿಸುವೆನೆಂದು ಹೋಗಿ ನೋಡಲಾಗಿ ಅಲ್ಲಿ ಅನೇಕ ಕಲ್ಪ ಶತಕೋಟಿ ರಾಜರ ಬೀರದ ಮತ್ತು ಚಾಗದ ಮಾತುಗಳು ವಿಪುಲವಾಗಿ ಬರೆಯಲ್ಪಟ್ಟು ತನ್ನ ಪ್ರಶಸ್ತಿಗೆ ಅಲ್ಲಿ ಜಾಗವೇ ಉಳಿದಿರಲಿಲ್ಲ. ಆಗ ಅವುಗಳನ್ನು "ನೋಡಿ ನೋಡಿ ಸೋರ್ದುದು ಕೊಳಗೊಂಡ ಗರ್ವರಸಂ ಆ ಭರತೇಶ್ವರ ಚಕ್ರವರ್ತಿಯಾ" (ಆದಿ ಪುರಾಣ : ೧೩-೧೭) ಎಂದು ವರ್ಣಿಸಿದ ಕವಿ ಭರತೇಶನ ಷಟ್ ಖಂಡದ ದಿಗ್ವಿಜಯವು ಅಂಥ ಮಹತ್ ಸಾಧನೆ ಏನಲ್ಲ ಎಂದು ಧ್ವನಿಸುತ್ತಾನೆ. ಪ್ರಸ್ತುತ ಇಡೀ ಜಗತ್ತಿನಲ್ಲಿ ತನ್ನ ಸಮಾನ ಯಾವ ರಾಷ್ಟ್ರವೂ ಇಲ್ಲ ಎಂದು ಬೀಗುತ್ತಿದ್ದ ಅಮೆರಿಕದ ಗತಿ ಪಂಪನ ಭರತೇಶನ ಸ್ಥಿತಿಯಾಗಿದೆ. ಇದೇ ಸೆಪ್ಟೆಂಬರ್ ೧೧ರಂದು ಭಯೋತ್ಪಾದಕರು ಅಮೆರಿಕದ ಜಾಗತಿಕ ವ್ಯಾಪಾರ ಕೇಂದ್ರದ ಅವಳಿ ಕಟ್ಟಡಗಳು ಹಾಗೂ 'ಪೆಂಟಗಾನ್' ರಕ್ಷಣಾ ಸಚಿವಾಲಯದ ಮೇಲೆ ಅಪಹೃತ ವಿಮಾನಗಳಿಂದ ಡಿಕ್ಕಿ ಹೊಡೆಸಿದ್ದನ್ನು ಕಂಡ ಅಧ್ಯಕ್ಷ ಜಾರ್ಜ್ ಬುಷ್ ಮುಖಭಾವ ಮೇಲಿನ ಭರತೇಶನ ಮುಖಭಂಗವನ್ನೇ ಮನಗಾಣಿಸುವಂತಿತ್ತು. ನೂರಹತ್ತು ಅಂತಸ್ತುಗಳ ಬಹುಮಹಡಿ ಕಟ್ಟಡಗಳು, ತನ್ನೆರಡು ಕೋಡುಗಳನ್ನು ಮುರಿದುಕೊಂಡು ರಕ್ತಜ್ವಾಲೆಯನ್ನು ಕಾರುತ್ತ ಧರೆಗೆ ಕುಸಿಯುವ ದಿಗ್ದಂತಿಯೋ ಎಂಬಂತೆ, ಧೂಮಾಗ್ನಿ ಜ್ವಾಲೆಯನ್ನು ಆಕಾಶ ಮಂಡಲಕ್ಕೆ ಚಾಚುತ್ತ ನೆಲಕ್ಕೆ ಕುಸಿದವು. 'ಪೆಂಟಗಾನ್' ಕಾಡ್ಗಿಚ್ಚಿಗೆ ಸಿಕ್ಕಿದ ಘಟಸರ್ಪದಂತೆ ವಿಷದ ಹೊಗೆ ಕಾರುತ್ತ ಧಗಧಗ ಉರಿಯುತ್ತಲೇ ಇತ್ತು. ಕಂಡ ವಿಶ್ವ ದಿಗ್ಭ್ರಾಂತಿಗೊಳಗಾಯಿತು; ಇದಕ್ಕೆ ಹಲವು ರಾಷ್ಟ್ರಗಳು ವಿಷಾದ ಶೋಕ ವ್ಯಕ್ತಪಡಿಸಿದರೆ, ಕೆಲವು ರಾಷ್ಟ್ರಗಳು ಮಾತ್ರ ವಿಜಯೋತ್ಸಾಹವನ್ನು ಮೆರೆದವು.

ಅತಿ ಬಲಶಾಲಿ ದೇಶವೆಂದು ವಿಶ್ವವಿಖ್ಯಾತಿ ಗಳಿಸಿದ್ದ ಅಮೆರಿಕಕ್ಕೆ ಈಗ ಕಪಾಳಮೋಕ್ಷವಾಗಿ ಅದು ಮುಖಭಂಗದಿಂದ ಕುದಿಯುತ್ತಿದೆ. ತಾನು ಕುಳಿತಲ್ಲಿಯೇ ವಿಶ್ವದ ಆಗುಹೋಗುಗಳನ್ನು ನಿಯಂತ್ರಿಸಬಲ್ಲ, ತನ್ನ ಮೂಗಿನ ನೇರಕ್ಕೆ ಅನ್ಯ ರಾಷ್ಟ್ರಗಳ ಹಣೆಬರಹವನ್ನು ತಿದ್ದಿ ತೀಡಬಲ್ಲ ಈ ಬಲಾಢ್ಯ ರಾಷ್ಟ್ರಕ್ಕೆ ಉಂಟಾದ ಜೀವ ಹಾನಿ, ಆರ್ಥಿಕ ಹಾನಿ, ಅಪಮಾನ ಅಸಾಧಾರಣ ಎಂಬಂತಾಗಿದೆ. ನೆಲ ಜಲ ಭೂಭಾಗಗಳಿಂದ ತನ್ನತ್ತ ಏರಿಬರುವ ವೈರಿಯ ಶಸ್ತ್ರಾಸ್ತ್ರಗಳನ್ನು ದಾರಿಮಧ್ಯದಲ್ಲಿಯೇ ಪತ್ತೆ ಹಚ್ಚಿ ಕೇವಲ ರಿಮೋಟ್ ಕಂಟ್ರೋಲ್ ಗುಂಡಿಯನ್ನು ಒತ್ತುವ ಮೂಲಕವೇ ಸ್ಫೋಟಿಸುವ ಆಧುನಿಕ ತಂತ್ರಜ್ಞಾನದ ಆವಿಷ್ಕಾರವನ್ನು ಪಡೆದ ಅಮೆರಿಕಕ್ಕೆ ಭಯೋತ್ಪಾದಕರು ನೇರವಾಗಿ ದೈಹಿಕವಾಗಿಯೇ ಆಘಾತಗೊಳಿಸಿದ್ದಾರೆ. ಚಿತ್ರಗುಪ್ತನ ಊಹೆಗೂ ನಿಲುಕದ ಸಿ ಐ ಎ ಏಜೆಂಟರಿಗೆ ನಿದ್ದೆ ಕೆಡಿಸಿ, ಬೇಹುಗಾರಿಕೆ ದಳವನ್ನು ಸಮ್ಮೋಹನಗೊಳಿಸಿ, ಗೂಢಚರ್ಯೆಯನ್ನು ನಿಗೂಢಗೊಳಿಸಿ ಆತ್ಮಾಹುತಿ ದಳದ ವಿಮಾನ ಚಾಲಕರು ಡಿಕ್ಕಿ ಹೊಡೆಸಿದ್ದಾರೆ ; ಊಹೆಗೂ ನಿಲುಕದ ಕಾರ್ಯವನ್ನು ಮುಗಿಸಿ ಹುತಾತ್ಮರಾಗಿದ್ದಾರೆ. ಆದರೆ ಇವೆಲ್ಲ ಹೇಗೆ ಸಾಧ್ಯವಾಯಿತು ? ಏಕೆ ಹೀಗೆ ಮಾಡಿದರು ? ಈಗ ಕೊನೆಯಿಲ್ಲದ ಪ್ರಶ್ನೆಗಳು....

ವಿಶ್ವ ರಾಷ್ಟ್ರ ಸಂಸ್ಥೆಯಲ್ಲಿ ಅಮೆರಿಕದ ಮಾತಿಗೆ ಬದಲಿಲ್ಲ. ಜಿ-೮ ಮಿತ್ರಬಳಗದ ರಾಷ್ಟ್ರಗಳಿಗೆ ದೊಡ್ಡಣ್ಣನಾದ ಅಮೆರಿಕ ವೀಟೋ ಚಲಾಯಿಸಿತೆಂದರೆ ಬಡ ರಾಷ್ಟ್ರಗಳ ಗತಿ ಮುಗಿಯಿತು. 'ದಿಗ್ಬಂಧನ' ಹೇರಿತೆಂದರೆ ಕೇಳುವವರಿಲ್ಲ. ಸೋವಿಯತ್ ರಷ್ಯಾ ಒಕ್ಕೂಟ ಒಡೆದುಹೋದ ಮೇಲೆ ಅಂಡಲೆಯುವ ಗಂಡು ಗೂಳಿಯಂತೆ ಇದರ ಪ್ರತಾಪ ! ಈಗ ಸಿಂಹರಾಜನ ನಿದ್ದೆಯನ್ನು ಯಾರೋ ಭಯೋತ್ಪಾದಕರೆಂಬ ಯಃಕಶ್ಚಿತ್ ಮೂಷಿಕಗಳು ಕೆಡಿಸಿಬಿಟ್ಟವೆ. ಹೊಡೆದರೆ ಗುರಿಮಾಡಿ ವೈರಿಯ ಮರ್ಮಾಘಾತವಾಗುವಂತೆ ಹೊಡೆಯಬೇಕು ಎಂಬಂತೆ ಅಮೆರಿಕದ ಆರ್ಥಿಕ ವಹಿವಾಟಿನ ಕೇಂದ್ರ, ಶಕ್ತಿ ಹಾಗೂ ಅದರ ಸೇನಾಶಕ್ತಿಯ ನೆಲೆಯಾದ 'ಪೆಂಟಗಾನ್' ಕಟ್ಟಡಗಳನ್ನು ಅವರು ಛಿದ್ರಗೊಳಿಸಿದ್ದಾರೆ. ಅಂತೂ ಆ ದೇಶದ ಸ್ವಾಭಿಮಾನಕ್ಕೆ ಬಿಗಿದ ಬಲವಾದ ಪೆಟ್ಟು. ಗುರುವಿನ ಗರ್ವಭಂಗವಾಗಿದೆ. ಇಷ್ಟಕ್ಕೂ ಹೀಗೆ ಕೆಣಕಲು ಕಾರಣವೇನು ? ಇದರ ಪರಿಣಾಮ ಏನಾಗಬಹುದು ಎಂದು ಅವರು ಊಹೆ ಮಾಡಲಿಲ್ಲವೆ ? ಇಂಥ ಅಮೆರಿಕಕ್ಕೂ ಪ್ರತಿಸ್ಪರ್ಧಿ ಹುಟ್ಟಿದನೆ ? ವಿಶ್ವದ ಅತ್ಯಂತ ದೊಡ್ಡ ಬಂಡವಾಳಶಾಹಿ ಪ್ರಜಾಪ್ರಭುತ್ವಕ್ಕೆ ಇದೆಂಥ ಗತಿ ಬಂತು ? ಈ ಹೊಡೆತ ಸಾಮ್ರಾಜ್ಯಶಾಹಿ ವಿಸ್ತರಣೆಗೆ ಹಾಕಿದ ಬ್ರೇಕ್ ಎನ್ನಬೇಕೆ ? ಅಥವಾ ಮೂಲಭೂತವಾದಿಗಳ ಪೈಶಾಚಿಕ ರಕ್ತದಾಹ ಎನ್ನಬೇಕೆ ? ಇದರಲ್ಲಿ ಅಮೆರಿಕದ ಸ್ವಯಂಕೃತಾಪರಾಧವೇನಾದರೂ ಉಂಟೆ ? ಮುಂತಾದ ಪ್ರಶ್ನೆಗಳನ್ನು ಕೇಳುವ ಕಾಲ ಈಗ ಸನ್ನಿಹಿತವಾಗಿದೆ. ಅದಕ್ಕಾಗಿ ಅಮೆರಿಕದ ಗತ ಇತಿಹಾಸವನ್ನು ಸ್ವಲ್ಪ ಬಗೆದು ನಾವು ನೋಡುವುದು ಅಗತ್ಯವಾಗಿದೆ. ಅಲ್ಲಿ ಕೆಲವು ಉತ್ತರಗಳಿವೆ ನೋಡಿ :

೧೬ನೇ ಶತಮಾನದಿಂದ ೨೦ನೇ ಶತಮಾನದವರೆಗಿನ ಈ ಐನೂರು ವರ್ಷಗಳನ್ನು ಸಾಮ್ರಾಜ್ಯಶಾಹಿ ಯುಗವೆಂದು ಕರೆಯಬಹುದು. ಈ ಅವಧಿಯಲ್ಲಿ ಪಾಶ್ಚಾತ್ಯ ದೇಶಗಳು ಮಾಡಿದ ಪಾಪಕಾರ್ಯಗಳಿಗಂತೂ ಕೊನೆ ಮೊದಲಿಲ್ಲ. ಇಲ್ಲಿ ಕೆಲವನ್ನು ಹೆಸರಿಸುವುದಾದರೆ ಮೊಟ್ಟಮೊದಲು ಅಮೆರಿಕಕ್ಕೆ ವಲಸಿಗರಾಗಿ ಬಂದ ಸ್ಪೆಯಿನ್ ಮತ್ತು ಪೋರ್ಚುಗಲ್ ಜನರು ಅಲ್ಲಿನ ಮೂಲ ನಿವಾಸಿಗಳಾಗಿದ್ದ ರೆಡ್ ಇಂಡಿಯನ್ನರನ್ನು ಬೇಟೆ ಪ್ರಾಣಿಗಳಂತೆ ಅಟ್ಟಾಡಿಸಿ ಕೊಂದುಹಾಕಿದ್ದು; ಮೆಕ್ಸಿಕೊ ಮತ್ತು ಪೆರು ರಾಜರನ್ನು ಸೆರೆಹಾಕಿಕೊಂಡು ಅವರ ಸಂಸ್ಕೃತಿಯನ್ನು ಹೇಳ ಹೆಸರಿಲ್ಲದಂತೆ ಒರೆಸಿಹಾಕಿದ್ದು; ತಮ್ಮ ಗಣಿಗಾರಿಕೆಗಾಗಿ ಆಫ್ರಿಕಾದ ನೀಗ್ರೋಗಳನ್ನು ಹಿಡಿದು ತಂದು ಗುಲಾಮರನ್ನಾಗಿ ದುಡಿಸಿಕೊಂಡದ್ದು; ಕಡೆಗೆ ಗಣಿಗಳಲ್ಲಿ ಕೂಡಿಹಾಕಿ ಕೊಂದದ್ದು; ವರ್ಣ ದ್ವೇಷದಿಂದ ಕಪ್ಪು ಜನರನ್ನು ನಡೆಸಿಕೊಂಡದ್ದು ; ಆಫ್ರಿಕಾ ಹಾಗೂ ಪೂರ್ವ ರಾಷ್ಟ್ರಗಳ ಅಪೂರ್ವ ಸಂಪನ್ಮೂಲಗಳನ್ನು ದೋಚಿ ತಮ್ಮ ಬೊಕ್ಕಸಗಳನ್ನು ತುಂಬಿಕೊಂಡದ್ದು; ಶೆಟ್ಟಿ ಬಿಟ್ಟಲ್ಲಿಯೆ ಪಟ್ಣ ಎಂಬಂತೆ ವ್ಯಾಪಾರಕ್ಕೆಂದು ಬಂದ ಇವರು ಸಾಮ್ರಾಜ್ಯಗಳನ್ನು ಕಟ್ಟಿ ಮೂಲ ನಿವಾಸಿಗಳನ್ನು ಶೋಷಿಸಿದ್ದು; ಹೀಗೆ ಪಟ್ಟಿ ಬೆಳೆಸುತ್ತಾ ಹೋಗಬಹುದು. ಒಟ್ಟಾರೆ ವ್ಯಾಪಾರಿ ಬುದ್ಧಿಯ ಇವರಿಗೆ ಯುದ್ಧವೂ ಲಾಭ ತರಬೇಕು; ರಾಜ್ಯಾಡಳಿತವೂ ಲಾಭ ತರಬೇಕು; ಹತ್ಯಾಕಾಂಡಗಳೂ ಲಾಭ ತರಬೇಕು. ಪದೇ ಪದೇ ಬಾಲ ತುಳಿಸಿಕೊಂಡ ನಾಯಿ ಕುನ್ನಿಯೂ ಬೊಗಳಿ ಕಚ್ಚಲು ಶುರು ಮಾಡುತ್ತದೆ. ಹಾಗಾಗಿ ಪಾಶ್ಚಾತ್ಯರ ಇಂಥ ಕೊಳ್ಳೆಬಾಕ ನೀತಿಯಿಂದಾಗಿ ಎರಡು ಮಹಾಯುದ್ಧಗಳೇ ನಡೆದುಹೋದವು. ಯುದ್ಧ ನಿಲುಗಡೆಯಾದ ಮೇಲೂ ಜಪಾನಿನ ನಗರಗಳ ಮೇಲೆ ಅಮೆರಿಕ ಅಣುಬಾಂಬ್ ಸುರಿಸಿತು. ಎರಡನೇ ಮಹಾಯುದ್ಧದ ನಂತರ ಅನೇಕ ರಾಷ್ಟ್ರಗಳು ಸ್ವಾತಂತ್ರ್ಯ ಪಡೆದರೂ ಅಮೆರಿಕ ತನ್ನ ಸಾಮ್ರಾಜ್ಯಶಾಹಿ ವಿಸ್ತರಣಾ ನೀತಿಯನ್ನು ಬಿಟ್ಟುಕೊಡಲಿಲ್ಲ. ಅನೇಕಾನೇಕ ಕೈಗೊಂಬೆ ಸರ್ಕಾರಗಳನ್ನು ಹುಟ್ಟುಹಾಕಿ ಕೋತಿ ತಿಂದ ಕಜ್ಜಾಯ ಮಾಡಿ ಮತ್ತೆ ಅಲ್ಲಿನ



**ಬುಷ್ :** ಅಂತರರಾಷ್ಟ್ರೀಯ ಭಯೋತ್ಪಾದನೆ ವಿರುದ್ಧ ಇಡೀ ಪ್ರಪಂಚ ಒಟ್ಟಾರೆ ಹೋರಾಡಬೇಕು.
**ಲಾಡೆನ್ :** ಒಪ್ಪುವ ಮಾತೇ! ಅದಕ್ಕೇ ಮೊದಲ ದೊಡ್ಡ ಭಯೋತ್ಪಾದಕನ ವಿರುದ್ಧ ಹೋರಾಟ ಆರಂಭಿಸಿದ್ದು. ನಮ್ಮಿಬ್ಬರನ್ನೂ ಒಟ್ಟಿಗೆ ಎದುರಿಸುವ ಸಾಮರ್ಥ್ಯ ಇನ್ನಾರಿಗಿದೆ ?

ಸಂಪನ್ಮೂಲವನ್ನು ದೋಚುತ್ತ ತನ್ನ ಶಸ್ತ್ರಾಸ್ತ್ರಗಳಿಗೆ ಗಿರಾಕಿಗಳನ್ನು ಪಡೆಯುತ್ತಾ ಬಂದಿತು.

ಇಲ್ಲಿ ಕೆಲವು ನಿದರ್ಶನಗಳನ್ನು ಹೇಳುವುದಾದರೆ ವಿಯಟ್ನಾಮಿನ ಅಂತರ್‌ಯುದ್ಧದಲ್ಲಿ ೨೫ ವರ್ಷಕ್ಕೂ ಮಿಗಿಲಾಗಿ ಭಾಗವಹಿಸಿದ ಪೆಂಟಗಾನ್ ಸೈನ್ಯ ಅಲ್ಲಿ ನರಮೇಧವನ್ನೇ ಮಾಡಿತು. ಮಧ್ಯ ಪ್ರಾಚ್ಯದಲ್ಲಿ ಇಸ್ರೇಲ್ ಎಂಬ ರಾಷ್ಟ್ರವನ್ನು ಸ್ಥಾಪಿಸುವ ಮೂಲಕ ಪ್ಯಾಲೆಸ್ಟೈನ್ ಜನರ ಗೋಳನ್ನು ಜೀವಂತವಾಗಿ ಇರಿಸಿತು. ತನ್ನ ಸನಿಹದ ಪುಟ್ಟ ದ್ವೀಪ ಕ್ಯೂಬಾದಲ್ಲಿ ಕಮ್ಯುನಿಸ್ಟ್ ಆಡಳಿತ ಇರುವುದೇಕೆ ಎಂಬ ಒಂದೇ ಕಾರಣಕ್ಕೆ ಇನ್ನೂ ದಬ್ಬಾಳಿಕೆಯನ್ನು ನಿಲ್ಲಿಸಲಿಲ್ಲ. ಕೊಲ್ಲಿ ಯುದ್ಧದಲ್ಲಿ ಇರಾಕಿನ ಮೇಲೆ ಬಾಂಬ್ ದಾಳಿ ಮಾಡಿ ಅಮಾಯಕ ಜನರನ್ನು ಕೊಂದುಹಾಕಿತು. ಎಲ್ಲಕ್ಕಿಂತ ಮಿಗಿಲಾಗಿ ಇತ್ತ ಆಫ್ಘಾನಿಸ್ತಾನದ ತಾಲಿಬಾನ್ ಭಯೋತ್ಪಾದಕರಿಗೆ ತರಬೇತಿ ಹಾಗೂ ಆಯುಧಗಳ ಸಹಾಯ ನೀಡಿ ಅವರು ರಷ್ಯಾದ ವಿರುದ್ಧ ಹೋರಾಡುವಂತೆ ಮರೆಯಲ್ಲಿ ನಿಂತು ಪ್ರಚೋದಿಸಿತು. ಭಸ್ಮಾಸುರನಿಗೆ ವರ ಕೊಟ್ಟಂತೆ ಅಂದು ತಾನು ಮಾಡಿದ ಪಾಪಕಾರ್ಯ ಇಂದು ಅಮೆರಿಕದ ಬೆನ್ನು ಹತ್ತಿದೆ. ಹೀಗೆ ಪ್ರಜಾಪ್ರಭುತ್ವದ ಮುಖವಾಡ ಧರಿಸಿದ ಅಮೆರಿಕ ಹಿಂದೆ ಒಮ್ಮೊಮ್ಮೆ ಪ್ರಚ್ಛನ್ನ ಭಯೋತ್ಪಾದಕ ರಾಷ್ಟ್ರವೆಂಬಂತೆ ಮೆರೆದುದನ್ನು ಜಗತ್ತು ಕಂಡಿದೆ. ಮರದೊಳಗಣ ಕಿಚ್ಚು ಮರವ ಸುಟ್ಟಿತು ಎಂಬಂತೆ ಅಮೆರಿಕದ ಸ್ವಯಂಕೃತಾಪರಾಧವೇ ಇಂದು ಅದಕ್ಕೆ ಮುಖಾಮುಖಿಯಾಗಿದೆ. ಈಗ ಸಿಡುಕಿದರೆ ಫಲವೇನು ? ನೊಂದ ನೋವನ್ನು ನೋಯದವರು ಎತ್ತ ಬಲ್ಲರು ಎಂಬಂತೆ ಅನ್ಯ ರಾಷ್ಟ್ರಗಳಲ್ಲಿ ನಡೆಯುತ್ತಿದ್ದ ಅಂದಿನ ಭಯೋತ್ಪಾದಕರ ಚಟುವಟಿಕೆಗಳತ್ತ ಅದು ತೀವ್ರ ಗಮನ ಕೊಡಲಿಲ್ಲ. ಹಿಂದೆ ಪ್ರಾಚೀನ ಗ್ರೀಕ್ ದೇಶ ಕಲೆ ಹಾಗೂ ವಿಜ್ಞಾನರಂಗದಲ್ಲಿ ಮೇಲುಗೈ ಸಾಧಿಸಿ ಇನ್ನು ನನ್ನನ್ನು ತಡೆಯುವವರಾರು ಎಂಬ ಲೋಲುಪತೆಯಿಂದ ವಿಸ್ಮೃತಿಯ ಗರ್ಭಕ್ಕೆ ಸಂದಿರುವಾಗ ರೋಮನ್ನರು ಸುಲಭವಾಗಿ ಅದನ್ನು ವಶಪಡಿಸಿಕೊಂಡರು. ಹಾಗೆಯೇ ತಂತ್ರಜ್ಞಾನದಲ್ಲಿ ತನ್ನನ್ನು ಮೀರಿಸುವರಿಲ್ಲವೆಂಬ ವಿಸ್ಮೃತಿಗೆ ಸಂದ ಅಮೆರಿಕದ ಮೇಲೆ ಆತ್ಮಾಹುತಿ ಮಾನವಪಡೆ ಬರ ಸಿಡಿಲಿನಂತೆ ಬಂದು ಎರಗಿಬಿಟ್ಟಿತು. ಈಗಾಗಲೇ ಹೇಳಿದಂತೆ ಅಮೆರಿಕದ ಮೂಗು ತೂರಿಸುವಿಕೆಯಿಂದ ಅದರ ನವ ಸಾಮ್ರಾಜ್ಯಶಾಹಿ ನೀತಿಯ ಫಲವಾಗಿ ಮಿಲಿಯಾಂತ ಪ್ರಜೆಗಳು ಸತ್ತಿದ್ದಾರೆ, ನಿರ್ವಸಿತರಾಗಿದ್ದಾರೆ, ಆರ್ಥಿಕ ಹಾನಿಗೊಳಗಾಗಿದ್ದಾರೆ, ಎಲ್ಲಕ್ಕೂ ಮಿಗಿಲಾಗಿ ಅವಮಾನಿತರಾಗಿದ್ದಾರೆ. ಹೀಗೆ ಮಾನವ ಘನತೆಗೆ ಪೆಟ್ಟು ಬಿದ್ದಾಗ ಮೊಸಳೆ ಕಣ್ಣೀರು ಸುರಿಸುತ್ತಿದ್ದ ಅಮೆರಿಕಕ್ಕೆ ಆಗ ಏನೂ ಅನ್ನಿಸಲಿಲ್ಲ. ಶ್ರೀಲಂಕಾದಲ್ಲಿ, ಕಾಶ್ಮೀರದಲ್ಲಿ, ಪ್ಯಾಲೆಸ್ಟೈನಿನಲ್ಲಿ ಭಯೋತ್ಪಾದಕರು ಚಿಗುರಿಕೊಳ್ಳುತ್ತಿದ್ದಾಗ ತನ್ನ ಯುದ್ಧಾಸ್ತ್ರಗಳು ಲಾಭ ತಂದರೆ ಸಾಕೆಂದು ಸುಮ್ಮನಿದ್ದಿತು. ಭಯೋತ್ಪಾದನೆಗೆ ಇದೆಲ್ಲ ಮೌನಸಮ್ಮತಿಯೆನಿಸಿತು. ಆದರೆ ಈಗ ಅದರ ಬಿಸಿ ತನಗೇ ಮುಟ್ಟಿದ್ದರಿಂದ ದಿಗಿಲುಗೊಂಡಿದೆ, ಸಂತಾಪಗೊಂಡಿದೆ, ಆವೇಶಗೊಂಡಿದೆ, ಆಕ್ರಮಣಕ್ಕೆ ತುದಿಗಾಲ ಮೇಲೆ ನಿಂತಿದೆ. ಇದು ಸರಿಯೆ ?

ಆದರೆ ಭಯೋತ್ಪಾದನೆಯನ್ನು ಮೂಲೋತ್ಪಾಟನೆ ಮಾಡಬೇಕು ಎಂಬುದರಲ್ಲಿ ಎರಡು ಮಾತಿಲ್ಲ. ಈ ವಿಧ್ವಂಸಕ ರಕ್ತಪಿಪಾಸೆ ಜಗತ್ತಿನಿಂದ ಅಳಿಸಿಹೋಗಬೇಕು. ಆದರೆ ಈಗ ಒಂದು ಮಾಡಲಿಕ್ಕೆ ಹೋಗಿ ಇನ್ನೊಂದಾದರೆ ಎಂಬ ಭಯ ಪ್ರಪಂಚವನ್ನು ಕಾಡುತ್ತಿದೆ. ಮುಂದೇನು ? ಅಣ್ವಸ್ತ್ರಗಳ ಯುದ್ಧ. ಅಮೆರಿಕದ ಅಧ್ಯಕ್ಷರು ಭಯೋತ್ಪಾದಕರ ಲೋಕ ಗುರು ಸೌದಿ ಅರೆಬಿಯಾ ಮೂಲದ ಒಸಾಮಾ ಬಿನ್ ಲಾಡೆನ್ ಎಂಬುವವನ ಮೇಲೆ ಯುದ್ಧ ಸಾರಿದ್ದಾಗಿದೆ. ಆತ ತನಗೆ ಆಶ್ರಯ ನೀಡಿರುವ ಆಫ್ಘಾನಿಸ್ಥಾನದ ಅಡುಗುದಾಣ ಗಳಲ್ಲಿ ಉಳಿದುಕೊಂಡಿದ್ದಾನೆಂದು ಬೇಹುಗಾರಿಕೆ ಖಚಿತ ಪಡಿಸಿದೆ. 'ತಾಲಿಬಾನ್' ಸರಕಾರ ಅವನನ್ನು ಸುಲಭವಾಗಿ ಹೊರಹಾಕಲಾರದು. ಅವನಿಗಾಗಿ ಯಾವ ಬೆಲೆಯನ್ನಾದರೂ ಅದು ತೆರಲು ಸಿದ್ಧ. ಈ ಮಧ್ಯೆ ಕೆಲವು ಮುಸ್ಲಿಂ ಮೂಲಭೂತವಾದಿ ಸಂಘಟನೆಗಳೂ ಸಹ ಅವನ ಪರ ನಿಂತು ಜೆಹಾದ್ ಯುದ್ಧಕ್ಕೆ ಸಿದ್ಧವಾಗಿವೆ. ಮತ್ತೆ ಕೆಲವು ಇಸ್ಲಾಮಿಕ್ ಸಂಘಟನೆಗಳು 'ಅವನ ಕೃತ್ಯಕ್ಕೆ ನಮ್ಮನ್ನೆಲ್ಲ ಹೊಣೆ ಮಾಡಬೇಡಿ' ಎಂದು ಅಮೆರಿಕಕ್ಕೆ ಮೊರೆ ಇಡುತ್ತಿವೆ. ಇದೇನೆ ಇರಲಿ, ಅಮೆರಿಕ ಮಾತ್ರ ತನ್ನ ಸೇಡನ್ನು ತೀರಿಸಿಕೊಳ್ಳದೆ ವಿರಮಿಸುವುದಿಲ್ಲ. ಇದರ ಪರಿಣಾಮ ಮತ್ತೆ ಮೂರನೆ ಮಹಾಯುದ್ಧಕ್ಕೆ ದಾರಿಮಾಡಿಕೊಡುವುದು ಎಂಬ ಶಂಕೆ ಎಲ್ಲರನ್ನೂ ಕಾಡುತ್ತಿದೆ. ಆತ್ಮಾಹುತಿದಳದ ಪರಂಪರೆ ಎಂತಹುದು ಎಂಬುದನ್ನು ಈಗಾಗಲೇ ವಿಯಟ್ನಾಂ ಯುದ್ಧದಲ್ಲಿ ಅಮೆರಿಕ ಮನಗಂಡಿರಬಹುದು. ಒಬ್ಬ ಲಾಡೆನನ್ನು ಕೊಂದರೆ ಅಂಥ ನೂರಾರು ಜನರು ಹುಟ್ಟಿಕೊಳ್ಳಬಹುದು. ಜೀವದ ಹಂಗು ತೊರೆದು ಹೋರಾಡುವುದು ಭಯೋತ್ಪಾದಕರ ಹುಟ್ಟು ಗುಣ. ರಕ್ತ ಬೀಜಾಸುರ ವಂಶಸ್ಥರಾದ ಇವರನ್ನು ಬಗ್ಗುಬಡಿಯುವುದು ಅಷ್ಟು ಸುಲಭವಲ್ಲವಾದರೂ ಅದು ನಡೆಯಲೇಬೇಕಾಗಿದೆ. ಆಗ ಅಮಾಯಕ ಜನರು ತೊಂದರೆಗೆ, ಸಾವು ನೋವಿಗೆ, ಈಡಾಗುತ್ತಾರೆ. 'ಜವರಾಯ ಬಂದರೆ ಬರಿ ಕೈಲಿ ಬರಲಿಲ್ಲ, ಒಳ್ಳೊಳ್ಳೆ ಮರನ ಕಡಿಬಂದ' ಎಂಬಂತೆ ಯುದ್ಧಗಳು ಎಂದರೆ ಒಳ್ಳೆಯವರೂ ಕೆಟ್ಟವರೂ ಕೂಡಿಯೇ ನಾಶವಾಗಿ ಹೋಗುತ್ತಾರೆ. ಹೀಗಿರುವಾಗ ಅಮೆರಿಕ ಅಣ್ವಸ್ತ್ರ ಸಮರದ ಕೆಟ್ಟ ಯೋಚನೆಯನ್ನು ಮಾಡಲಾರದೆಂದು ಆಶಿಸಬೇಕಾಗಿದೆ. ಒಸಾಮಾ ಬಿನ್ ಲಾಡೆನ್ ಎಂಬ ಈ ಇಸ್ಲಾಮಿಕ್ ಅಂತರರಾಷ್ಟ್ರೀಯ ಉಗ್ರಗಾಮಿಯ ನೆಪವಾಗಿ ಇಸ್ಲಾಮಿಕ್ ಹಾಗೂ ಕ್ರಿಶ್ಚಿಯನ್ ಜನ ಸಮೂಹಗಳು ಎರಡು ಬಣಗಳಾಗಿ ಒಡೆದುಹೋಗದಂತೆ ಆಯಾ ರಾಷ್ಟ್ರಗಳು ಎಚ್ಚರವಹಿಸಬೇಕಾಗಿದೆ. ಈಗಾಗಲೆ ಜನಾಂಗೀಯ ತಾರತಮ್ಯತೆಯಿಂದ, ವರ್ಣಭೇದ ನೀತಿಯಿಂದ, ಅಸ್ಪೃಶ್ಯತೆಯ ಪಿಡುಗಿನಿಂದ ಮಾನವ ಸಮೂಹ ಸಾಕಷ್ಟು ತೊಂದರೆಗೆ ಈಡಾಗಿದೆ. ಇದರೊಂದಿಗೆ ಮಹಾಯುದ್ಧ ಏನಾದರೂ ಸಂಭವಿಸಿದರೆ, ಆಧುನಿಕ ಅಣ್ವಸ್ತ್ರಗಳನ್ನು ಪ್ರಯೋಗಿಸಿದರೆ, ಮನುಕುಲ ಸರ್ವನಾಶವಾಗುವುದರಲ್ಲಿ ಅನುಮಾನವೇ ಇಲ್ಲ. ಇವತ್ತು ಭಯೋತ್ಪಾದಕರನ್ನು ಹತ್ತಿಕ್ಕುವುದರೊಂದಿಗೆ ಅವರು ಹುಟ್ಟಿಕೊಳ್ಳುವುದಕ್ಕೆ ಇರುವ ಕಾರಣಗಳನ್ನು ಹುಡುಕಿ ಅವುಗಳಿಗೆ ಪರಿಹಾರೋಪಾಯ ಗಳನ್ನು ಕಂಡುಕೊಳ್ಳಬೇಕಾಗಿದೆ. ಉಗ್ರರು ಹುಟ್ಟಿಕೊಳ್ಳುವುದಕ್ಕೆ ಪ್ರಮುಖವಾಗಿ ಎರಡು ಕಾರಣಗಳುಂಟು : ಒಂದು, ಮುಂದುವರಿದ ರಾಷ್ಟ್ರಗಳ ಸಾಮ್ರಾಜ್ಯಶಾಹಿ ನೀತಿ; ಎರಡು, ಧಾರ್ಮಿಕ ಮೂಲಭೂತವಾದಿಗಳ ತಿಕ್ಕಲುತನ. ಒಮ್ಮೊಮ್ಮೆ ಇವೆರಡೂ ಪರಸ್ಪರ ಥಳಕು ಹಾಕಿಕೊಂಡಿರಲೂಬಹುದು. ಆದ್ದರಿಂದ ಮುಂದುವರಿದ ರಾಷ್ಟ್ರಗಳು ಬಡದೇಶಗಳ ಸಂಪನ್ಮೂಲಗಳನ್ನು ಲೂಟಿ ಹೊಡೆಯಬಾರದು. ಹಾಗೆಯೇ ಯಾವುದೇ ದೇಶದಲ್ಲಿ ಮತೀಯ ಮೂಲಭೂತವಾದ ಹಬ್ಬದಂತೆ ಜಾತ್ಯತೀತ ಮನೋಧರ್ಮವನ್ನು ಬೆಳೆಸಬೇಕು. ಸಾಮ್ರಾಜ್ಯಶಾಹಿ ಪ್ರಭುತ್ವಗಳೊಂದಿಗೆ ಮತೀಯ ಮೂಲಭೂತ ವಾದಿಗಳು ಕೈಜೋಡಿಸಿದಾಗ, ಜೊತೆಗೆ ಆಧುನಿಕ ತಂತ್ರಜ್ಞಾನದ ಆವಿಷ್ಕಾರಗಳು ಅಂಥವರ ಕೈವಶವಾದಾಗ, ಏನಾಗಬಹುದು ಎಂಬುದಕ್ಕೆ ಜರ್ಮನಿಯ ಹಿಟ್ಲರ್ ನಿದರ್ಶನವಾಗಿಹೋಗಿದ್ದಾನೆ.

ಆದರೆ ಆಧ್ಯಾತ್ಮಿಕ ಧರ್ಮ ಹಾಗೂ ವಿಜ್ಞಾನ ಪರಸ್ಪರ ವಿರೋಧಿಗಳಲ್ಲ. ಹಿಂದೆ ಜಗತ್ತು ಒಂದು ದೈವ ನಿಯಮಕ್ಕೆ ಒಳಪಟ್ಟು ನಡೆಯುತ್ತದೆ ಎಂದು ಕ್ರಿಶ್ಚಿಯನ್ ಧರ್ಮ ನಂಬಿತ್ತು. ಇದನ್ನು ಸಮರ್ಥಿಸುವಂತೆ ವಿಜ್ಞಾನ ಕೂಡ ಜಗತ್ತಿನಲ್ಲಿ ಒಂದು ವ್ಯವಸ್ಥೆ, ಒಂದು ನಿಯಮ ಇದೆ ಎಂದು ಹೇಳಿತು.

ಹೀಗೆ ವಿಜ್ಞಾನಕ್ಕೂ, ಧಾರ್ಮಿಕತೆಗೂ ಈ ಬಗೆಯ ಸಾಮರಸ್ಯ ಇರಬೇಕು.

ವಿಶ್ವಕ್ಕೆ ಇಡಿಯಾಗಿ ಅನಾಹುತವಾಗದಂತೆ ಅಮೆರಿಕ ಈಗ ಜವಾಬ್ದಾರಿ ವಹಿಸಬೇಕು. ಅದರೊಟ್ಟಿಗೆ ಜಿ-೮ ಮುಂದುವರಿದ ದೇಶಗಳು ಸಹಕರಿಸಬೇಕು. ಅಣ್ವಸ್ತ್ರ ನಿಷೇಧ ಎಂಬುದು ಬಾಯಿ ಉಪಚಾರದ ಮಾತಾಗದೆ ಸಂಕಲ್ಪದಿಂದ ಪಾಲಿಸಬೇಕು.

**ಪ್ರೊ॥ ಶಿವರಾಮಯ್ಯ**
ನಂ. ೧೭೨, ಐಸಾಕ್ ರೋಡ್, ನಾಗರಬಾವಿ, ಬೆಂಗಳೂರು-೭೨

# ಪೆಣ್ಬುಯ್ಯಲ್ – ಹೆಣ್ಣಿನ ಶೋಷಣೆಯ ಒಂದು ಮುಖ

ಅನೇಕ ಕಾರಣಗಳಿಗೆ ಯುದ್ಧಗಳು ನಡೆದಿವೆ ಮತ್ತು ನಡೆಯುತ್ತವೆ. ಈ ಕಾಲದ ಯುದ್ಧ ಸ್ವರೂಪವು ಹಿಂದಿನ ಕಾಲದಲ್ಲಿರಲಿಲ್ಲ. ಈಗಿನಂತೆಯೇ, ಹಿಂದೆಯೂ ಯುದ್ಧವನ್ನು ಆರಂಭಿಸಲು ಯಾವುದಾದರೂ ಒಂದು ಪಕ್ಷವು ಕಾಲು ಕೆರೆಯಬೇಕಾಗಿತ್ತು; ಅಂದರೆ ಯುದ್ಧವನ್ನು ಆರಂಭಿಸಲು ಒಂದು ನೆಪವನ್ನು ಹುಡುಕಬೇಕಿತ್ತು, ಅದಕ್ಕಾಗಿ ಒಂದು ಕೆಣಕಾಟ. ಈ ಕೆಣಕಾಟದಲ್ಲಿ ಗೋಗ್ರಹಣ ಒಂದು ಕ್ರಮವಾದರೆ, ಮತ್ತೊಂದು ಕ್ರಮವೇ ಪೆಣ್ಬುಯ್ಯಲ್. ಕೆಲವು ಬಾರಿ ಇದೇ ಒಂದು ಯುದ್ಧದ ಸ್ವರೂಪದಲ್ಲೂ ಇರುತ್ತಿತ್ತು. ಹಿಂದಿನ ಕಾಲದ ಕೆಲವು ಯುದ್ಧಗಳನ್ನು ದೊಡ್ಡ ಜಗಳಗಳು ಎಂದೇ ತಿಳಿಯಬಹುದು.

ಯುದ್ಧವಾದ ಮೇಲೆ ಗೆದ್ದವರು ಶತ್ರುಪಕ್ಷದವರನ್ನು ಹಿಂಸಿಸುತ್ತಿದ್ದ ಪ್ರಸಂಗಗಳು ಅಪರೂಪವೇನಲ್ಲ. ಕೆಲವರು ಅದನ್ನು ಕ್ರೀಡೆ ಎಂದೇ ಪರಿಗಣಿಸಿದ್ದಂತೆ ತೋರುತ್ತದೆ. ಗೆದ್ದವರು ಸೋತವರ ಊರುಗಳನ್ನು ನಾಶಪಡಿಸುವುದು ಮತ್ತು ಆ ತಂಡದ ಹೆಣ್ಣುಗಳನ್ನು ಅವಮಾನಗೊಳಿಸುವುದು ಗೆಲುವಿನ ಸಂಕೇತ ಎಂದು ಭಾವಿಸಿರಬಹುದು. ಕೆಲವೊಮ್ಮೆ ಒಂಟಿ ಹೆಣ್ಣು ಮಕ್ಕಳನ್ನು ಕೆಣಕಿ, ಅವಮಾನ ಮಾಡುವ ಹೀನ ಕೆಲಸವೂ ಆಗುತ್ತಿತ್ತು. ಅಂತೂ ಯುದ್ಧಕ್ಕೆ ಮೊದಲಾಗಲೀ, ನಂತರವಾಗಲೀ ಯುದ್ಧಕ್ಕೆ ಪ್ರೇರಣೆ ಆಗಿ ಅಥವಾ ಯುದ್ಧಾನಂತರ ಸಂಭ್ರಮದ ಆಚರಣೆಗಾಗಿ ಮಹಿಳೆಯರನ್ನು ಶೋಷಿಸುತ್ತಿದ್ದ ಪ್ರಸಂಗಗಳು ಶಾಸನಗಳು ಮತ್ತು ಕಾವ್ಯಗಳ ಮೂಲಕ ತಿಳಿಯುತ್ತವೆ. ಹೆಣ್ಣುಗಳನ್ನು ಕೆಣಕಿದಾಗ, ಅವರು ತಮ್ಮ ಶೀಲಭಂಗವಾಗಬಹುದೆಂಬ ಹೆದರಿಕೆಯಿಂದ ಜೋರಾಗಿ ಹುಯ್ಯಲಿಡುತ್ತಿದ್ದರು. ಇದು ಕೇವಲ ಊಹೆ ಎನಿಸಬಹುದಾದರೂ, ಅವಾಸ್ತವ ಅಥವಾ ಅತಾರ್ಕಿಕವಲ್ಲ. ತಮ್ಮ ಶೀಲಭಂಗವಾಗುತ್ತದೆಂಬ ಸುಳಿವು ಕಂಡ ಕೂಡಲೇ ಹೆಂಗಸರು ಕೂಗುತ್ತಾರೆ, ಅಂದರೆ ಹುಯ್ಯಲಿಡುತ್ತಾರೆ. ಹೆಣ್ಣುಗಳ ಆ ಹುಯ್ಯಲೇ 'ಪೆಣ್ಬುಯ್ಯಲ್'. ಶೀಲಭಂಗ ಎಂದಾಗ ಉಡಿಯನ್ನು, ಅಂದರೆ ಉಡಿಯ ಭಾಗದ ಸೀರೆಯನ್ನು ಕೀಳಲಾಗುತ್ತದೆ. ಅದು ಉಡಿಯನ್ನು ಉರ್ಚುವ ಕೆಲಸ. ಇತ್ತೀಚಿನ ದಿನಗಳಲ್ಲಿ ನಾವು ಕೇಳುತ್ತಿರುವ, ಸ್ತ್ರೀಯರನ್ನು ಬೆತ್ತಲೆ ಮಾಡಿ, ಸಂತೋಷಪಡುವ ಪ್ರಸಂಗಗಳನ್ನೇ ಹಿಂದೆ 'ಪೆಣ್ಬುಯ್ಯಲ್' ಎಂದೂ, ಕೆಲವೆಡೆ 'ಪೆಣ್ದಿರುಡೆಯುರ್ಚಿ' ಎಂದೂ ಸಂಬೋಧಿಸಲಾಗಿದೆ ಎಂದು ಊಹಿಸಲು ಅವಕಾಶಗಳಿವೆ.



ಹೆಣ್ಣಿನ ಹುಯ್ಯಲು ಕೇಳುತ್ತಿದ್ದ ಹಾಗೆಯೇ ಊರಿನ ವೀರರು ಅಥವಾ ಒಬ್ಬ ವೀರ, ಹುಯ್ಯಲಿಗೆ ಓಗೊಟ್ಟು, ಅವರನ್ನು ರಕ್ಷಿಸಲು ಮುಂದಾಗುತ್ತಿದ್ದ. ಅಂತಹ ಸಂದರ್ಭದಲ್ಲಿ ಅವನ ಗೆಲುವು ಅಥವಾ ವೀರಮರಣವನ್ನು ಶಾಸನಗಳು ಮತ್ತು ವೀರಗಲ್ಲುಗಳು ದಾಖಲಿಸಿರುವ ಅನೇಕ ಉದಾಹರಣೆಗಳಿವೆ.

ತುಮಕೂರು ಜಿಲ್ಲೆಯ ಶಿರಾ ತಾಲ್ಲೂಕಿನ ಮದಲೂರು ಗ್ರಾಮದಲ್ಲಿರುವ ಕಲ್ಲೇಶ್ವರ ದೇವಾಲಯದ ಮುಂದೆ ಒಂದು ವೀರಗಲ್ಲಿದೆ. ಅದರಲ್ಲಿ ಎಡವಯ್ಯ ಮತ್ತು ಅವನ ಮೊಮ್ಮಗ ಜಕ್ಕ ಎಂಬುವವರು 'ಪೆಣ್ದಿರುಡೆಯುೞ್ಚುವಲ್ಲಿ ಕಾದು' ಸತ್ತ ವಿಷಯ ದಾಖಲಾಗಿದೆ. ಇದರ ಕಾಲ ಕ್ರಿ.ಶ. ಸು. ೧೦೦೦. ಸದ್ಯಕ್ಕೆ 'ಪೆಣ್ಬುಯ್ಯಲ್' ಅನ್ನು ಉಲ್ಲೇಖಿಸುವ ಮೊದಲ ಶಾಸನ ಇದಾಗಿದೆ ಎನ್ನಬಹುದು. ಮೈಸೂರು ಜಿಲ್ಲೆ ಮತ್ತು ಅದೇ ತಾಲ್ಲೂಕಿನ ಮಲ್ಲೇಗೌಡನ ಕೊಪ್ಪಲಿನಲ್ಲಿರುವ ಎರಡು ಶಾಸನಗಳು ಒಂದೇ ದಿನಕ್ಕೆ ಸೇರಿದ್ದು (೨೬-೬-೧೦೩೬), ಇದರಲ್ಲಿ ಚಂಗಾಳ್ವರ ಕಡೆಯವರು ತುಱುಗಳನ್ನು ಅಪಹರಿಸಿಕೊಂಡು ಹೋಗುತ್ತಿದ್ದಾಗ, ಬ್ಯಾಗ್ಗಳಿಯ ಸಿರಿಯಣ್ಣ ಮತ್ತು ಪಣ್ಬಿಯ ಮುದ್ದಯ್ಯ ಎಂಬುವವರು 'ತುಱುವ ಮಗುೞ್ಚಿ ಪೆಣ್ದಿರುಮಂ ಮತ್ತು ಪೆಱಗಿಕ್ಕಿ' ಸಾಯುತ್ತಾರೆ. ಅದಕ್ಕೆ ವೀರಗಲ್ಲನ್ನು ಹಾಕಿಸಲಾಗಿದೆ. ಇಂತಹ ಅನೇಕ ದಾಖಲೆಗಳು ಕರ್ನಾಟಕದಲ್ಲಿ ಹೇರಳ ಎನ್ನುವ ಪ್ರಮಾಣದಲ್ಲಿಯೇ ಇವೆ. 'ಪೆಣ್ಬುಯ್ಯಲ್'ಗೆ ಸಂಬಂಧಿಸಿದ ವೀರಗಲ್ಲುಗಳಲ್ಲಿನ ಶಿಲ್ಪವು ಪುರುಷ ಪ್ರಧಾನವಾಗಿಯೇ ಇರುತ್ತದೆ. ಹೋರಾಡಿ ಮಡಿದ ವೀರನಿಗೆ ಹಾಕಿಸಿದ ಸ್ಮಾರಕ ಇದಾಗಿರುವುದರಿಂದ, ಸಹಜವಾಗಿಯೇ ವೀರನಿಗೆ ಪ್ರಾಧಾನ್ಯತೆ ದೊರೆತಿದೆ ಎಂದು ಭಾವಿಸಲು ಅವಕಾಶವಿದೆ. ಆದರೆ, ವೀರನ ಶಿಲ್ಪದಲ್ಲಿ ಹೋರಾಟದಲ್ಲಿ ನಿರತನಾಗಿರುವ ವೀರನ ಹಿಂಭಾಗದಲ್ಲಿ ಒಂದು ಅಥವಾ ಇನ್ನೂ ಹೆಚ್ಚು ಸ್ತ್ರೀಯರನ್ನು ಅರೆಬೆತ್ತಲೆಯಾಗಿ, ತಮ್ಮ ಮಾನವನ್ನು ರಕ್ಷಿಸಿಕೊಳ್ಳುವ ಭಂಗಿಯಲ್ಲಿ ಕೆತ್ತಲಾಗಿರುತ್ತದೆ.

ಯುದ್ಧಕ್ಕೆ ಮೊದಲು ವೀರರನ್ನು ಕೆಣಕಿ ಯುದ್ಧಕ್ಕೆ ಆಹ್ವಾನಿಸಲು ಅಥವಾ ಯುದ್ಧಾನಂತರ ಯುದ್ಧದ ಗೆಲುವನ್ನು ಸಂಭ್ರಮದಿಂದ ಆಚರಿಸಲು, ಸ್ತ್ರೀಯರನ್ನು ಶತ್ರು ಪಕ್ಷದವರು ಹೀಗೆ ದುರುಪಯೋಗ ಮಾಡಿಕೊಳ್ಳುತ್ತಿದ್ದರು. ಮಾನಭಂಗದಿಂದ ರಕ್ಷಣೆ ಪಡೆಯಲು, ಹೆದರಿ ಹುಯ್ಯಲಿಟ್ಟವರು ಹೆಂಗಸರು; ಅವರನ್ನು ರಕ್ಷಿಸಿದವರು ವೀರರು. ಇಂತಹ ವೀರರಿಗಾಗಿ ವೀರಗಲ್ಲುಗಳು ಹಾಕಲ್ಪಟ್ಟಿವೆ.

ಮಹಿಳೆಯರನ್ನು ಯುದ್ಧಕ್ಕೆ ಮೊದಲು ಮತ್ತು ಯುದ್ಧಾನಂತರ ಶೋಷಿಸುತ್ತಿದ್ದ ಇಂತಹ ಉದಾಹರಣೆಗಳು ಕರ್ನಾಟಕದ ಸಾಂಸ್ಕೃತಿಕ ಚರಿತ್ರೆಯಲ್ಲಿ ಇವೆ. ಇಂತಹ ಪ್ರಸಂಗಗಳನ್ನು ಕೆಲವು ಕವಿಗಳು ತಮ್ಮ ಕಾವ್ಯಗಳಲ್ಲೂ ಪ್ರಸ್ತಾಪಿಸಿದ್ದಾರೆ.

ಡಾ|| ಎಚ್. ಎಸ್. ಗೋಪಾಲರಾವ್
'ಸ್ವಸ್ತಿಶ್ರೀ ಸ್ಕಂದ', ಅರಿಶಿನಕುಂಟೆ, ನೆಲಮಂಗಲ ತಾಲ್ಲೂಕು,
ಬೆಂಗಳೂರು ಗ್ರಾಮಾಂತರ ಜಿಲ್ಲೆ - ೫೬೨ ೧೨೩

# ಕುದುರೆಮುಖ ಗಣಿಗಾರಿಕೆ ಹಾಗೂ ಶೋಲಾ ಹುಲ್ಲುಗಾವಲು

**ಪ**ಶ್ಚಿಮ ಘಟ್ಟಗಳ ನಿತ್ಯ ಹರಿದ್ವರ್ಣದ ಕಾಡುಗಳ ಮಧ್ಯೆ ಕಂಡುಬರುವ ಶೋಲಾ ಹುಲ್ಲುಗಾವಲಿಗೂ ಅದರಂಚಿಗೆ ಬೆಳೆದು ನಿಂತಿರುವ ತಪ್ಪಲು ಪ್ರದೇಶದ ದಟ್ಟ ನಿತ್ಯ ಹರಿದ್ವರ್ಣದ ಕಾಡುಗಳಿಗೂ ಜೈವಿಕವಾದ ಅವಿನಾ ಸಂಬಂಧ ಏದೆ. ಸ್ಥಿರ ಇಂಗಾಲ ಐಸೋಟೋಪ್ ವಿಶ್ಲೇಷಣೆಯ ಮೂಲಕ ಮಲೆನಾಡಿನ ಈ ಶಿಖರ ಹುಲ್ಲುಗಾವಲುಗಳನ್ನು ಇಲ್ಲಿನ ಹವಾಮಾನ ಸಹಜವಾಗಿ ರೂಪಿಸಿದೆ ಎಂದು ಪರಿಸರ ವಿಜ್ಞಾನಿಗಳ ಸ್ಪಷ್ಟ ಅಭಿಪ್ರಾಯ. ಆ ಪ್ರಕಾರ ಶೋಲಾ ಹುಲ್ಲುಗಾವಲುಗಳು, ಮನುಷ್ಯನಿಗೆ ಮಂಡೆ ಇದ್ದಂತೆ, ಅತ್ಯಂತ ಸೂಕ್ಷ್ಮ ಪ್ರದೇಶಗಳು. ಇವು ಶೋಲಾ (ನಿತ್ಯ ಹರಿದ್ವರ್ಣ)ಕಾಡಿನ ಜೀವ ಪರಿಸ್ಥಿತಿಯ ಕೊಂಡಿಯಾಗಿವೆ. ಮೇಲುನೋಟಕ್ಕೆ ಕೇವಲ ಬೋಳುಗುಡ್ಡೆಯ ಯಕಃಶ್ಚಿತ್ ಹುಲ್ಲುಗಾವಲಿನಂತೆ ಕಂಡುಬಂದರೂ ಇವು ಪಶ್ಚಿಮ ಘಟ್ಟದ ಹೃದಯ ಭಾಗಗಳೂ, ನದೀ ಜಲಮೂಲದ ಖಜಾನೆಗಳೂ ಆಗಿವೆ ಎಂದು ಪರಿಸರ ತಜ್ಞರಾದ ಸತೀಶ್ ಚಪ್ಪರಿಗೆ ಮತ್ತು ಆ. ನ. ಯಲ್ಲಪ್ಪ ರೆಡ್ಡಿ ಮುಂತಾದವರ ಸ್ಪಷ್ಟ ಅಭಿಪ್ರಾಯ. ಅದು ಹೇಗೆಂದರೆ ಈ ಶೋಲಾ ಹುಲ್ಲುಗಾವಲು ಮಳೆಗಾಲದಲ್ಲಿ ಮಣ್ಣಿನ ಸವಕಳಿಗೆ ಎಡೆಕೊಡದೆ ಸ್ಪಾಂಜಿನಂತೆ ಮಳೆ ನೀರನ್ನು ಹೀರಿಕೊಂಡು ತನ್ನ ಬೇರುಗಳ ಮೂಲಕ ಕಬ್ಬಿಣದ ಅದಿರು ನಿಕ್ಷೇಪದ ಪದರ ಪದರುಗಳಲ್ಲಿ ಇಳಿಸಿ ಸಂಗ್ರಹಿಸಿಕೊಳ್ಳುತ್ತದೆ. ತುಂತುರು ಮಳೆ ಹಾಗೂ ತಂಪು ಹವೆಗೆ ಸದಾ ಮೈಯೊಡ್ಡಿ ಎದೆ ಮಟ್ಟ ಬೆಳೆವ ಈ ಹುಲ್ಲುಗಾವಲುಗಳು ಮಳೆಗಾಲದಲ್ಲಿ ಹಿಮಗಟ್ಟಿದಂತೆ ಶೀತಲವಾಗಿದ್ದು ಬೇಸಿಗೆ ಬಂದಂತೆಲ್ಲಾ ಸೂರ್ಯತಾಪಕ್ಕೆ ಕಾವೇರಿ ನೀರಾಗುತ್ತದೆ. ಆದರೆ ಆ ನೀರು ಆವಿಯಾಗಲು ಮೇಲಿನ ಹುಲ್ಲು ಎಡೆಕೊಡುವುದಿಲ್ಲ. ಕೆಳಗಿನ ಮೃದುವಲಯ ಪದರಿನಲ್ಲಿ ನೀರು ಹಿಂಗುತ್ತಾ ಹೋದಂತೆ, ಅದಾದ ಮೇಲೆ ಬರುವ ಬಿರುಸುವಲಯ (ಹಾರ್ಡ್‌ವೆದರ್ ಓರ್)ದಲ್ಲಿ ಹಿಂಗಲಾರದೆ ಕೆಳಗೆ ಪ್ರಪಾತಕ್ಕೆ ಜಿನುಗುತ್ತದೆ. ಕ್ರಮೇಣ ಗಿರಿಕಂದರಗಳಲ್ಲಿ ನೀರ್ಝರಿಗಳಾಗಿ ಪರಿಣಮಿಸಿ ತಪ್ಪಲು ಪ್ರದೇಶದ ಶೋಲಾ ಕಾಡುಗಳ ಬೇರುಗಳಿಗೆ ನಿತ್ಯ ನೀರುಣಿಸಿ ಅವು ಹಸಿರು ಹಸಿರಾಗಿ ಕಂಗೊಳಿಸುವಂತೆ ನೋಡಿಕೊಳ್ಳುತ್ತದೆ. ಆದ್ದರಿಂದಲೇ ಇಲ್ಲಿ ಉಗಮಿಸುವ ನದಿಗಳು ಸದಾ ಜೀವಂತವಾಗಿರುತ್ತವೆ. ಪಶ್ಚಿಮ ಘಟ್ಟಗಳಲ್ಲಿ ಅತ್ಯಧಿಕ ಮಳೆ ಸುರಿಯುವುದರಿಂದ ಈ ಜೈವಿಕ ಸಂಬಂಧ ಏದೆ. ಆದರೆ ಬಳ್ಳಾರಿ ಜಿಲ್ಲೆಯ ಸಂಡೂರು ಮುಂತಾದ ಕಡೆಗಳಲ್ಲಿ ಮಳೆ ಅಪರೂಪವಾದ ಕಾರಣ ಇಲ್ಲಿನ ಅದಿರು ನಿಕ್ಷೇಪಗಳಲ್ಲಿ ಹುಲ್ಲೂ ಬೆಳೆಯಲಾರದು, ಆ ಪರಿಣಾಮವಾಗಿ ಅಲ್ಲಿ ಕಾಡೂ ಅಷ್ಟು ದಟ್ಟವಾಗಿ ನಿಲ್ಲಲಾರದು. ಗಮನಾರ್ಹವಾದ ಒಂದು ಅಂಶವೆಂದರೆ, ಪ್ರಪಂಚದಲ್ಲಿ ಎಲ್ಲೆಲ್ಲಿ ಇಂಥ ಹುಲ್ಲುಗಾವಲುಗಳು ಉಂಟೋ ಅಲ್ಲೆಲ್ಲಾ ಅದರಡಿಯಲ್ಲಿ [illegible], ಒಂದಲ್ಲ ಒಂದು ಬಗೆಯ ಖನಿಜ ನಿಕ್ಷೇಪಗಳು ಇದ್ದೇ ಇರುತ್ತವೆ [illegible]ಬುದು. ನಿದರ್ಶನಕ್ಕಾಗಿ ಆಸ್ಟ್ರೇಲಿಯಾ. ಶ್ರೀಲಂಕಾ ಮತ್ತು ಆಫ್ರಿಕಾದ ಕೆಲವೆಡೆ ಇರುವ ಹುಲ್ಲು [illegible] ಹೆಸರಿಸಬಹುದು. ಅಂತೂ ನಿತ್ಯ ಹರಿದ್ವರ್ಣದ ಕಾಡುಗಳ ಅಸ್ತಿತ್ವಕ್ಕೆ ಸ್ತನ್ಯಪಾನ ಮಾಡಿಸುವ ತಾಯಿ ಇದ್ದಂತೆ ಈ ಶೋಲಾ ಹುಲ್ಲುಗಾವಲುಗಳು. ಇವಿಲ್ಲದೆ ಇಂಥ ಕಾಡು ಬೆಳೆಯಲಾರದು, ಮತ್ತು ಈ ಹುಲ್ಲುಗಾವಲನ್ನು ಇಲ್ಲವಾಗಿಸಿದರೆ ಇದ್ದ ಕಾಡೂ ಸಹ ಉಳಿಯಲಾರದು.

ಇನ್ನೊಂದು ಮುಖ್ಯ ವಿಚಾರವೆಂದರೆ, ಶೋಲಾ ಹುಲ್ಲುಗಾವಲಿಗೂ ಮತ್ತು ಸಸ್ಯ ಸಂಕುಲಕ್ಕೂ ಇರುವ ಜೈವಿಕ ಸಂಬಂಧದಂತೆಯೇ ಈ ಹುಲ್ಲುಗಾವಲಿಗೂ ಮತ್ತು ಅರಣ್ಯ ಜೀವ ಸಂಕುಲಕ್ಕೂ ಸಹ ಅವಿನಾ ಸಂಬಂಧವಿದೆ. ನಿತ್ಯ ಹರಿದ್ವರ್ಣದ ಕಾಡುಗಳೆಂದರೆ ಅಪೂರ್ವ ಸಸ್ಯ ಜಾತಿಗಳ, ಜೀವ ಸಂಕುಲಗಳ ಉಗಮಸ್ಥಾನ ಹಾಗೂ ಆಡುಂಬೊಲ. ಕಾಡೆಮ್ಮೆ, ಕಡವೆ, ಜಿಂಕೆ, ಮೊಲ ಮುಂತಾದ ಸಸ್ಯಾಹಾರಿ

## ಪ್ರೊ॥ ಶಿವರಾಮಯ್ಯ

ಪ್ರಾಣಿಗಳೂ ಮತ್ತೆ ಇವುಗಳನ್ನು ತಿಂದೇ ಬದುಕುವ ತೋಳ, ಹುಲಿ, ಚಿರತೆ ಮುಂತಾದ ಮಾಂಸಾಹಾರಿ ಪ್ರಾಣಿಗಳೂ ಇಲ್ಲಿ ಬದುಕುತ್ತವೆ ಮತ್ತು ಈ ಹುಲ್ಲುಗಾವಲುಗಳಲ್ಲಿ ವೈವಿಧ್ಯಮಯವಾದ ಪಕ್ಷಿ ಜಾತಿ ಸಂಕುಲಗಳೂ ತಮ್ಮ ಬದುಕನ್ನು ಸಾಗಿಸುತ್ತವೆ. ಮೊಟ್ಟೆ ಇಟ್ಟು ಮರಿ ಮಾಡಲು ಇಂಥ ಹುಲ್ಲುಗಾವಲುಗಳು ಅವಕ್ಕೆ ಅನುಕೂಲ. ಆದ್ದರಿಂದ ಶೋಲಾ ಹುಲ್ಲುಗಾವಲಿಗೆ ಪ್ರಾಮುಖ್ಯ ಇದೆ.

ಆದರೆ ಅಭಿವೃದ್ಧಿಯನ್ನು ದೃಷ್ಟಿಯಲ್ಲಿಟ್ಟುಕೊಂಡು ಇಂಥ ಹುಲ್ಲುಗಾವಲುಗಳನ್ನು ಗಣಿಗಾರಿಕೆಗೆ 'ಓಪನ್ ಮೈನಿಂಗ್' (ಬೆಟ್ಟದ ತಲೆಯನ್ನು ಕೆತ್ತುತ್ತಾ ಹೋಗುವುದು) ಉಪಯೋಗಿಸಿಕೊಂಡು ಅದರ ಅಂಚಿನ ಶೋಲಾ ಕಾಡುಗಳಿಗೆ ಕೈ ಹಾಕದಿದ್ದರೂ ಕೂಡ ಈ ಕಾಡುಗಳು ಜೀವಂತ ಉಳಿಯಲಾರವು. ಏಕೆಂದರೆ ಮೇಲಿನ ಹುಲ್ಲು ಇಲ್ಲವಾದಾಗ ಮೇಲ್ಪದರದ ಮಣ್ಣು ಕೊಚ್ಚಿ ಹೋಗಿ, ತಪ್ಪಲಿನ ಕಾಡಿನ ಬುಡದಲ್ಲಿ ನೆಲ ತಲುಪಿ, ಅಲ್ಲಿನ ಜೀವಿಗಳ ನೈಸರ್ಗಿಕ ಬೆಳವಣಿಗೆಗೆ ಅಡ್ಡಿಯುಂಟಾಗುತ್ತದೆ. ಕಬ್ಬಿಣದ ಅಂಶ ಹೆಚ್ಚಿರುವ ಮೇಲ್ಪದರದ ಮಣ್ಣು ಕೊಚ್ಚಿಬಂದು ಶೇಖರವಾದರೆ ಸಸ್ಯದ ಬೇರುಗಳ ಬೆಳವಣಿಗೆಗೆ ಹಾಗೂ ಬೀಜಗಳು ಮೊಳಕೆಯಾಗುವುದಕ್ಕೆ ಅಡಚಣೆಯುಂಟಾಗುತ್ತದೆ. ಪರಿಣಾಮವಾಗಿ ಕಾಡಿನ ನಾಶ ಹಾಗೂ ನದಿಗಳಲ್ಲಿ ಪ್ರವಾಹ. ಈ ಅಂಶವನ್ನು ಒಂದು ನಿದರ್ಶನದಿಂದ ಸ್ಪಷ್ಟಪಡಿಸಬಹುದು. ಅದೇನೆಂದರೆ ಹಳ್ಳ ನದೀ ದಂಡೆಗಳಲ್ಲಿ ಶೇಖರವಾಗಿದ್ದ ಮರಳು ರಾಶಿಯನ್ನು ಅಭಿವೃದ್ಧಿ ಯೋಜನೆಗಳಿಗೆ ಖಾಲಿ ಮಾಡಿದ ಕಾರಣ ಈಗಾಗಲೇ ಅಂಥ ಹಳ್ಳ ನದಿಗಳ ಇಕ್ಕೆಲಗಳಲ್ಲಿ ಬೆಳೆದು ನಿಂತಿದ್ದ ಮರಗಿಡಗಳು ತಂಪು ನೆಲೆ ಸಿಗದೆ ಸೊರಗಿ ಒಣಗಿ ಹೋಗುತ್ತಿರುವುದನ್ನು ನೋಡುತ್ತಿದ್ದೇವೆ. ಎಂದರೆ ಶೋಲಾ ಕಾಡುಗಳಿಗೂ ಇದೇ ಗತಿ ತಪ್ಪಿದ್ದಲ್ಲ, ಗಮನಿಸಿ, ನಿತ್ಯ ಹರಿದ್ವರ್ಣದ ಭಾರಿ ವೃಕ್ಷಗಳ ಅಡಿಯಲ್ಲಿ ಯಾವ ಖನಿಜ ನಿಕ್ಷೇಪಗಳೂ ಇರುವುದಿಲ್ಲ, ಕೇವಲ ಮಣ್ಣು ಮಾತ್ರ.

ಇಷ್ಟೆಲ್ಲಾ ತಜ್ಞರ ತಿಳಿವಿನೊಂದಿಗೆ ಗಣಿಗಾರಿಕೆ ನಡೆಯುತ್ತಿರುವ ಕೆಲಭಾಗದ ಸ್ಥಳೀಯರ ಅನುಭವವನ್ನು ತಾಳೆ ನೋಡಿದರೆ ಅಪೂರ್ವ ಫಲಿತಾಂಶ ಹೊರಬೀಳುವುದು. ಉದಾಹರಣೆಗೆ, ಕೆಮ್ಮಣ್ಣುಗುಂಡಿ ಗಣಿಗಾರಿಕೆಯ ಆಜೂ ಬಾಜಿನ ಗ್ರಾಮಸ್ಥರ ಅನುಭವ ಏನೆಂದರೆ ಅಲ್ಲಿನ ಗಣಿಗಾರಿಕೆ ಪ್ರಯುಕ್ತ ವಾತಾವರಣ ಕಲುಷಿತಗೊಂಡು ತಂಪು ಹವಾಮಾನ ಕ್ಷೀಣಿಸಿ ಈಚೆಗೆ ಅಧಿಕ ತಾಪಮಾನ ಶುರುವಾಗಿದೆ ಎಂಬುದು. ಕೆಮ್ಮಣ್ಣುಗುಂಡಿಯ ಹತ್ತಿರದ ಕಲ್ಲತ್ತಗಿರಿ ಹಾಗೂ ಹೆಬ್ಬೆ ಜಲಪಾತಗಳು ಬೇಸಿಗೆಯಲ್ಲಿ ಬತ್ತಿಯೇ ಹೋಗುತ್ತಿವೆ. ಆದ ಪ್ರಯುಕ್ತ ಸುತ್ತಣ ವಾತಾವರಣದಲ್ಲಿ ತಂಪು ಹವೆ ಬಿಸಿಯಾಗುತ್ತದೆ. ಯಾಕೆಂದರೆ ಯಾವುದೇ ಓಪನ್ ವೆದರ್ ಮೈನಿಂಗ್ ಗಣಿಗಾರಿಕೆಯಲ್ಲಿ ಮೇಲ್ಪದರದ ಮಣ್ಣನ್ನು ಬಗೆದು ದೂರತಳ್ಳಲಾಗುತ್ತದೆ. ಆ ತ್ಯಾಜ್ಯ ವಸ್ತುಗಳ ಮೇಲೆ ಬೃಹತ್ ಪ್ರಮಾಣದ ಯಂತ್ರೋಪಕರಣಗಳು ತಾರಾಮಾರ ತಿರುಗುತ್ತಿರುತ್ತವೆ. ಇದರ ಪರಿಣಾಮವಾಗಿ ಬೇಸಿಗೆ ಕಾಲದಲ್ಲಿ ಗಣಿಗಾರಿಕೆಯ ಪ್ರದೇಶ ಕಾದು ಧೂಳಿದೂಸರದಿಂದ ತುಂಬಿಹೋಗಿ ಅದು ಅಕ್ಕಪಕ್ಕದ ಕಾಡಿನ ಮರಗಿಡಗಳ ಮೇಲೂ ಕೂರುವ ಪ್ರಯುಕ್ತ ಅವುಗಳ ಬೆಳವಣಿಗೆಗೆ



# ನಮ್ಮೂರ ಮುದುಕಿ





ನೊಣವೊಂದ ನುಂಗಿದಳು ನಮ್ಮೂರ ಮುದುಕಿ
ಕಾರಣವೇ ಸಿಕ್ಕದು ಹುಡುಕಿದರು ಕೆದಕಿ.

ನಮ್ಮೂರ ಮುದುಕಿ ನುಂಗಿದಳೊಂದು ಜೇಡ
ಹೊಟ್ಟೆಯಲ್ಲಿ ಜೂಟಾಟ. ಆ ಕಾಟ ಬೇಡ !
ಆದರೇನಂತೆ ಬುದ್ಧಿವಂತೆ ಮುದುಕಿ.
ನೊಣವ ಹಿಡಿಯಲಿ ಎಂದು ನುಂಗಿದಳು ಜೇಡ.
ನೊಣವೇಕೆ ನುಂಗಿದಳೋ ನಮ್ಮೂರ ಮುದುಕಿ
ಕಾರಣವೇ ಸಿಕ್ಕದು ಹುಡುಕಿದರು ಕೆದಕಿ.

ಮುದುಕಿ ನುಂಗಿದಳು ಒಂದು ಮರಿಕೋಳಿ
ಎಂತಹ ಚುರುಕು ! ಹೇಳಿ, ನೀವೇ ಹೇಳಿ
ಜೇಡ ಹಿಡಿಯಲು ಕೋಳಿ. ನೊಣವ ಹಿಡಿಯಲು ಜೇಡ.
ನೊಣವೇಕೆ ನುಂಗಿದಳೋ ನಮ್ಮೂರ ಮುದುಕಿ ?
ಕಾರಣವೇ ಸಿಕ್ಕದು ಹುಡುಕಿದರು ಕೆದಕಿ.

ಮುದುಕಿ ನುಂಗಿದಳು ಒಂದು ಕರಿಬೆಕ್ಕು
ಹೊಟ್ಟೆಯಲಿ ಹೋರಾಟ ಇದಕ್ಕೂ ಅವಕ್ಕೂ
ಇರಲಿ ಬಿಡಿ. ಬಲು ಜಾಣೆ ನಮ್ಮೂರ ಮುದುಕಿ !
ಕೋಳಿ ಹಿಡಿಯಲು ಬೆಕ್ಕು. ಜೇಡ ಹಿಡಿಯಲು ಕೋಳಿ.
ನೊಣವ ಹಿಡಿಯಲು ಜೇಡ. ನೊಣವೇಕೆ ಹೇಳಿ ?
ನೊಣವೇಕೆ ನುಂಗಿದಳೋ ನಮ್ಮೂರ ಮುದುಕಿ ?
ಕಾರಣವೇ ಸಿಕ್ಕದು ಹುಡುಕಿದರು ಕೆದಕಿ.

ನುಂಗಿದಳು ಎಲ್ಲದರ ಮೇಲೊಂದು ನಾಯಿ
ಕೇಳದಿರಿ ಈಗಲೇ, "ಹಿಡಿಸಿತೇ ಬಾಯಿ ?"
ತರ್ಕದಲಿ ನಿಪುಣೆ ನಮ್ಮೂರ ಮುದುಕಿ.
ಬೆಕ್ಕ ಹಿಡಿಯಲು ನಾಯಿ. ಕೋಳಿ ಹಿಡಿಯಲು ಬೆಕ್ಕು.
ಜೇಡ ಹಿಡಿಯಲು ಕೋಳಿ, ನೊಣವ ಹಿಡಿಯಲು ಜೇಡ
ನೊಣವೇಕೆ ನುಂಗಿದಳೋ ನಮ್ಮೂರ ಮುದುಕಿ ?
ಕಾರಣವೇ ಸಿಕ್ಕದು ಹುಡುಕಿದರು ಕೆದಕಿ.

ಇನ್ನೇನು ? ಕುದುರೆಯನೂ ನುಂಗಿದಳು ಅಂತು ಇಂತು
ಪಾಪ ! ಅವಳ ಗತಿ ಎಲ್ಲಿಂದೆಲ್ಲಿಗೆ ಬಂತು !
ಏನೀಗ ! ಲೆಕ್ಕಾಚಾರದಲಿ ಶಿಸ್ತುಳ್ಳ ಮುದುಕಿ !
ನಾಯಿ ಹಿಡಿಯಲು ಕುದುರೆ, ಬೆಕ್ಕ ಹಿಡಿಯಲು ನಾಯಿ.
ಕೋಳಿ ಹಿಡಿಯಲು ಬೆಕ್ಕು. ಜೇಡ ಹಿಡಿಯಲು ಕೋಳಿ.
ನೊಣವ ಹಿಡಿಯಲು ಜೇಡ. ನೊಣವೇಕೆ ಹೇಳಿ ?
ನೊಣವೇಕೆ ನುಂಗಿದಳೋ ನಮ್ಮೂರ ಮುದುಕಿ ?
ಕಾರಣವೇ ಸಿಕ್ಕದು ಹುಡುಕಿದರು ಕೆದಕಿ.

ಆಮೇಲೆ ಆ ಮುದುಕಿ ನುಂಗಿದಳು – ಆನೆ
ಆನೆಯ ಮೇಲೆ ಏನೆಂದು ಕೇಳುವಿರಿ ತಾನೆ ?
ಈ ಮೂರ್ಖ ಪ್ರಶ್ನೆಯನು ಕೇಳದಿರಿ ನೀವು
ಆನೆ ನುಂಗಿದ ಮೇಲೂ ಬರದಿರದೆ ಸಾವು ?


**ಡಾ|| ಎಂ. ಎಸ್. ಕೇಶವರಾವ್**
೩೮೮, ವೆಂಕಟೇಶ ದಾಸ ರಸ್ತೆ, ಪದ್ಮನಾಭನಗರ
ಬೆಂಗಳೂರು - ೫೬೦ ೦೭೦


ಕುಂದುಂಟಾಗುತ್ತದೆ ಹಾಗೂ ಶಾಖಾಂಶ ಹೆಚ್ಚಾಗುತ್ತದೆ. ಇನ್ನು ಮಳೆಗಾಲದಲ್ಲಿ ಮೇಲ್ಪದರದ ತ್ಯಾಜ್ಯ ಮಣ್ಣು ರಾಶಿಗಳು ಅಧಿಕ ಮಳೆಗೆ ಕೊಚ್ಚಿಹೋಗಿ ನದಿಗಳಲ್ಲಿ ಕೊಚ್ಚಲು ಕೂರುತ್ತದೆ. ತತ್ಪರಿಣಾಮ ಈಗಾಗಲೇ ತಿಳಿದಿದೆ. ಮತ್ತು ಮೇಲ್ಪದರ ಮಣ್ಣನ್ನು ಬಗೆದು ಆ ತ್ಯಾಜ್ಯ ವಸ್ತುಗಳ ಮೇಲೆ ಯಂತ್ರೋಪಕರಣಗಳು ಓಡಾಡಿದ ಪ್ರಯುಕ್ತ ಬೆಟ್ಟಗಳ ನೆತ್ತಿಯ ಭಾಗ ಮಳೆ ನೀರನ್ನು ಮುಂದೆ ಹೀರಿಕೊಳ್ಳಲಾರದೆ ಮಣ್ಣುಸಮೇತ ಕೊಚ್ಚಿಹೋಗಿ ಕೆಳಗೆ ಪ್ರವಾಹಗಳು ಕಾಣಿಸಿಕೊಳ್ಳುತ್ತವೆ.

ಹೀಗೆ ಶೋಲಾ ಹುಲ್ಲುಗಾವಲುಗಳನ್ನು ಬಗೆದು, ತ್ಯಾಜ್ಯವಸ್ತುಗಳನ್ನು ಚೆಲ್ಲಾಡಿ, ಬೃಹತ್ ಪ್ರಮಾಣದ ಯಂತ್ರಗಳು ಅಲ್ಲಿ ನಿರಂತರ ಚಲಿಸುವ ಕಾರಣ ಆ ಭಾಗ ಮಡ್ ಕಾಂಕ್ರೀಟ್ ಮಾಳಿಗೆ ಮಾಡಿದಂತಾಗಿ ಒಂದು ತೊಟ್ಟು ಮಳೆ ನೀರನ್ನೂ ಅದು ಹಿಂಗಿಸಿಕೊಳ್ಳಲು ತೀರಾ ಅಸಮರ್ಥವಾಗುತ್ತದೆ. ಆಗ ಶೋಲಾ ಹುಲ್ಲುಗಾವಲು ಪ್ರದೇಶ ಬಯಲು ಸೀಮೆಯ ಮಡ್ ಕಾಂಕ್ರೀಟ್ ಮಾಳಿಗೆಗಳಂತಾಗಿಬಿಡುತ್ತದೆ. ಭವಿಷ್ಯದಲ್ಲಿ ಅಲ್ಲಿ ಒಂದು ಹುಲ್ಲುಗರಿಕೆಯೂ ಮೊಳೆಯುವುದಿಲ್ಲ; ನೀರು ಸಂಗ್ರಹವೂ ಇಲ್ಲ; ಅದರಂಚಿನ ಶೋಲಾ ಕಾಡುಗಳೂ ಉಳಿಯುವುದಿಲ್ಲ. ಒಂದೇ ಮಾತಿನಲ್ಲಿ ಹೇಳುವುದಾದರೆ ಬೆಟ್ಟದ ನೆತ್ತಿಯನ್ನು ಒಡೆದು ಅದರ ರಕ್ಷಣೆಯ ಕೂದಲೆಂಬ ಹುಲ್ಲುಗಾವಲನ್ನು ಕೆರೆದುಹಾಕಿ, ಒಳಗಿನ ಮೆದುಳಿನಂತಿರುವ ಅದಿರನ್ನು ಬಾಚಿಹಾಕಿದ ಮೇಲೆ ಶೋಲಾ ಹುಲ್ಲುಗಾವಲಾಗಲೀ, ಅದರ ಜೈವಿಕ ಸಂಬಂಧವಿರುವ ಜಲಮೂಲದ ಖಜಾನೆಯಾದ ನಿತ್ಯಹರಿದ್ವರ್ಣದ ಕಾಡಾಗಲೀ ಪುನರ್‌ಸೃಷ್ಟಿಯಾಗಲು ಸಾಧ್ಯವೇ ಇಲ್ಲ. ಹೀಗಾಗಿ ಪಶ್ಚಿಮ ಘಟ್ಟಗಳ ದಟ್ಟಾರಣ್ಯ ನಾಶವಾದ ಮೇಲೆ ಇಡೀ ದಕ್ಷಿಣ ಪಥದ ಪರಿಸರದಲ್ಲಿ ಅಸಮತೋಲನ ಏರ್ಪಟ್ಟು, ಭೂಕಂಪನಗಳೂ ಸಂಭವಿಸಬಹುದು, ಎಂದು ವಿಜ್ಞಾನಿಗಳು ಈಗಾಗಲೇ ಎಚ್ಚರಿಸಿದ್ದಾರೆ.

ಮತ್ತೆ ಒಂದು ಮಾತನ್ನು ಇಲ್ಲಿಯೇ ಹೇಳಬೇಕಾಗಿದೆ. ಕುದುರೆಮುಖ ಗಣಿಗಾರಿಕೆಯ ನಂತರ ನಾಗರಿಕ ಅರಣ್ಯ ಯೋಜನೆಯ ಆಶ್ರಯದಲ್ಲಿ ತ್ಯಾಜ್ಯ ವಸ್ತುಗಳ ಮಣ್ಣು ಗುಡ್ಡೆ ಹಾಗೂ ಹಾಳುಬಿಟ್ಟ ಗಣಿಪ್ರದೇಶದಲ್ಲಿ ಅಕೇಶೀಯಾ ಎಂಬ ವಿದೇಶಿ ಸಸ್ಯಗಳನ್ನು ನೆಟ್ಟು ಬೆಳೆಸಲಾಗುತ್ತದೆ. ಆದರೆ ಈ ಸಸ್ಯಗಳು ಗಟ್ಟಿಗೊಂಡ ಆ ನೆಲದಲ್ಲಿ ಬೆಳೆಯಲಾರವು ಹಾಗೂ ಬೆಳೆದರೂ ಆಳಕ್ಕೆ ಬೇರಿಳಿಸಿ ಹಿಂಗಿದ ಒಂದು ತೊಟ್ಟು ನೀರನ್ನೂ ಬಿಡದೆ ಇದೇ ಸಸ್ಯಗಳು ಹೀರಿಬಿಟ್ಟಾಗ ಇನ್ನು ನೀರ್ಝರಿಗಳು ಹೇಗೆ ಉಗಮಿಸುತ್ತವೆ ? ಶೋಲಾ ಕಾಡುಗಳು ಹೇಗೆ ಬದುಕಿ ಉಳಿಯುತ್ತವೆ ? ಡಾ|| ಕುಮಾರನ್ ನೇತೃತ್ವದ ತಂಡದ ವರದಿಯ ಪ್ರಕಾರ ಇನ್ನೊಂದು ಕ್ಷಣ ಗಣಿಗಾರಿಕೆ ಮುಂದುವರೆದರೂ ಭೂಕಂಪ ಮುಂತಾದ ಅಪಾಯ ಕಟ್ಟಿಟ್ಟ ಬುತ್ತಿ ಎನ್ನಲಾಗಿದೆ. ಆದ ಪ್ರಯುಕ್ತ ಕುದುರೆಮುಖ ಗಣಿಗಾರಿಕೆಯನ್ನು ಕೇವಲ ಅಭಿವೃದ್ಧಿ ದೃಷ್ಟಿಯಿಂದ ಮಾತ್ರ ನೋಡದೆ, ದೂರಗಾಮಿತ್ವದಿಂದ ಈಗಾಗಲೇ ತಲ್ಲಣಗೊಳಿಸುವ ರೈತರ ಸಮಸ್ಯೆಯನ್ನು ನೋಡಿದರೆ ಮುಂದೆ ತುಂಗಾಭದ್ರಾ ಜಲಾನಯನ ಪ್ರದೇಶದ ಕೋಟ್ಯಾಂತರ ಜನರ ಬದುಕುವ ಹಕ್ಕನ್ನೇ ಕಿತ್ತುಕೊಂಡಂತಾಗುತ್ತದೆ. ಗಣಿಗಾರಿಕೆಯಿಂದ ಈಗ ಬರುವ ರಾಷ್ಟ್ರೀಯ ಆದಾಯ ಆಗ ಯಾವ ಲೆಕ್ಕಕ್ಕೂ ಸಾಲದಾಗುತ್ತದೆ. 'ಚೆಂಬು ಕಳಕೊಂಡು ಗಂಗಾಳ ಕೊಟ್ಟು ಕಣಿ ಕೇಳಿದರು' ಎಂಬಂತಾಗುತ್ತದೆ ಕರ್ನಾಟಕದ ಪರಿಸ್ಥಿತಿ. ಆದ್ದರಿಂದ ಪರಿಸರ ಹಾಗೂ ಅಭಿವೃದ್ಧಿ ಪ್ರಶ್ನೆಗಳು ತುಂಬಾ ಜಟಿಲವಾಗಿದ್ದು ಒಂದರೊಡನೆ ಒಂದು ತಳಕುಹಾಕಿಕೊಂಡು ಕೂತಿವೆ. ಈ ಸಂದರ್ಭದಲ್ಲಿ ಸರ್ಕಾರ ಕುದುರೆಮುಖ ಗಣಿಗಾರಿಕೆಯಿಂದ ತೊಂದರೆಯಾಗುವ ಕಾರ್ಮಿಕರಿಗೆ ಪರ್ಯಾಯ ಯೋಜನೆ ಮುಖಾಂತರ ಉದ್ಯೋಗ ವ್ಯವಸ್ಥೆ ಮಾಡಿ, ಭವಿಷ್ಯದ ಆಗು ಹೋಗುಗಳನ್ನು ಗಮನಿಸಿ (ಇದು ಪರಿಸರವಾದಿಗಳ ಮಾತಲ್ಲ) ಕುದುರೆಮುಖ ಗಣಿಗಾರಿಕೆಯನ್ನು ನಿಲ್ಲಿಸುವುದೇ ಸೂಕ್ತ ಎಂದು ಹೇಳದೆ ಬೇರೆ ವಿಧಿ ಇಲ್ಲ. ಹಾಗೆಯೇ ಗಂಗಡಿಕಲ್ಲು, ನೆಲ್ಲೀಬೀಡು, ಬಾಬಾಬುಡನ್‌ಗಿರಿ ನೆತ್ತಿಗಳಿಗೂ ಕೈ ಹಾಕದಿರುವುದೇ ಸುಕ್ಷೇಮ. ಏಕೆಂದರೆ ಶೋಲಾ ಹುಲ್ಲುಗಾವಲುಗಳು ಕೇವಲ ಬರಿ ತೃಣವಲ್ಲ, ಗಿರಿನೆತ್ತಿಯ ಕೇಶ; ಅದರಡಿಯ ಅದಿರು ಕೇವಲ ಕಲ್ಲುಪದರವಲ್ಲ, ಪಶ್ಚಿಮಘಟ್ಟಗಳ ಮೆದುಳು.


**ಪ್ರೊ|| ಶಿವರಾಮಯ್ಯ**
ನಂ. ೧೭೨, ಐಸಾಕ್ ರೋಡ್, ನಾಗರಬಾವಿ, ಬೆಂಗಳೂರು-೭೨


## ಅಕ್ಟೋಬರ್ 'ಪದಹೊಸೆತ'ದ ಸರಿಯುತ್ತರ

| | | | | | | | | |
|---|---|---|---|---|---|---|---|---|
| ವಿ | ನೂ | ತ | ನ | | ಕಂ | ದಾ | ಚಾ | ರ |
| ಧಿ | | | ಗು | ಲಾ | ಬಿ | | | ವಿ |
| ವ | ಣ | ಲ | | ಜರ್ಾ | | ಸ್ವ | ಭಾ | ವ |
| ಶ | | ವ | ನ | ಮಾ | ತ್ರ | ಯಂ | | ರ್ಮ |
| | | ಲ | | | | ಪ್ರೇ | | |
| ಜಂ | | ವಿ | ನಾ | ಶ | ಕಾ | ರಿ | | ತಂ |
| ಬ | ಯ | ಕೆ | | ಬ | | ತ | ಗಾ | ದೆ |
| ಗಾ | | | ಗ | ರಿ | ಕೆ | | | ತಾ |
| ರ್ತಿ | ವ | ಧ್ಯ | ಮ | | ನೆ | ಲ್ಲಿ | ಕಾ | ಯಿ |

# ಬಂಡಾಯ ಸಾಹಿತ್ಯ ಸಂಘಟನೆ ಮತ್ತು ಪ್ರಸ್ತುತ ಸಂದರ್ಭ

*ಈಗ ಸಂಘಟನೆ ಶಿಥಿಲವಾಗಿದೆ. ಈ ಏಳುಬೀಳುಗಳಿಗೆ ಕೆಲವು ನೇತಾರರನ್ನು ಕಾರಣರನ್ನಾಗಿ ತೋರಿಸಲಾಗುತ್ತದೆ. ಇದು ಮೇಲಿಂದ ಕಾಣುವ ಕಾರಣ. ಆದರೆ ಅದನ್ನೂ ಒಳಗೊಂಡು ಇನ್ನೂ ನಿಗೂಢ ಕಾರಣಗಳೇ ಇರುತ್ತವೆ. ಇದು ಬಂಡಾಯ ಸಾಹಿತ್ಯ ಚಳುವಳಿಗೆ ಮಾತ್ರ ಸಂಬಂಧಿಸಿದ್ದಲ್ಲ, ಅದು ಪ್ರಗತಿಶೀಲ, ಪ್ರಗತಿಪಂಥದ ಸಂದರ್ಭ ಹಾಗೂ ಎಡಪಂಥೀಯ ರಾಜಕೀಯಕ್ಕೂ ಸಂಬಂಧಿಸಿದ್ದಾಗಿದೆ.*

**ಭಾ**ರತದಲ್ಲಿ ಪ್ರಗತಿಶೀಲ ಸಾಹಿತ್ಯ ಸಂಘ ಸ್ಥಾಪನೆಗೆ ಕಾರಣರಾದ ಸಜ್ಜದ್ ಜಾಹೀರ್ ಹೇಳುವ ಮಾತು ಇದು : ''ಜಗತ್ತನ್ನೇ ನುಂಗಹೊರಟ ಆರ್ಥಿಕ ಬಿಕ್ಕಟ್ಟಿನ ರಾಜಕೀಯ ಪರಿಣಾಮದ ವಿರಾಟರೂಪ ತೋರಿಕೊಂಡಿತು. ಎಲ್ಲ ಕಡೆಗಳಿಂದಲೂ ಫ್ಯಾಸಿಸ್ಟ್ ದಬ್ಬಾಳಿಕೆಯ ಕಥೆಗಳೇ ಕೇಳಿಬರುತ್ತಿದ್ದವು.... ಜರ್ಮನಿಯ ಮಹಾ ಸಾಹಿತಿಗಳಾದ ಥಾಮಸ್ ಮಾನ್, ಅರ್ನೆಸ್ಟ್ ಟಾಲರ್, ಅಂತಾರಾಷ್ಟ್ರೀಯ ಖ್ಯಾತಿಯ ಐನ್‌ಸ್ಟೀನ್, ಹಾಗೆಯೇ ಅನೇಕ ಕಲಾವಿದರೂ, ಸಂಗೀತಗಾರರೂ ದೇಶಭ್ರಷ್ಟರಾಗಿ ಊಟಕ್ಕೆ ದಿಕ್ಕಿಲ್ಲದೆ ಅಲೆಯುತ್ತಿದ್ದ ಕಾಲ. ಜನಸಮುದಾಯ ಫ್ಯಾಸಿಸ್ಟ್ ಶಕ್ತಿಗಿದುರು ಎಚ್ಚೆತ್ತಿರುವುದನ್ನು ಕಂಡು ಅವರೂ ಧೈರ್ಯ ತಾಳಿದರು. ತಾವೂ ಜನತೆಯ ಮುನ್ನಡೆಯ ಮುಂಭಾಗದಲ್ಲಿ ನಿಂತರು.''

ಇದರ ಪರಿಣಾಮವಾಗೇ ಭಾರತದಲ್ಲಿ ಪ್ರಗತಿಶೀಲ ಸಾಹಿತ್ಯ ಸಂಘ ಸ್ಥಾಪನೆಗೊಂಡಿತು. ಲಕ್ನೋದಲ್ಲಿ ನಡೆದ ಆ ಸಮಾವೇಶದ ಅಧ್ಯಕ್ಷ ಪ್ರಸಿದ್ಧ ಉರ್ದು-ಹಿಂದಿ ಸಾಹಿತಿ ಪ್ರೇಮಚಂದ್. ''......ಇಂದಿನ ಭಾರತೀಯ ಸಾಹಿತ್ಯ ಜನರ ಮೂಲಭೂತ ಸಮಸ್ಯೆಗಳನ್ನು ಹೊಂದಬೇಕಾಗಿದೆ. ಜನರ ಹಸಿವೆ, ಬಡತನ, ಹಿಂದುಳಿದಿರುವಿಕೆ ಮತ್ತು ರಾಜಕೀಯ ಕಟು ಪರಿಸ್ಥಿತಿಯ ಕುರಿತು ಗಂಭೀರ ಕಾಳಜಿ ಹೊಂದಿರಬೇಕೆಂದು ನಾವು ಬಯಸುತ್ತೇವೆ. ಯಾವುದು ನಮ್ಮನ್ನು ನಿರಾಶಾವಾದಿ ಮತ್ತು ವಿಚಾರಶೂನ್ಯತೆಯ ಕಡೆ ಎಳೆಯುತ್ತದೋ ಅದೇ ಪ್ರತಿಗಾಮಿ ವೈಚಾರಿಕತೆಯಾಗುತ್ತದೆಂದು ತಿರಸ್ಕರಿಸುತ್ತೇವೆ. ಯಾವುದು ನಮ್ಮ ವಿಮರ್ಶಕ ಬುದ್ಧಿಯನ್ನು ಹೊಡೆದೆಬ್ಬಿಸುತ್ತದೋ, ಆ ಮೂಲಕ ತಮ್ಮ ಸಂಸ್ಥೆ, ಮೌಢ್ಯ, ಕಂದಾಚಾರ, ನಡೆನುಡಿಗಳನ್ನು ಪರೀಕ್ಷಿಸ ಹಚ್ಚುತ್ತದೋ, ಆ ಮುಖಾಂತರವಾಗಿ ಒಂದು ಸಂಘಟನೆ ಅಡಿಯಲ್ಲಿ ಒಂದು ಹೊಸ ಪರಿವರ್ತನೆಗೆ ಅನುವು ಮಾಡುತ್ತ ಮುಂದುವರೆಯುತ್ತದೋ ಆ ಸಿದ್ಧಿಯನ್ನು ನಾವು ಪ್ರಗತಿಶೀಲತೆಯೆಂದು ಗ್ರಹಿಸುತ್ತೇವೆ'' ಎಂದು ಅವರು ಹೇಳುತ್ತಾರೆ.

ಕರ್ನಾಟಕದಲ್ಲಿ ಪ್ರಗತಿಶೀಲ ಸಂಘ ೧೯೪೩ರಲ್ಲಿ ಅಸ್ತಿತ್ವಕ್ಕೆ ಬಂತು. ಅದರ ಪ್ರಣಾಳಿಕೆಯಲ್ಲಿ ''ಮಾನವ ಸೃಷ್ಟ್ಯಾತ್ಮಕ ಶಕ್ತಿಯ ಬಗ್ಗೆ ತಿರಸ್ಕಾರ, ಒಂದು ಕುಲ ಅಥವಾ ಜನಾಂಗದ ಮೇಲೆ ಮತ್ತೊಂದರ ಅಧಿಕಾರ, ಜಾತಿ ಮತ್ತು ಮತೀಯ ದ್ವೇಷ ಇವು ನಮ್ಮ ಜನತೆಯ ಹಿತಕರವಾದ ಪರಂಪರೆಗೆ ದೂರವಾಗಿವೆ. ಧ್ಯೇಯರಹಿತ ಜೀವನ, ಮೂಢನಂಬಿಕೆ, ನಿರಾಸೆ ಮತ್ತು ವಿಧಿವಾದ ಇವು ನಮ್ಮ ಬೆಳವಣಿಗೆಯನ್ನು ತಡೆಯುತ್ತವೆ. ನಮ್ಮ ಸಾಹಿತಿಗಳು ಜನತೆಯ ಸೇವೆಯಲ್ಲಿ ಒಂದುಗೂಡಬೇಕೆಂದೂ ಸುಖಮಯ ಸಮೃದ್ಧ ಜೀವನದ ಕಡೆಗೆ ಮುನ್ನಡೆಯುವಂತೆ ಜನತೆಯನ್ನು ತಮ್ಮ ಸೃಷ್ಟ್ಯಾತ್ಮಕ ಕೃತಿಗಳ ಮೂಲಕ ಪ್ರೇರೇಪಿಸಬೇಕೆಂದೂ ನಾವು ಕರೆ ಕೊಡುತ್ತೇವೆ'' ಎಂದು ಹೇಳಲಾಗಿದೆ. ಹೀಗೆ ಹುಟ್ಟಿಕೊಂಡ ಪ್ರಗತಿಶೀಲ ಚಳುವಳಿ ಸುಮಾರು ಐವತ್ತರ ಹೊತ್ತಿಗೇ ಒಂದು ಸಂಘಟನೆಯಾಗಿ ತನ್ನ ಅಸ್ತಿತ್ವ ಕಳೆದುಕೊಂಡಿತು. ಮುಂದೆ ಕನ್ನಡದಲ್ಲಿ 'ನವ್ಯ' ಎಂಬ ಪ್ರಕಾರ ಉಂಟಾದುದು ತಿಳಿದೇ ಇದೆ. ಇದರ ಅರ್ಥ ಪ್ರಗತಿಶೀಲರ ಪ್ರಣಾಳಿಕೆ ಯಾವುದನ್ನು ಹೇಳಿತೋ ಆ ಪರಿಸ್ಥಿತಿ ನಾಶವಾಗಿಹೋಗಿದೆ ಎಂದಲ್ಲ. ಆದರೆ ಸಾಹಿತ್ಯದಲ್ಲಿ ಅದರ ಹಾಜರಾತಿ ಕಾಣೆಯಾಯಿತು. ಇದರ ಹಿಂದೆ ಅನೇಕ ಪ್ರೇರಣೆಗಳು ಇರುತ್ತವೆ. ಅವುಗಳಲ್ಲಿ ಸಮಾಜದಲ್ಲಿ ಪ್ರಾದುರ್ಭಾವಕ್ಕೆ ಬರುವ ವರ್ಗಸ್ವಭಾವ ದ್ವಂದ್ವಮಾನದ ಮೇಲುಗೈ, ಕೆಳಗೈ ಆಗುವುದು ಮುಖ್ಯವಾಗುತ್ತದೆ.

ಬಂಡಾಯ ಸಾಹಿತ್ಯ ಸಂಘಟನೆಯ ಪ್ರಣಾಳಿಕೆ ತನ್ನ ನಿಲುವನ್ನು ಈ ಮಾತುಗಳಿಂದ ಸ್ಪಷ್ಟಪಡಿಸಿತು: ''ನಮ್ಮ ಸಾಂಸ್ಕೃತಿಕ ಕ್ಷೇತ್ರದಲ್ಲಿ ಅನೇಕ - ವರ್ಷಗಳಿಂದ ಕಂಡು ಬರುತ್ತಿರುವ ಪ್ರಗತಿಪರ ಧೋರಣೆಗಳು ತೆಗೆದುಕೊಂಡ ತಿರುವುಗಳು, ಎದುರಿಸಿದ ಸಮಸ್ಯೆಗಳು ಮತ್ತು ತಲುಪಿದ ಕ್ಷೀಣ ನೆಲೆಗಳನ್ನು ಗಮನಿಸಿದಾಗ ಅವುಗಳಿಂದ ಪಾಠ ಕಲಿತ ವ್ಯಾಪಕ ಸ್ವರೂಪದ ಸಂಘಟನೆಯ ಅಗತ್ಯ ಗೊತ್ತಾಗುತ್ತದೆ. ಜನವಿರೋಧಿ ನಿಲುವುಗಳು ವಿವಿಧ ಮುಖವಾಡಗಳ ಮರೆಯಲ್ಲಿ ಒಂದಾಗಿ ವಿಜೃಂಭಿಸುತ್ತಿರುವ ಈ ಸಂದರ್ಭ ಪ್ರಗತಿಪರ ಧೋರಣೆಯ ಎಲ್ಲರಿಗೂ ಒಂದು ಸವಾಲು. ಈ ಸವಾಲಿಗೆ ನಮ್ಮ ಉತ್ತರ : ಎಲ್ಲ ವಾಮಪಂಥೀಯ ಸಂಘಟನೆ. ಮತ್ತೂ ಸ್ಪಷ್ಟಪಡಿಸುವುದಾದರೆ : ಸಮಕಾಲೀನ ಚರಿತ್ರೆಯ ಬೆಳವಣಿಗೆಯ ಸ್ವರೂಪದಿಂದಾಗಿ ಎಲ್ಲ ವಾಮಪಂಥೀಯರ ಸಾಂಸ್ಕೃತಿಕ ಒಗ್ಗಟ್ಟು ಈಗ ಅತ್ಯಂತ ಮುಖ್ಯವಾದದ್ದು. ಈ ದಿಕ್ಕಿನಲ್ಲಿ ಬಂಡಾಯ ಸಾಹಿತ್ಯ ಚಳುವಳಿಗೆ ಕನ್ನಡ ಸಾಂಸ್ಕೃತಿಕ ಕ್ಷೇತ್ರದಲ್ಲಿ ಶೋಷಿತ ಜನತೆಯ ಪರವಾದ ನಿಲುವುಗಳನ್ನು ಭದ್ರವಾಗಿ ನೆಲೆಗೊಳಿಸುವುದು ಮುಖ್ಯ ಗುರಿಗಳಲ್ಲೊಂದಾಗ ಬೇಕು. ನಮ್ಮ ಪ್ರಧಾನ ಹೋರಾಟ ಸಾಂಸ್ಕೃತಿಕ ಕ್ಷೇತ್ರಕ್ಕೆ ಸಂಬಂಧಿಸಿದ್ದು. ದೇಶದ ರಾಜಕೀಯ ಮತ್ತು ಸಾಂಸ್ಕೃತಿಕ ಸಂದರ್ಭಗಳು ಪರಸ್ಪರ ಸಂಬಂಧ ಉಳ್ಳವು ಎಂಬ ನಿಲುವಿನಿಂದ ಹೊರಟಿದ್ದು, ಅಸ್ಪೃಶ್ಯತೆ, ಜಾತಿಪದ್ಧತಿ ಮತ್ತು ಲಿಂಗಭೇದ ನೀತಿಯ ವಿರುದ್ಧ ಹೋರಾಟವನ್ನು ಕಟ್ಟುವುದು ನಮ್ಮ ಮುಖ್ಯ ನೆಲೆ. ಇಂಥ ಒಲವಿನ ಸಾಹಿತ್ಯ ಸೃಷ್ಟಿ ಹೋರಾಟದ ಮುಖ್ಯ ದಾಖಲೆ.'' ಇದನ್ನು ೧೯೭೯ ಮಾರ್ಚ್ ೧೧ರಂದು ಬೆಂಗಳೂರಿನಲ್ಲಿ ನಡೆದ ಬಂಡಾಯ ಸಾಹಿತ್ಯ ಸಮ್ಮೇಳನ ದೃಢಪಡಿಸಿತು.

**ಆರ್. ವಿ. ಭಂಡಾರಿ**

ಬಂಡಾಯ ಸಾಹಿತ್ಯ ಸಂಘಟನೆ ದಲಿತರ, ಮಹಿಳೆಯರ, ಅಲ್ಪಸಂಖ್ಯಾತರ, ಒಟ್ಟಾರೆಯಾಗಿ ತುಳಿತಕ್ಕೊಳಗಾದವರ ಪರವಾದ ಧ್ವನಿಯನ್ನು ಮೊಳಗಿತು. ಸಾಹಿತ್ಯ-ಸಾಂಸ್ಕೃತಿಕ ಕ್ಷೇತ್ರದಲ್ಲಿ ಅಪೂರ್ವವಾದ ಪ್ರಭಾವವನ್ನುಂಟುಮಾಡಿತು. ಇದು ಅದರ ಸಾಹಿತ್ಯಿಕ ಕ್ಷೇತ್ರದ ಮೌಲ್ಯಮಾಪನವಲ್ಲ; ಆದರೆ ಒಟ್ಟಾರೆಯಾಗಿ ಆಧುನಿಕ ಸಂದರ್ಭದಲ್ಲಿ ಅಪೂರ್ವವಾದ ಪ್ರಭಾವವೇ.

ಈಗ ಸಂಘಟನೆ ಶಿಥಿಲವಾಗಿದೆ. ಈ ಏಳುಬೀಳುಗಳಿಗೆ ಕೆಲವು ನೇತಾರರನ್ನು ಕಾರಣರನ್ನಾಗಿ ತೋರಿಸಲಾಗುತ್ತದೆ. ಇದು ಮೇಲಿಂದ ಕಾಣುವ ಕಾರಣ. ಆದರೆ ಅದನ್ನೂ ಒಳಗೊಂಡು ಇನ್ನೂ ನಿಗೂಢ ಕಾರಣಗಳೇ ಇರುತ್ತವೆ. ಇದು ಬಂಡಾಯ ಸಾಹಿತ್ಯ ಚಳುವಳಿಗೆ ಮಾತ್ರ ಸಂಬಂಧಿಸಿದ್ದಲ್ಲ, ಅದು ಪ್ರಗತಿಶೀಲ, ಪ್ರಗತಿಪಂಥದ ಸಂದರ್ಭ ಹಾಗೂ ಎಡಪಂಥೀಯ ರಾಜಕೀಯಕ್ಕೂ ಸಂಬಂಧಿಸಿದ್ದಾಗಿದೆ. ಸಮಾಜದ ಪಟ್ಟಭದ್ರ ಹಿತಾಸಕ್ತರ ಸಂಖ್ಯೆ ಚಿಕ್ಕದಾದರೂ ಅದರ ಶಕ್ತಿ ಬಹುಸಂಖ್ಯಾತರನ್ನು ಬಲಿ ತೆಗೆದುಕೊಳ್ಳುತ್ತದೆ. ಅವರ ಧ್ವನಿಯನ್ನು ಹತ್ತಿಕ್ಕಿ ತನ್ನ ಯಜಮಾನಿಕೆಯನ್ನು ಪ್ರಬಲಪಡಿಸುತ್ತದೆ. ಅಂಥ ಯಜಮಾನಿಕೆಗೆ ಒಳಗಾಗುವ ದಲಿತಶಕ್ತಿ ಕ್ಷೀಣಿಸುತ್ತದೆ. ಈಗ ನಮ್ಮ ಮುಂದಿರುವ ಸಾಮಾಜಿಕ ಬಿಕ್ಕಟ್ಟುಗಳೇ ಅದಕ್ಕೆ ಸಾಕ್ಷಿಯಾಗಿವೆ. ನಮ್ಮ ಯಾವ ಸಮಸ್ಯೆ ಪರಿಹಾರವಾಗಿದೆ ? ಅಸ್ಪೃಶ್ಯತೆಯೇ ? ಲಿಂಗ ಭೇದವೇ ? ನಿರುದ್ಯೋಗ ನಿವಾರಣೆಯೇ ? ಬಡತನ ನಿವಾರಣೆಯೇ ? ಧಾರ್ಮಿಕ ಮೌಢ್ಯವೇ ? ಅನಕ್ಷರತೆಯೇ ? ರಾಜಕೀಯ ಭ್ರಷ್ಟತೆಯೇ ? ಕೋಮುವಾದವೇ ? ಇವುಗಳ ನಿವಾರಣೆಯಂತಿರಲಿ, ದಿನೇ ದಿನೇ ಇವು ಹಿಗ್ಗುತ್ತಲೇ ಇವೆ, ಪ್ರಚ್ಛನ್ನತೆಯಿಂದ ಮರೆಯುತ್ತಲಿವೆ, ಬೆಳೆಯುತ್ತಲಿವೆ. ಇವು ಸಾಂಸ್ಕೃತಿಕ ಕ್ಷೇತ್ರವನ್ನು ಕಬಳಿಸುವ ರೀತಿಯಂತೂ ಭಯಾನಕವೇ ಆಗಿದೆ.

ಈಗ ಕೋಮುವಾದ ಎಂಬುದು ಮರೆಮಾಚಿ ಹೇಳುವ ವಿಷಯವಾಗಿ ಉಳಿದಿಲ್ಲ. ಅದೊಂದು ದೇಶೀಯ ರಾಜ ನೀತಿಯು ಕೂಡಾ ಆಗುತ್ತಿದೆ. ಕೋಮುವಾದ ಎಂದೊಡನೆ ಅದನ್ನು ಧರ್ಮಕ್ಕೆ ಹೊಂದಿಸಿಯೋ, ಧರ್ಮ ಎಂದೊಡನೆ ಬ್ರಾಹ್ಮಣರಿಗೆ ಹೊಂದಿಸಿಯೋ ಹೇಳಲಾಗುತ್ತದೆ. ವಸ್ತುಸ್ಥಿತಿ ಅದಲ್ಲ; ಆದರೆ ಅದೊಂದು ರಾಜಕೀಯ ತಂತ್ರ ಎನ್ನುವುದೇ ತಿಳಿಯದಂತಾಗುತ್ತದೆ. ಧಾರ್ಮಿಕ ನಂಬಿಕೆಗೂ ಮೂಲಭೂತವಾದಕ್ಕೂ ಮತ್ತು ಕೋಮುವಾದಕ್ಕೂ ಇರುವ ಸೂಕ್ಷ್ಮ ವ್ಯತ್ಯಾಸವನ್ನು

ಗ್ರಹಿಸಬೇಕು. ಧಾರ್ಮಿಕ ನಂಬಿಕೆ ಉಳ್ಳವರೆಲ್ಲ ಮೂಲಭೂತವಾದಿಗಳಲ್ಲ. ಧಾರ್ಮಿಕ ಆಚರಣೆಗೆ, ಪ್ರಚಾರಕ್ಕೆ (ಅನ್ಯಾಕ್ರಮಣವಾಗದಂತೆ) ನಮ್ಮ ಸಂವಿಧಾನವೇ ಮೂಲಭೂತ ಹಕ್ಕನ್ನಾಗಿ ಅಧಿಕಾರ ಕೊಟ್ಟಿದೆ. ಅದು ಕೋಮುವಾದಿಯಾಗುವುದಿಲ್ಲ. ಆದರೆ ಮೂಲಭೂತವಾದವು ಪುರೋಹಿತ, ಮುಲ್ಲಾ, ಪಾದ್ರಿ ಕಡೆಗೆ ಆಯಾ ಮತದ ಅನುಯಾಯಿಗಳ ಜುಟ್ಟನ್ನು ಕೊಡುತ್ತದೆ. ಅದರ ಆಗ್ರಹ ತನ್ನ ಧಾರ್ಮಿಕ - ಗ್ರಂಥದಲ್ಲಿರುವುದಕ್ಕೆ (ಮನುಧರ್ಮಶಾಸ್ತ್ರ, ಕುರಾನ್, ಬೈಬಲ್ ಇತ್ಯಾದಿ) ಚಾಚು ತಪ್ಪದಂತೆ ವ್ಯಕ್ತಿ ತನ್ನ ಆಚರಣೆಯನ್ನಿಟ್ಟುಕೊಳ್ಳಬೇಕು ಎಂಬುದು. ಮನುಷ್ಯ ಜಗತ್ತು ಇರುವ ತನಕ ಹೇಗಿರಬೇಕೆಂಬುದನ್ನು ಅದರಲ್ಲಿ ಬರೆದಿಟ್ಟಾಗಿದೆ. ಅದಕ್ಕೆ ತಿದ್ದುಪಡಿ, ಸುಧಾರಣೆ, ಉದಾರತೆ ಸಲ್ಲದು. ಇದೊಂದು ಧಾರ್ಮಿಕ ಮೌಢ್ಯ ಎಂದಾಗಬಹುದೆ ಹೊರತು ಅನ್ಯ ಧರ್ಮೀಯರ ಮೇಲೆ ಆಕ್ರಮಣ ಇರುವುದಿಲ್ಲ. ಆದರೆ ಕೋಮುವಾದ ಹೀಗಲ್ಲ. ''ರಾಜಕೀಯ ಅಧಿಕಾರಕ್ಕಾಗಿ ಒಂದು ಧರ್ಮದ ಅನುಯಾಯಿಗಳನ್ನು ಇನ್ನೊಂದು ಧರ್ಮದ ವಿರುದ್ಧ ಎತ್ತಿಕಟ್ಟುವುದು ಮತ್ತು ಬಹುಸಂಖ್ಯಾತರ ಸಂಸ್ಕೃತಿಗೆ ಅಲ್ಪ ಸಂಖ್ಯಾತರು ಹೊರಗಿನವರು ಎಂದು ವಾದಿಸಿ ಅವರ ಬಗ್ಗೆ ದ್ವೇಷ ತಿರಸ್ಕಾರಗಳನ್ನು ಬೆಳೆಸುವುದು'' ಅದರ ಲಕ್ಷಣ. ಇದನ್ನು ದೇವರ, ಸಂಸ್ಕೃತಿಯ, ಭಾಷೆಯ ಮತ್ತು ಧರ್ಮದ ಹೆಸರಿನಲ್ಲಿ ಸತತವಾಗಿ ಪ್ರಚಾರ ಮಾಡಲಾಗುತ್ತದೆ. ಆರ್.ಎಸ್. ಎಸ್., ಭಜರಂಗದಳ, ಶಿವಸೇನೆ ಮುಂತಾದ ಸಂಘಪರಿವಾರದ ಸಂಘಟನೆಗಳು ಇದನ್ನೇ 'ಹಿಂದುತ್ವ' ಎಂದು ಚಾಲ್ತಿಗೆ ತಂದು ಎಲ್ಲ ಹಿಂದೂಗಳನ್ನು ಒಳಗೊಳ್ಳುವಂತೆ ಮಾಡಲು ಹುನ್ನಾರವನ್ನು ರಚಿಸಿ ಕೊಂಡಿವೆ. ಇದರಂತೆಯೇ ಇಸ್ಲಾಂ, ಕ್ರೈಸ್ತಧರ್ಮಗಳೂ ಮಾಡುತ್ತವೆ.

ಹಿಂದುತ್ವದ ಈಗಿನ ವ್ಯವಹಾರಗಳಲ್ಲಿ ಅತ್ಯಂತ ಅಪಾಯಕಾರಿಯಾದದ್ದೆಂದರೆ ಶಿಕ್ಷಣ ಕ್ಷೇತ್ರದಲ್ಲಿ ಮೌಢ್ಯವನ್ನು, 'ಹಿಂದುತ್ವ'ವನ್ನು ತುಂಬುವುದಾಗಿದೆ. ಇದು ಮೇಲ್ನೋಟಕ್ಕೆ ಕಣ್ಣಿಗೆ ಕಾಣುವುದಿಲ್ಲ. ಇದು ''ಚಿಕ್ಕವರಿದ್ದಾಗಲೇ ಕಲಿಸು'' ಎಂಬ ಮನೋವಿಜ್ಞಾನದ ತತ್ವವನ್ನಾಧರಿಸಿದ ತಂತ್ರವಾಗಿದೆ. ಪಠ್ಯಪುಸ್ತಕದಲ್ಲಿಯೇ ಮತೀಯವಾದ, ಅನ್ಯಧರ್ಮ ದ್ವೇಷಗಳನ್ನು ತುಂಬಿ ಅದನ್ನೇ ಸತ್ಯ ಮತ್ತು ಸಭ್ಯ ಎಂಬಂತೆ ಕಲಿಸಲಾಗುತ್ತದೆ. ಇದಕ್ಕೆ ಅನುಕೂಲವಾಗಬೇಕೆಂದು ರಾಷ್ಟ್ರಮಟ್ಟದ ಸಮಾಜ ವಿಜ್ಞಾನ ಸಂಶೋಧನಾ ಸಂಸ್ಥೆ, ಇತಿಹಾಸ ಸಂಶೋಧನಾ ಸಂಸ್ಥೆ ಮೊದಲಾದವುಗಳಲ್ಲಿ ಮೊದಲು ಇದ್ದ ಸೆಕ್ಯುಲರ್ ಮತ್ತು ಎಡಪಂಥೀಯ ಒಲವಿನವರಾದ, ಸಮತೂಕದ ಪ್ರಾಜ್ಞರಾದ ಆರ್. ಎಸ್. ಶರ್ಮಾ, ರೋಮಿಲಾ ಥಾಪರ್, ಇರ್ಫಾನ್ ಹಬೀಬ್ ಮೊದಲಾದವರ ಸ್ಥಾನದಲ್ಲಿ ಮತೀಯವಾದಿಗಳನ್ನು ತುಂಬಲಾಗುತ್ತದೆ. ರಾಷ್ಟ್ರೀಯ ಶಿಕ್ಷಣ, ಸಂಶೋಧನೆ ಮತ್ತು ತರಬೇತಿ ಸಂಸ್ಥೆಗೆ ನೇಮಿಸಿದ ರಸ್ತೋಗಿ ಎಂಬುವರಂತೂ ಉನ್ನತ ಆರ್. ಎಸ್. ಎಸ್.ನ ಸ್ವಯಂಸೇವಕರೇ ಆಗಿದ್ದರು.

ಇದೀಗ ಚಾಲ್ತಿಯಲ್ಲಿರುವ ಇನ್ನೊಂದು ವಿದ್ಯಮಾನವೆಂದರೆ ವಿಶ್ವವಿದ್ಯಾಲಯದ ಪಠ್ಯಗಳಲ್ಲಿ ವೈದಿಕ-ಕರ್ಮಕಾಂಡಗಳನ್ನು ಮತ್ತು ಜ್ಯೋತಿಷವನ್ನು ಸೇರಿಸುತ್ತಾರೆ ಎಂಬುದು. ಇನ್ನೂತನಕ ಕೇವಲ ನಂಬಿಕೆಯ ಮತ್ತು ಅವರವರ ಖಾಸಗಿ ವಿಷಯವಾದ ಜ್ಯೋತಿಷ ಮತ್ತು ಕರ್ಮಕಾಂಡವನ್ನು ಪದವಿಗೆ ತರುವುದರ ಮೂಲಕ ಅವೈಜ್ಞಾನಿಕತೆಯನ್ನು ಅಧಿಕೃತಗೊಳಿಸಲಾಗುತ್ತದೆ. ಇವೆಲ್ಲಾ ವ್ಯಕ್ತಿಯ ಬದುಕಿನ ಹೋರಾಟವನ್ನು ಹೊಸಕಿಹಾಕುತ್ತವೆ. ಅದು ಕರ್ಮಸಿದ್ಧಾಂತದ ಹಿನ್ನೆಲೆ ಹೊಂದಿರುವುದರಿಂದ ಜಾತಿ, ವರ್ಣ, ಬಡತನ, ಸಿರಿತನ, ವೈಧವ್ಯ ಇತ್ಯಾದಿಗಳನ್ನು ದೈವೀಕರಿಸಲಾಗುತ್ತಿದೆ.

ಇವೆಲ್ಲವುಗಳ ಹಿಂದೆ ಇರುವ ಹುನ್ನಾರ ಇನ್ನೂ ಗೂಢ. ಭಾರತದಲ್ಲಿ ಅನೇಕ ಧರ್ಮ, ಜಾತಿ, ಜನಾಂಗಗಳಿವೆ. ಅವುಗಳಿಗೆಲ್ಲ ಹುಟ್ಟು, ಸಾವು, ಮದುವೆ, ಪೂಜೆ ಇತ್ಯಾದಿಗಳಿಗೆ ಅವರವರದೇ ವಿಧಾನಗಳಿವೆ; ಆಚರಣೆಗಳಿವೆ.




ಹೀಗಿರುವ ವೈವಿಧ್ಯತೆಯನ್ನು ಹೊಡೆದುಹಾಕಿ ಭಾರತೀಯ ಸಂಸ್ಕೃತಿ ಎಂಬುದು ಏಕ ಮತ್ತು ಅದು ವೈದಿಕ (ಹಿಂದೂ) ಎಂದು ವಿದ್ಯಾಭ್ಯಾಸದ ಹಂತದಲ್ಲೇ ಮನಸ್ಸನ್ನು ಮರುಳುಗೊಳಿಸುವುದರಿಂದ ಆರ್. ಎಸ್. ಎಸ್. ನ ಹುಟ್ಟಿನ ಸಂದರ್ಭದಲ್ಲಿ ಹೆಡ್ಗೆವಾರ್ ''ಕೆಳಜಾತಿಗಳ ಸಹಾಯವನ್ನು ನಂಬಿಕೊಂಡು ಮುಸ್ಲಿಂರನ್ನು ತರಿದುಹಾಕುವುದು ಸಾಧ್ಯವಿಲ್ಲ'' ಎಂದು ಹೇಳಿದ ಮಾತಿನ ಉದ್ದೇಶಕ್ಕೆ ಬ್ರಾಹ್ಮಣರನ್ನೊಳಗೊಂಡು ದಲಿತರವರೆಗಿನ ಹೊಸ ಪೀಳಿಗೆಯನ್ನೇ ಅನ್ಯಧರ್ಮೀಯರನ್ನು ತರಿದು ಹಾಕಲಿಕ್ಕೆ ಸಿದ್ಧಪಡಿಸುವ ಮತ್ತು ಸಂಸ್ಕೃತಿಯ ಹೆಸರಿನಲ್ಲಿ ಪುರೋಹಿತಶಾಹಿಯ ಪುನರುತ್ಥಾನ ಮಾಡುವ ಅದ್ಭುತವಾದ ತಂತ್ರವೇ ಅಡಗಿದೆ.

ಮತ್ತೊಂದು ಭೂತ ಜಾಗತೀಕರಣ, ಮುಕ್ತ ಮಾರುಕಟ್ಟೆ ಇತ್ಯಾದಿ. ಇದರ ದುಷ್ಪರಿಣಾಮವೆಂದರೆ ಅಭಿವೃದ್ಧಿಶೀಲ ರಾಷ್ಟ್ರಗಳ ಸ್ವಂತದ ಬೆಳವಣಿಗೆಯನ್ನು, ಆತ್ಮವಿಶ್ವಾಸವನ್ನು ನಾಶಮಾಡಿ ಅವುಗಳನ್ನು ದಿವಾಳಿಕೋರ ರಾಷ್ಟ್ರವನ್ನಾಗಿ ಮಾಡುವುದೇ ಆಗಿದೆ. ಜಗತ್ತಿನೊಡನೆಯ ಕೊಡುಕೊಳೆ ನಮಗೆ ಹೊಸದಲ್ಲ. ಆದರೆ ಇಂದಿನ ಪರಿ ಬೇರೆಯದೇ ಆಗಿದೆ. ಈ ಜಾಗತಿಕ ಪಂಚಾಯತದ ಯಜಮಾನ ಅಮೇರಿಕ. ನಮ್ಮ ಸರಕಾರ ಯಾವ ಪ್ರಮಾಣದಲ್ಲಿ ನೌಕರರನ್ನು ತೆಗೆದುಕೊಳ್ಳಬೇಕು ? ಹೇಗೆ ಖಾಸಗೀಕರಣ ಮಾಡಬೇಕು ? ರೈತರಿಗೆ ಎಷ್ಟು ಸಬ್ಸಿಡಿ ಕೊಡಬೇಕು ? ನಮ್ಮ ರೈತ ಬೆಳೆಯಬೇಕಾದ ಬೆಳೆ ಯಾವುದು ? ಬೀಜ ಎಲ್ಲಿಂದ ಕೊಳ್ಳಬೇಕು, ನಮ್ಮ ದೇಶದ ಯಾವ ವನಸ್ಪತಿಯನ್ನು ನಾವು ಔಷಧಕ್ಕಾಗಿ ಬಳಸಬಹುದು ಇತ್ಯಾದಿಗಳನ್ನು ಇವರ ಅಪ್ಪಣೆಯಿಂದಲೇ ತಿಳಿದುಕೊಳ್ಳಬೇಕು !! ಕೊನೆಗೆ ನಮ್ಮ ಬಜೆಟ್ ತಯಾರಿಸಿಕೊಡುವುದು ಅಮೇರಿಕಾವೇ ಆಗುತ್ತದೆ. ಇದನ್ನು ನೋಡಿದಾಗ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಯ ಗವರ್ನರ್ ವೆಲ್ಲೆಸ್ಲಿ ತಂದ 'ಸಹಾಯಕ ಸೈನಿಕ ಯೋಜನೆ'ಯ ನೆನಪಾಗುತ್ತದೆ. ಆ ಯೋಜನೆ ನಮ್ಮ ದೇಶದ ಸಂಸ್ಥಾನಿಕರಿಗಾಗಿ ಇತ್ತು. ಸಂಸ್ಥಾನಿಕರು ಪದ್ಧತಿಯಂತೆ ರಾಜರೇ ಆಗಿರುತ್ತಾರೆ. ಅವರ ರಕ್ಷಣೆಗಾಗಿ ಇಂಗ್ಲಿಷ್ ಕಂಪೆನಿ ಸಹಾಯಕ ಸೈನ್ಯವನ್ನಿಡುತ್ತದೆ. ಅದರ ವೆಚ್ಚವನ್ನು ರಾಜರೇ ಕೊಡಬೇಕು. ಆದರೆ ಸೈನ್ಯವನ್ನು ಉಪಯೋಗಿಸುವಾಗ ಗವರ್ನರನ ಅಪ್ಪಣೆ ಬೇಕು. ಇಂಗ್ಲಿಷರ ಹೊರತಾಗಿ ಬೇರೆಯವರಲ್ಲಿ ಸೈನಿಕ ಒಪ್ಪಂದ ಮಾಡಿಕೊಳ್ಳಕೂಡದು. ಹಾಗಿದ್ದರೂ ಆಗ ನಮ್ಮ ವೈರಿ ಎದುರಿಗೇ ಇದ್ದ. ಆದ್ದರಿಂದ ಅವರ ವಿರುದ್ಧ ಹೋರಾಟ ಸಾಧ್ಯವಾಯಿತು. ಆದರೆ ಇಂದಿನ ಯೋಜನೆಯಲ್ಲಿ ವೈರಿ ನಮ್ಮೆದುರು ಇರುವುದೇ ಇಲ್ಲ. ಆಗ ಹೇಗೆ ಭಾರತೀಯರನ್ನು ಇಂಗ್ಲಿಷರು ತಮ್ಮ ಆಡಳಿತ ನಡೆಸಲು ನೇಮಿಸಿಕೊಳ್ಳುತ್ತಿದ್ದರೋ ಹಾಗೆ ಇಂದು ಅಮೇರಿಕ ನಮ್ಮ ಪ್ರಧಾನಮಂತ್ರಿ, ಮತ್ತಿತರ ಮಂತ್ರಿಗಳನ್ನು ನೇಮಿಸಿಕೊಳ್ಳುತ್ತದೆ. ನಾವು ಸರಕಾರವನ್ನು ನಮ್ಮ ಸಂವಿಧಾನದ ರೀತ್ಯಾ ಆರಿಸಿದ್ದೇವೆ ಎಂದು ಕೊಳ್ಳುತ್ತೇವೆ ಅಷ್ಟೆ! ಈ ಜಾಗತೀಕರಣದ ಮುಕ್ತ ಮಾರುಕಟ್ಟೆಯ ಪರಿಣಾಮ ಅತ್ಯಂತ ಸೂಕ್ಷ್ಮ ಗ್ರಹಿಕೆಗೆ ಮಾತ್ರ ನಿಲುಕುವಂತಹುದಾಗಿದೆ. ತೀರ ಸರಳೀಕರಣದ ವಿವರ ಇದು.

ಕರ್ನಾಟಕ, ಕೇರಳ, ಪಶ್ಚಿಮ ಬಂಗಾಲದ ಹೊರತಾಗಿ

ಉಳಿದ ಕಡೆ ಭೂಸುಧಾರಣೆಯೇ ಜಾರಿಗೆ ಬರಲಿಲ್ಲ. ಕರ್ನಾಟಕದಲ್ಲೋ ಅದು ಹೆಸರಿಗೆ ಮಾತ್ರ. ಕರಾವಳಿ ಜಿಲ್ಲೆಗಳನ್ನು ಬಿಟ್ಟರೆ ಉಳಿದ ಕಡೆ ಊಳಿಗಮಾನ್ಯ ವ್ಯವಸ್ಥೆ ಜೀವಂತವಿದೆ.

ಈ ಜಾಗತೀಕರಣದ ನೆಪದಲ್ಲಿ 'ದೇಶೀ ಚಿಂತನೆ' ಎಂಬುದೊಂದು ಹುಟ್ಟಿಕೊಂಡಿದೆ. ಈ ದೇಶೀ ಚಿಂತನೆ ಒಬ್ಬೊಬ್ಬರ ಪಾಲಿಗೆ ಒಂದೊಂದಾಗಿದೆ. ಎಷ್ಟೋಸಲ ಬಹಳ ಬುದ್ಧಿವಂತರು ಕಂಡುಕೊಳ್ಳುವ ದರ್ಶನವು ವ್ಯವಹಾರದಲ್ಲಿ ವಿಪರ್ಯಾಸವಾಗುತ್ತದೆ - ಕಾರ್ನಾಡರ ತುಘಲಕದಲ್ಲಿ ತುಘಲಕನ ಧಾರ್ಮಿಕ ಸಾಮರಸ್ಯ, ಮತ್ತಿತರ ಸುಧಾರಣೆಗಳು ಅಝೀಜ್, ಅಜಮ್‌ರಲ್ಲಿ ವಿಪರ್ಯಾಸ ಆದಂತೆ.

ಹಿಂದೆ ಕನ್ನಡ ಪ್ರಾಮುಖ್ಯತೆಗಾಗಿ ಹೋರಾಡಿ ಸಂಸ್ಕೃತವನ್ನು ಯಜಮಾನಿಕೆಯಿಂದ ಇಳಿಸಲಾಗಿತ್ತು. ಆದರೆ ಮನಸ್ಸಿನ ಯಜಮಾನಿಕೆ ಒಂದು ಚಳುವಳಿಗೆಲ್ಲ ಹೋಗುವುದಲ್ಲ. ಆದರೆ ಇಂದು ಸ್ವತಃ ಸರಕಾರ ಸಂಸ್ಕೃತಕ್ಕಾಗಿ ವಿಶೇಷ ಧನಸಹಾಯ ಮಾಡುತ್ತಿದೆ. ನಮ್ಮ ಕಡೆ ಯಾವ ಮಠದ ಸ್ವಾಮಿಗಳ ಬಾಯಲ್ಲೂ ಒಂದೇ ಮಾತು; ಸಂಸ್ಕೃತ ಕಲಿಯುವುದರಿಂದ ಸಂಸ್ಕೃತಿ ಬೆಳೆಯುತ್ತದೆ ! ಇದೂ ದೇಶೀ ಚಿಂತನೆಯ ಒಂದು ಭಾಗವೇ. ಯಾಕೆಂದರೆ ಇಂಗ್ಲಿಷಿನ ಎದುರು ಸಂಸ್ಕೃತವೂ 'ದೇಶೀ'. ಈ ಮಧ್ಯೆ ಕನ್ನಡ ಪರದೇಶಿ. ಇವೆಲ್ಲ ಈಗ ಹೊಸದಾಗಿ ಸೇರ್ಪಡೆಯಾದ ಸಮಸ್ಯೆಗಳಾಗಿವೆ.

ಅಸ್ಪೃಶ್ಯತೆ ಹೋಗಿದೆಯೇ ? ಜಾತಿ ಎಲ್ಲಿದೆ, ಅಸ್ಪೃಶ್ಯತೆ ಎಲ್ಲಿದೆ ಎಂದು ಕೆಲವು ದೊಡ್ಡ ಲೇಖಕರೂ ಕೂಡ ಅಪ್ಪಣೆ ಕೊಡಿಸುತ್ತಾರೆ. ಆದರೆ ದಲಿತರ ಹೆಣ ಬೀಳುತ್ತಲೇ ಇದೆ. ಲಿಂಗಭೇದವನ್ನೇ ಆಧರಿಸಿ ಎಲ್ಲ ಹೆಂಗಸರೂ ಅಸ್ಪೃಶ್ಯರೇ ಎಂದು ಸಮೀಕರಣ ಮಾಡಿ ಕೃತಿ ರಚಿಸುವವರೂ ಇದ್ದಾರೆ. ಹಿಂದೊಮ್ಮೆ ದ್ವಾರಕಾ ಮಠದ ಶಂಕರಾಚಾರ್ಯರು ಅಸ್ಪೃಶ್ಯತೆಯನ್ನು ಸಮರ್ಥಿಸಿ ಮಾತನಾಡುತ್ತ ಅಸ್ಪೃಶ್ಯರನ್ನು ದೂರವಿಟ್ಟ ಮಾತ್ರಕ್ಕೆ ಕೀಳೆಂದು ಅರ್ಥವಲ್ಲ; ಬ್ರಾಹ್ಮಣರ ಮನೆಯಲ್ಲಿಯೂ ಮುಟ್ಟಾದ ಹೆಂಗಸರು ನಾಲ್ಕು ದಿನ ಹೊರಗಿರುವುದಿಲ್ಲವೇ ಎಂದರಂತೆ. ಆಗ ಆ ಸಭೆಯಲ್ಲಿ ಹಾಜರಿ ಇದ್ದ ಎಸ್. ಎಂ. ಜೋಶಿಯವರು ಎದ್ದುನಿಂತು 'ಆದರೆ ಸ್ವಾಮೀಜಿ, ಆ ಹೆಂಗಸಿನ ಪಾಲಿಗೆ ಐದನೇ ದಿನ ಒಂದು ಬರುತ್ತದೆ. ಈ ಅಂತ್ಯಜರ ಭಾಗ್ಯದಲ್ಲಿ ಈ ಐದನೇ ದಿನ ಬರುವುದು ಯಾವಾಗ' ಎಂದರಂತೆ.

ಇಂಥ ಸಂದರ್ಭಗಳಲ್ಲಿ ಲೇಖಕರಲ್ಲಿ (ಜನರಲ್ಲೂ ಕೂಡಾ) ಎರಡು ಪ್ರವೃತ್ತಿಗಳು ತಲೆ ಎತ್ತುತ್ತವೆ. ಒಂದನೆಯದಾಗಿ ವ್ಯವಸ್ಥೆಯ ಕುರಿತು ಅಪನಂಬಿಕೆ, ಭಯ, ನಿರಾಶೆ. ಇದರ ಪರಿಣಾಮವಾಗಿ ಏಕಾಕಿತನ, ಬದುಕಿನ ಅಸಂಗತತೆ ಕುರಿತಾದ ಚಿಂತನೆ ಮತ್ತು ಲೋಲುಪತೆ ಇತ್ಯಾದಿಗಳು. ಇನ್ನೊಂದು, ಈ ಎಲ್ಲದರ ಮಧ್ಯೆಯೂ ಈ ವ್ಯವಸ್ಥೆಯನ್ನೇ ಪಲ್ಲಟಗೊಳಿಸಬೇಕು, ಬದುಕನ್ನು ಸಹ್ಯಗೊಳಿಸಬೇಕು, ಶರಣಾಗತಿ ಸಲ್ಲದು ಎಂಬ ಹೋರಾಟದ, ಸಂಘರ್ಷದ ಕಿಚ್ಚು. ಹೀಗಾಗಿ ಬರಹಗಾರರಲ್ಲಿ ಮೊದಲ ಮನುಷ್ಯರು 'ನವ್ಯ' ಪಂಗಡದವರಾಗುತ್ತಾರೆ; ಎರಡನೇ ಪಂಗಡದವರು ಸಮಾಜವಾದಿ, ಮಾನವತಾವಾದಿ, ಪ್ರಗತಿಶೀಲ, ಬಂಡಾಯದವರಾಗುತ್ತಾರೆ.

ನಮ್ಮಲ್ಲೂ 'ನವ್ಯ' ಆಗಿಹೋಯಿತು. (ಯಾವುದೂ ಆಗಿಹೋಗುವುದಿಲ್ಲ. ನವ್ಯದಲ್ಲಿ ಇದ್ದ ಧನಾತ್ಮಕತೆ ಮುಂದುವರಿಯುತ್ತದೆ). ಅದಕ್ಕೆ ಅವರು ಆಗಿನ ಸಮಾಜದ, ರಾಜಕೀಯದ ಆಶಾರಾಹಿತ್ಯವೇ ಕಾರಣ ಎಂದರು. ಖರೆ ಎಂದರೆ ಆಗಿನಕ್ಕಿಂತ 'ನವ್ಯ' ತಲೆ ಎತ್ತಲು ಈಗ ಪರಿಸ್ಥಿತಿ ಹೆಚ್ಚು ಪುಷ್ಟಿಯನ್ನೊದಗಿಸೀತು. ಅಂಥ ಭೀಕರತೆ ಇಂದು ಇದೆ. ಆದ್ದರಿಂದ ಇಂದು ಬಂಡಾಯ ಸಂಘಟನೆ ವ್ಯಾಪಕವಾಗಬೇಕಾದ ಮತ್ತು ಬಲಗೊಳ್ಳ ಬೇಕಾದ ಅವಶ್ಯಕತೆಯಿದೆ. ಬಂಡಾಯ ಸಂಘಟನೆಯಲ್ಲಿ ಪ್ರಗತಿಪರವಾದ ಅಂಬೇಡ್ಕರ್, ಮಾರ್ಕ್ಸ್, ಲೋಹಿಯಾ ವೈಚಾರಿಕತೆಗೆ, ಗಾಂಧಿವಾದಕ್ಕೆ, ಸೇರಿದ ಬರಹಗಾರರಿದ್ದಾರೆ. ಅದು ಆರೋಗ್ಯಕರವಾದುದು. ಅದು ಇನ್ನೂ ವಿಸ್ತಾರಗೊಳ್ಳಬೇಕು. ನೇತಾರರನ್ನು ಅಲ್ಲಲ್ಲಿಯೇ ಸೃಷ್ಟಿಸಿಕೊಳ್ಳಬೇಕು. ವಿಕೇಂದ್ರೀಕರಣ ಇಂದಿನ ಒಂದು ವೈಚಾರಿಕತೆ ಕೂಡ ಹೌದು. ಈ ನೇತೃತ್ವವನ್ನು ಹೊಸ ತಲೆಮಾರಿನವರೇ ಹೊರಬೇಕು. 'ಪ್ರಗತಿಶೀಲ' ಸ್ಥಗಿತವಾದಾಗ 'ಪ್ರಗತಿ ಪಂಥ'ವನ್ನು ಕಟ್ಟಲು ನಿರಂಜನ, ಕಟ್ಟೀಮನಿ ಮೊದಲಾದವರು ಪ್ರಯತ್ನಿಸಿದರೂ (ನಿರಂಜನ ಇದನ್ನು ಪ್ರಗತಿಶೀಲದ ಪುನರುತ್ಥಾನ ಎಂದಿದ್ದಾರೆ) ಅದು ಯಶಸ್ವಿಯಾಗಲಿಲ್ಲ. ಅದಕ್ಕೆ ಪರಿಸ್ಥಿತಿ ಕಾರಣವಾದಂತೆ ಪೀಳಿಗೆಯ ಬದಲಾವಣೆ ಆಗದಿದ್ದುದೂ ಕಾರಣವಿರಬಹುದಲ್ಲವೇ ? ಶೋಷಣೆಗೆ ಗುರಿಯಾದ ದಲಿತರು ಪಶ್ಚಿಮದ 'ನವ್ಯ'ರಿಗೆ ನಿರುಪಯೋಗಿ, ನಗಣ್ಯರಾಗಿ ಕಂಡರೆ, ಅದೇ ಜನ ಮಾರ್ಕ್ಸ್‌ನಿಗೆ ಇಡೀ ಸಮಾಜ ವ್ಯವಸ್ಥೆಯ ಬೇಡಿಯಿಂದ ಬಿಡುಗಡೆ ಮಾಡುವ ಉಜ್ವಲ ಶಕ್ತಿಗಳಾಗಿ, ಹೊಸ ಸಮಾಜದ ಹರಿಕಾರರಾಗಿ ಕಂಡರು. ಇದು ಬಂಡಾಯ ಕಂಡುಕೊಳ್ಳುವ ದಾರಿ. ಆದ್ದರಿಂದ ಈ ಕಾಲದ ಆಯ್ಕೆ ಇದಾಗಿದೆ. ಅದೇ ಕಾರಣಕ್ಕೆ ಬಂಡಾಯ ಇನ್ನೂ ವಿಶಾಲ, ವಿಸ್ತಾರ ಆಗಬೇಕು.

ಬಂಡಾಯ ಕಾರ್ಯಕ್ರಮ ಹಮ್ಮಿಕೊಳ್ಳುವಾಗ ಮತ್ತು ವಿಮರ್ಶೆ ವಿಶ್ಲೇಷಣೆಗಳಲ್ಲಿ ತೊಡಗಿದಾಗ, ಬಂಡಾಯದಲ್ಲಿ ಗುರುತಿಸಿಕೊಂಡವರು ಮತ್ತು ಹೊರಗಿನವರು ಎಂಬ ಕಣ್ಕಟ್ಟನ್ನು ಬಿಟ್ಟುಬಿಡಬೇಕು. ಯಾಕೆಂದರೆ ಇಂದಿನ ಸಾಮಾಜಿಕ ಪರಿಸ್ಥಿತಿಯಲ್ಲಿ ಪ್ರಗತಿಪರ, ಸೆಕ್ಯುಲರ್ ಮತ್ತು ಒಟ್ಟನಲ್ಲಿ ಜನಪರವಾದ ನಿಲುವಿನ ಅನೇಕ ಬರಹಗಾರರಿದ್ದಾರೆ. ಹೊಸ ತಲೆಮಾರಿನ ಲೇಖಕರಲ್ಲಂತೂ ಇಂಥ ಸಾಮಾಜಿಕ, ಜನಪರ ಒಲವುಳ್ಳವರೇ ಹೆಚ್ಚು ಜನ. ಅವರ ಕೃತಿ ಮತ್ತು ಮಾತುಗಳಲ್ಲಿ ಕಲಾತ್ಮಕತೆಗೆ ಹೆಚ್ಚಿನ ಗಮನ ಇದ್ದಂತೆ ಮಾನವೀಯ ಅಂಶಕ್ಕೇ ಪ್ರಧಾನ ಸ್ಥಾನವಿದೆ. ಆದರೆ ಯಾಕೋ ಅವರು ಬಂಡಾಯದ ಜೊತೆ ಗುರುತಿಸಿಕೊಳ್ಳಲಿಚ್ಛಿಸುವುದಿಲ್ಲ. ಎಲ್ಲಿ ತಮ್ಮ ವಿಶಿಷ್ಟತೆಗೆ ಭಂಗ ಬಂದೀತೋ ಎಂಬ ಭಯ ಇರಬಹುದು. ಆ ಕಾರಣಕ್ಕಾಗಿ ಅವರನ್ನು ದೂರ ಇಡಬೇಕಿಲ್ಲ. ಅಥವಾ ಬಂಡಾಯಕ್ಕೆ ಹಾಕಿದ ಜೈಕಾರ ಹೆಚ್ಚಾಯಿತು ಎಂದೂ ಇರಬಹುದು. ಅದೇನೇ ಇದ್ದರೂ ಅಂಥವರೆಲ್ಲ ರೊಡನೆಯ ಸಂಪರ್ಕವನ್ನು ಸಾಧಿಸಬೇಕು. ವಿಶ್ವಾಸ ಸಾಧಿಸಬೇಕು. ಹಿರಿಯರನ್ನೊಳಗೊಂಡು ಬಂಡಾಯದ ತಾತ್ವಿಕತೆಗಾಗಿ ಸಹಾನುಭೂತಿ ಉಳ್ಳವರ ದೊಡ್ಡ ಸಂಖ್ಯೆಯೇ ಇದೆ ಎಂಬುದನ್ನು ಮರೆಯಬಾರದು.

ಬಂಡಾಯವೆಂದರೆ ಕೇವಲ 'ಜೈ'ಕಾರ ಎಂದು ಒಂದು ಬ್ರ್ಯಾಂಡು ಬಿದ್ದಿದೆ. ಅದನ್ನು ಯಾರು ಯಾಕೆ ಉಂಟುಮಾಡಿದರು ಎಂಬ ಚರ್ಚೆ ಇಲ್ಲಿ ಬೇಡ. ಆದರೆ 'ಬಂಡಾಯ' ಕೇವಲ 'ಜೈ'ಕಾರಕ್ಕೆ ಮೀಸಲು ಎಂಬುದಿದ್ದರೆ ಅದು ತೀರಾ ತಪ್ಪುಗ್ರಹಿಕೆ. ಯಾಕೆಂದರೆ 'ಬಂಡಾಯ'ದ ಅಂತಿಮ ಆಶಯ ಇಡೀ ಸಮಾಜದ ಪುನರ್ಘಟನೆ, ಪರಿವರ್ತನೆ, ಸಮಾನತೆ, ಸ್ವಾತಂತ್ರ್ಯ, ಸೋದರತೆ. ಆದ್ದರಿಂದ ಬಂಡಾಯದ ಹೊಸ ತಲೆಮಾರಿನ ಬರಹಗಾರರು ಹೆಚ್ಚು ಗಂಭೀರವಾಗೇ ವಿಷಯವನ್ನು ಗ್ರಹಿಸಬೇಕು. ಬಹಳ ಮುಖ್ಯವಾಗಿ ನಮ್ಮಲ್ಲಿ ಅಧ್ಯಯನಶೀಲತೆ ಮತ್ತು ಕ್ರಿಯಾಶೀಲತೆ ಹೆಚ್ಚಬೇಕು. ಇದು ಮಾತ್ರ ಸಭ್ಯತೆಯ ಸೋಗಿನಲ್ಲಿ ನುಸುಳಿ ಬರುವ ಸಾಂಸ್ಕೃತಿಕ ಪ್ರತಿಗಾಮಿತನವನ್ನು ಗುರುತಿಸುತ್ತದೆ. ಹಾಗೆಯೇ ಜನಪರ ಸಂಸ್ಕೃತಿಯನ್ನು ಎತ್ತಿಹಿಡಿಯುತ್ತದೆ. ದೇವಿಪ್ರಸಾದ ಚಟ್ಟೋಪಾಧ್ಯಾಯ 'ಲೋಕಾಯತ'ದ ಮುಖಾಂತರವಾಗಿ ಇಡಿಯಾಗಿ ಒಂದು ಬಂಡಾಯ ಸಾಂಸ್ಕೃತಿಕ ತತ್ವಜ್ಞಾನವನ್ನು ಕಟ್ಟಿಕೊಡುತ್ತಾರೆ. ಇದಕ್ಕೆ ಅವರು ಹೆಚ್ಚಾಗಿ ಬಂಗಾಲಿ, ಮರಾಠಿ ಜಾನಪದವನ್ನು ಅವಲಂಬಿಸಿದ್ದಾರೆ. ಅವರಿಗೆ ಕನ್ನಡದ ಜಾನಪದದ ಪರಿಚಯವಿದ್ದಿದ್ದರೆ ಇನ್ನಷ್ಟು ವ್ಯಾಪಕವಾಗುತ್ತಿತ್ತು ಅವರ ಮಂಡನೆ. ಅಂಥ ಗಂಭೀರ ಚಿಂತನೆ ಬಂಡಾಯದಲ್ಲಿ ನಡೆಯಬೇಕಿದೆ. ರಹಮತ್ ತರೀಕೆರೆ ತಮ್ಮ *ಕರ್ನಾಟಕದ ಸೂಫಿಗಳು*, ಎಸ್. ಎಸ್. ಹಿರೇಮಠ ಅವರು ಜಾತ್ರೆಗಳು, ಜಿ. ರಾಮಕೃಷ್ಣ ಅವರು ಭಾರತೀಯ ವಿಜ್ಞಾನದ ಹಾದಿ ಗ್ರಂಥಗಳಲ್ಲಿ ಇಂಥ ಗಂಭೀರ ಚಿಂತನೆ ನಡೆಸುತ್ತಾರೆ. ಇದು ನಮ್ಮ ಹೊಸಪೀಳಿಗೆಯಲ್ಲೂ ಮುಂದುವರಿಯಬೇಕು. ಒಂದು ಹೊಸ ಪ್ರಕಟಣೆ ಬಂದೊಡನೆ ನಮ್ಮ ಬಂಡಾಯದವರು ಅದನ್ನು ಎತ್ತಿಕೊಂಡು ವಿಶ್ಲೇಷಿಸಿ, ವಿಮರ್ಶಿಸಿ ಅದರ ಉತ್ತಮಿಕೆಯನ್ನು ಅಥವಾ ಪ್ರತಿಗಾಮಿತನವನ್ನು ಬಯಲಿಗೆಳೆಯಬೇಕು. ಅದು ಸಾಹಿತ್ಯ ಅಕಾಡೆಮಿಯ ಉಪಸಂಸ್ಕೃತಿಯ ಮಾಲೆಯ ಗ್ರಂಥಗಳಾಗಬಹುದು, 'ಅಕ್ಷರ ಚಿಂತನ'ದ್ದಾಗಬಹುದು. ಅದು 'ಸಾರ್ಥ', 'ಹೆಜ್ಜೆ', 'ಬಾಡ'ಗಳಂಥ ಕಾದಂಬರಿಗಳಾಗಬಹುದು. ಅದಿಲ್ಲದೆ ಒಳ್ಳೆಯದನ್ನು ಗುರುತಿಸದೆ, ಕೆಟ್ಟದ್ದನ್ನು ಖಂಡಿಸದೆ ಮೌನವಾದರೆ ಪ್ರತಿಗಾಮಿ ಮತ್ತು ಜನವಿರೋಧಿ ನಿಲುವು ಬೆಳೆದು ಪುಷ್ಟಿಗೊಳ್ಳಲು ಅವಕಾಶವಾಗುತ್ತದೆ. ಕೃತಿ ರಚನೆಯ ಸಂದರ್ಭದಲ್ಲೂ ಈ ಎಚ್ಚರ ಇರಬೇಕು. ಕಲಾತ್ಮಕತೆ ಬಂಡಾಯಕ್ಕೆ ಹೊರತಾದುದಲ್ಲ. ಪರಂಪರೆಯೂ ಹೊರತಾದುದಲ್ಲ. ಯಾವುದು ಸ್ವೀಕಾರಾರ್ಹ, ಯಾವುದು ತಿರಸ್ಕರಣೀಯ, ಎಲ್ಲಿ, ಎಷ್ಟು ಎಂಬುದನ್ನು ಗಂಭೀರವಾಗಿ ಚಿಂತಿಸಬೇಕು. ಹೊಸ ರಚನಾ ಸಾಧ್ಯತೆಯ ಬಗ್ಗೆ ಲಕ್ಷ್ಯ ಕೊಡಬೇಕು. ಇದೆಲ್ಲ ಸಾಧ್ಯವಾಗುವುದು ತಾನು ಯಾವುದಕ್ಕೂ ಅಂಟಿಕೊಳ್ಳುವವನಲ್ಲ ಅಥವಾ ಅಂಟಿಕೊಳ್ಳುವವಳಲ್ಲ, ಬದ್ಧತೆ ಎಂಬುದು ತನಗೆ ಸಂಬಂಧವಿಲ್ಲ ಎನ್ನುವುದರಿಂದ ಆಗುವುದಿಲ್ಲ. ಆದ್ದರಿಂದ ಈ ಎಲ್ಲದರ ಹಿಂದೆ ಎಡಪಂಥೀಯ ವೈಚಾರಿಕತೆಯೊಂದರ ಬದ್ಧತೆ ಅತ್ಯವಶ್ಯಕವಾಗಿರಬೇಕಾಗುತ್ತದೆ ಎಂಬುದನ್ನು ಮರೆಯದಿರೋಣ.

ಆರ್. ವಿ. ಭಂಡಾರಿ
ಅರೆಅಂಗಡಿ - ೫೮೧ ೩೩೦, ಹೊನ್ನಾವರ - ಉ. ಕ.



ಭಯೋತ್ಪಾದನೆಯ ವಿರುದ್ಧದ
ನಮ್ಮ ಹೋರಾಟವನ್ನು
**ದೇವರು** ಆಶೀರ್ವದಿಸಲಿ....

ಈಗ ಅಮೆರಿಕಾದ ಉದ್ದಗಲಗಳಲ್ಲಿ
ಭಯ ತುಂಬಿಕೊಂಡಿದೆ...ಅದಕ್ಕಾಗಿ
**ದೇವರಿಗೆ** ಕೃತಜ್ಞತೆಗಳು....










ಅನೇಕ ಉತ್ಪಾದಕ ಹಾಗೂ ಹಂಚಿಕೆಯ ಪ್ರಕ್ರಿಯೆಗಳ ನ್ನೊಳಗೊಂಡ ವಿವಿಧ ಸಾಮಾಜಿಕ ವಿಭಾಗಗಳ ಒಗ್ಗೂಡುವಿಕೆ ಯಿಂದ ಹುಟ್ಟಿದ ಶರಣರ ಒಕ್ಕೂಟವೂ ಊಳಿಗಮಾನ್ಯ ಮಧ್ಯವರ್ತಿಗಳ ಕಿರಿಕಿರಿಯಿಂದ ತಮ್ಮ ತಮ್ಮ ಹಿತಾಸಕ್ತಿಗಳನ್ನು ರಕ್ಷಿಸಿಕೊಳ್ಳುವುದಕ್ಕಾಗಿ ವರ್ತಕ ಹಾಗೂ ಇತರ ಉತ್ಪಾದಕ ವರ್ಗಗಳನ್ನು ಸಂಘಟಿಸಿದ್ದು ಅದರ ಬಹುಮುಖ್ಯ ಅಂಶ. ಶಿವಕೇಂದ್ರಿತ ಭಕ್ತಿ ಹಾಗೂ ವೀರಶೈವ ಧಾರ್ಮಿಕ ಹಂದರ ದಲ್ಲಿ ಸಂಘಟಿತಗೊಂಡರೂ ಎಲ್ಲ ಜಾತಿಯ ಶರಣರೂ ತಮ್ಮ ಮೂಲ ಸಂವೇದನೆಗಳನ್ನು ಉಳಿಸಿಕೊಂಡು ಬದುಕಿದ್ದು ವಚನ ಗಳ ಅಧ್ಯಯನದಿಂದ ಖಚಿತವಾಗುತ್ತದೆ. ಇಂತಹ ಬಹು ಮುಖಿ ಸಂವೇದನೆಗಳು ಇಂದು ವಚನ ಸಾಹಿತ್ಯವನ್ನು ವಿವಿಧ ನೆಲೆಗಟ್ಟುಗಳಲ್ಲಿ ಮುಖಾಮುಖಿಯಾಗಲು ಪ್ರೇರೇಪಿಸುತ್ತವೆ.

ಸಾಮಾನ್ಯವಾಗಿ ಎಲ್ಲ ವಚನಕಾರರಲ್ಲೂ ಎರಡು ಅಂಶ ಗಳನ್ನು ಪ್ರಮುಖವಾಗಿ ಕಾಣುತ್ತೇವೆ. ಒಂದು ಬಹಿರಂಗ

# ವಚನಕಾರರು ಮತ್ತು ವಾಸ್ತುಶಾಸ್ತ್ರದ ಪ್ರಮಾಣಗಳು

**ಡಾ॥ ವೀರೇಶ ಶೇ. ಬಡಿಗೇರ**

ವಾಸ್ತವವನ್ನು ಕಡೆಗಣಿಸಿ ಅಂತರಂಗ ವಾಸ್ತವದ ಮೇಲೆ ವಿಚಾರಗಳನ್ನು ಕೇಂದ್ರೀಕರಿಸುವುದು. ಇನ್ನೊಂದು ಅಂತ ರಂಗದ ವಾಸ್ತವದ ಜತೆಗೆ ಬಹಿರಂಗ ವಾಸ್ತವವನ್ನು ಒಪ್ಪಿ ಕೊಳ್ಳುವುದು. ಮೊದಲನೆಯದು ಹೆಚ್ಚಾಗಿ ತನ್ನ ಕೇಂದ್ರೀ ಕರಣ ಪ್ರವೃತ್ತಿಯನ್ನು ಸೂಚಿಸಿದರೆ ಎರಡನೆಯದು ವಿಕಾಸಶೀಲ ಮನೋವೃತ್ತಿಯನ್ನು ಪ್ರಕಟಪಡಿಸುತ್ತದೆ.

ಶರಣರು ದೇಹ ಮತ್ತು ಆತ್ಮವನ್ನು ಮುಂದಿಟ್ಟುಕೊಂಡು ವಿವಿಧ ರೀತಿಯ ಸಂವಾದಗಳನ್ನು ಹುಟ್ಟುಹಾಕಿದ್ದಾರೆ. ಅದು ದೇಹ-ದೇಗುಲ, ದೇಹ-ರಥ, ದೇಹ-ಮನೆ ಇತ್ಯಾದಿ. ಈ ಎಲ್ಲ ಪರಿಕಲ್ಪನೆಗಳು ಶರಣರ ಆಧ್ಯಾತ್ಮಿಕ ಶಾಂತಿಯ ಪ್ರತೀಕವಾಗಿ ವಿಸ್ತಾರಗೊಳ್ಳುತ್ತವೆ. ಕಸುಬುದಾರ ವಚನಕಾರರ ಲ್ಲಂತೂ ದೇಹ ಮತ್ತು ದೇಗುಲ ಕಲ್ಪನೆಗಳು ಮಾನವಾಕೃತಿಯ ಭೌತಿಕ ದೇಹವನ್ನೇ ಪ್ರಯೋಗಶಾಲೆಯನ್ನಾಗಿಸುತ್ತವೆ. 'ದೇಹ' ಮತ್ತು 'ಬುದ್ಧಿ'ಯ ಸಂಘಟನಾತ್ಮಕ ನೆಲೆ ಇಲ್ಲಿ ಬಹುಮುಖ್ಯವಾದುದು. ದೇಹವಾದಿಗಳಾದ ಶರಣರು ದೇಹವನ್ನೇ ದಂಡಿಗೆ ಮಾಡುವ, ಕಾಯವನ್ನೇ ಕಾಯಕವಾಗಿ ಸುವ ಸೃಷ್ಟಿಶೀಲತೆಯಲ್ಲಿ ಇನ್ನೊಂದು ರೀತಿಯ ವ್ಯಾಖ್ಯಾನಕ್ಕೆ ಅಧ್ಯಯನಕಾರರನ್ನು ಆಹ್ವಾನಿಸುತ್ತಾರೆ. ಪರಂಪರೆಯಲ್ಲಿ ಜಡತೆಯ ಹಾಗೂ ಕೀಳಿನ ಸಂಕೇತಕ್ಕೆ ನಿಗದಿಯಾಗಿದ್ದ, ನಿಕೃಷ್ಟವಾಗಿದ್ದ ದೇಹವನ್ನು ರಚನಾತ್ಮಕವಾಗಿಸುವ ಪರಿ ಅವರಲ್ಲಿ ಗಮನಾರ್ಹವಾದುದು.

ವಾಸ್ತುಪುರುಷನ ಮೂಲಕ ದೈಹಿಕ ಚಲನೆಯ ಈ ಪರಿ ಕಲ್ಪನೆಯನ್ನು ಇನ್ನಷ್ಟು ವಿಸ್ತರಿಸಿಕೊಳ್ಳಬಹುದೆನಿಸುತ್ತದೆ. ವಾಸ್ತು ಶಾಸ್ತ್ರದಲ್ಲಿ ವಾಸ್ತುಪುರುಷನ (ಮಾನವಾಕೃತಿ) ಋತುಮಾನ ಗತಿಯ ಚಲನೆಯ ಮೂಲಕ ಆಯ-ವ್ಯಯಗಳನ್ನು ನಿರ್ಧರಿಸ ಲಾಗುತ್ತದೆ. ಗರ್ಭದೊಳಗಿನ ಶಿಶುವಿನ ನವಮಾಸ ಚಲನೆಗೆ ಇದನ್ನು ಹೋಲಿಸಬಹುದು. ವಾಸ್ತು ಪುರುಷನನ್ನು ಕೂಡ ಅಷ್ಟ ದಿಕ್ಕುಗಳ ಪರಿಭ್ರಮಣೆಯಲ್ಲಿಯೇ ಗ್ರಹಿಸಲಾಗುತ್ತದೆ. ಮನುಷ್ಯನ ಆಯಸ್ಕಾಂತ ವಲಯ ಹಾಗೂ ಭೂಮಿಯ ಆಯಸ್ಕಾಂತ ವಲಯವನ್ನು ಗುರುತಿ(ಪಂಚಭೂತಗಳು)ಸುವ ಈ ಸರಳ ಸತ್ಯ ಇಂದು ವಾಸ್ತುಶಾಸ್ತ್ರದ ಹೆಸರಿನಲ್ಲಿ ವೈದಿಕೀಕೃತಗೊಂಡಿದೆ. ಹಾಗೆ ವಿಕೃತವೂ ಆಗಿದೆ.

ಭೂಮಿಯೊಂದಿಗೆ ಬದುಕು ಸುಗಮವಾಗಬೇಕಾದರೆ ಅದರಲ್ಲಿನ ಇತಿ-ಮಿತಿಗಳನ್ನು ಅರಿಯಬೇಕಾಗುತ್ತದೆ. ಕನಿಷ್ಠ ಪಕ್ಷ ನಾವು ಬದುಕುವ ಪರಿಸರದ ಬಗ್ಗೆಯಾದರೂ ತಿಳಿದಿರ ಬೇಕಾಗುತ್ತದೆ. ಮಣ್ಣಿನ ಗುಣಧರ್ಮದ ಹೊಂದಾಣಿಕೆ, ವಾತಾವರಣದ ವೈಪರೀತ್ಯ ಬದುಕಿಗೆ ಗೊತ್ತಿರಬೇಕಾದ ಅನಿವಾರ್ಯತೆಗಳು. ನಿಸರ್ಗ ಮುಖಿಯಾದ ಸಮುದಾಯ ಗಳ ಬದುಕಲ್ಲಿ ಈ ತಿಳುವಳಿಕೆ ಸಹಜವಾದುದಾಗಿರುತ್ತದೆ. ಋತುಮಾನಗಳ ಅಗತ್ಯತೆಯ ಅನುಸಾರ ಅವರ ಬದುಕು ಆವರ್ತನೆಗೊಳ್ಳುತ್ತಿರುತ್ತದೆ. ಇಂಥ ಬದುಕನ್ನು 'ಜ್ಞಾನ'ದ ಶ್ರೇಷ್ಠತೆಯು ಶಾಸ್ತ್ರೀಕರಣದ, ಸುಧಾರಣೆಯ ಹೆಸರಿನಲ್ಲಿ ವಿಘಟಿತಗೊಳಿಸುತ್ತದೆ. ಬದುಕಿಗೆ ಮತ್ತು ಅದರ ಚಲನವಲನಗಳಿಗೆ ಶಾಸ್ತ್ರೀಯ ಚೌಕಟ್ಟನ್ನು ನಿರ್ಮಿಸಿ ಅದರ ಸಹಜತೆಯನ್ನು ಹಿಡಿದುಹಾಕುತ್ತದೆ.

ಆದರೆ ಶರಣರಲ್ಲಿ ನಿಸರ್ಗಮುಖಿಯಾದ ಶ್ರಮ, ಬದುಕಿನ ಸಾಧ್ಯತೆಗಳಿಗೆ ಪ್ರಾಶಸ್ತ್ಯ ಸಿಗುತ್ತದೆ. ಪ್ರತಿಯೊಂದು ರೂಪಕವನ್ನು ಆಯಾ ಪರಿಸರದ ಹಾಗೂ ಶ್ರಮ ಬದುಕಿನ ನೆಲೆಯಿಂದಲೇ ರೂಪಿಸಿಕೊಳ್ಳುತ್ತಾರೆ. ದೇಹಮೂಲ ಸಿದ್ಧಾಂತ ಪ್ರಾಧಾನ್ಯತೆ ಪಡೆಯುತ್ತದೆ. ದೈಹಿಕ ಕ್ರಿಯೆ ಮತ್ತು ಬೌದ್ಧಿಕ ಆಲೋಚನೆಗಳೆರಡೂ ಅವರ ಆಧ್ಯಾತ್ಮಿಕ ರಾಜ್ಯವನ್ನಾಳುತ್ತವೆ. ವಾಸ್ತುಶಾಸ್ತ್ರದಲ್ಲಿ ಈ ದೈಹಿಕ ಚಲನೆಯೇ ಬೀಜಮಂತ್ರ. ಇದರಲ್ಲಿ ದೇಹದ ನಿವೃತ್ತಿ ಮಾರ್ಗಕ್ಕಿಂತ ಪ್ರವೃತ್ತಿ ಮಾರ್ಗಕ್ಕೆ ಹೆಚ್ಚಿನ ಆದ್ಯತೆ.

*ಎನ್ನ ಪಾದವೇ ಪದ ಶಿಲೆಯಾಗಿ*
*ಎನ್ನ ಕಾಲೇ ಕಡಹದ ಕಂಭಗಳಾಗಿ*
*ಎನ್ನ ತೋಳೇ ನಾಗವೇದಿಯಾಗಿ*
*ಎನ್ನ ಸುತ್ತಲ ಜಂತಿಯಾಗಿ*
*ಎನ್ನ ಅಧರವೇ ಬಳಿಹ ಬಾಗಿಲಾಗಿ*
*ಎನ್ನ ಗುರುಕರುಣವೇ ಲಿಂಗವಾಗಿ*
*ಎನ್ನಂಗವೇ ರಂಗಮಧ್ಯವಾಗಿ*
*ಹೃದಯ ಕಮಲವೇ ಪೂಜೆಯಾಗಿ*
*ಎನ್ನ ಕಿವಿಗಳೇ ಕೀರ್ತಿ ಮುಖವಾಗಿ*
*ಎನ್ನ ನೆನೆವ ನಾಲಿಗೆಯೇ ಗಂಟೆಯಾಗಿ*
*ಎನ್ನ ಶಿರವೇ ಸುವರ್ಣ ಕಳಶವಾಗಿ*
*ಎನ್ನ ನಯನವೇ ಕುಂದದ ಜ್ಯೋತಿಯಾಗಿ*
*ಎನ್ನ ಚರ್ಮವೇ ನಿರ್ಮಲ ಹೊದಿಕೆಯಾಗಿ*
*ಎನ್ನ ನೆನಹೇ ನಿನಗೆ ಉಪಹಾರವಾಗಿ*
*ಗುರುಪುರದ ಮಲ್ಲಯ್ಯ ನಿಂದನಾಗಿ*

ಗುರುಪುರದ ಮಲ್ಲಯ್ಯನ ಈ ವಚನ ಮನುಷ್ಯ ದೇಹದ ಮೂಲಕ ಒಂದು ಆಲಯದ ಕಲ್ಪನೆಯನ್ನು ಚಿತ್ರಿಸಿಕೊಡುತ್ತದೆ.

*ಕಾಲೇ ಕಂಭಗಳಾದವೆನ್ನ*
*ದೇಹವೇ ದೇಗುಲವಾಯಿತ್ತಯ್ಯ*
*ಎನ್ನ ನಾಲಿಗೆಯೇ ಗಂಟೆ*
*ಶಿರ ಸುವರ್ಣದ ಕಳಶವಿದೇನಯ್ಯ*
*ಸ್ವರವೇ ಲಿಂಗಕ್ಕೆ ಸಿಂಹಾಸನವಾಗಿರ್ದುದು*
*ಗುಹೇಶ್ವರ*
*ನಿಮ್ಮ ಪ್ರಾಣಲಿಂಗ ಪ್ರತಿಷ್ಠೆ ಪಲ್ಲಟ*
*ವಾಗದಂತಿದ್ದೆನಯ್ಯ*

ಅಲ್ಲಮನ ದೇಹ ದೇಗುಲದ ಈ ಕಲ್ಪನೆ ವೈಯಕ್ತಿಕ ನೆಲೆಯನ್ನು ನೀಗುವ ಮತ್ತು ಅದನ್ನು ಸೃಷ್ಟ್ಯಾತ್ಮಕಗೊಳಿಸುವ ಸಂಗತಿಯನ್ನು ನಿರೂಪಿಸುತ್ತದೆ. ಬಸವಣ್ಣ ಈ ಪರಿಕಲ್ಪನೆ ಯನ್ನು ಸಾಮಾಜಿಕ ನೆಲೆಯಿಂದ ವಿಶ್ಲೇಷಿಸುತ್ತಾನೆ.

*ಉಳ್ಳವರು ಶಿವಾಲಯವ ಮಾಡುವರು*
*ನಾನೇನು ಮಾಡಲಿ ಬಡವನಯ್ಯ*
*ಎನ್ನ ಕಾಲೇ ಕಂಬ*
*ದೇಹವೇ ದೇಗುಲ*
*ಶಿರವೇ ಹೊನ್ನ ಕಳಸವಯ್ಯ*

ಎಂದು ದೇವಾಲಯದ ವಾಸ್ತುಕಲ್ಪನೆಯನ್ನು ನಿರೂಪಿಸು ತ್ತಾನೆ. ಬಹಳ ಸ್ಪಷ್ಟವಾಗಿ ಮೂರು ವಚನಗಳು ಸ್ಥಾವರ ದೇವಾಲಯ ಹಾಗೂ ದೇವನ ಅಸ್ತಿತ್ವವನ್ನು ನಿರಾಕರಿಸುತ್ತವೆ. ದೇಹವನ್ನು ದೇಗುಲವಾಗಿಸುವ, ಇಷ್ಟಲಿಂಗವನ್ನು ಎದೆಯ ಮೇಲೆ ನಿಲಿಸುವ ಕಲ್ಪನೆಗಳೇ ಗರ್ಭಗುಡಿ ಮತ್ತು ಪ್ರಾಣ ಲಿಂಗದ ಸಂಕೇತಗಳು. 'ದೇಹೋ ದೇವಾಲಯಃ ಪ್ರೋಕ್ತಃ ಜೀವೋ ದೇವಃ ಸದಾಶಿವಃ' ಎಂಬ ಮಾತಿನ ಯಥಾರ್ಥತೆಯನ್ನಿಲ್ಲಿ ಕಾಣುತ್ತೇವೆ. ವಾಸ್ತುಶಾಸ್ತ್ರವಷ್ಟೇ ಅಲ್ಲದೆ ಶಿಲ್ಪಶಾಸ್ತ್ರವೂ ದೇವಾಲಯವನ್ನು ಮನುಷ್ಯ ದೇಹದ ರೂಪದಲ್ಲಿ ಪರಿಭಾವಿಸುತ್ತದೆ. ವಚನಗಳಂತೆ ಶಿಲ್ಪವೂ ದೇಹದ ಅವಯವಗಳಾದ ಪಾದ, ಹಸ್ತ, ಗೇಣು, ಚೋಟುಗಳ ಮೂಲಕವೇ ಅಳತೆ ಪರಿಮಾಣಗಳನ್ನು ಪರಿಗಣಿಸುತ್ತದೆ. ದೇವಾಲಯ ಹಾಗೂ ಮನೆಯ ಕಲ್ಪನೆಯೇ ಅಂಗಾತ ಮಲಗಿದ ಪುರುಷ ದೇಹದ ಪ್ರತಿರೂಪ. ವಚನಕಾರರಂತೆ ಇಲ್ಲೂ ಕೂಡ ಶಿರೋಭಾಗವೇ ಪ್ರಾಧಾನ್ಯತೆಯನ್ನು ಸಾಧಿಸುವುದನ್ನು ಮರೆಯಬಾರದು. ದೇಹ ದೇವಾಲಯ ವಾಗಿ ಅರ್ಪಿತವಾದಾಗಲೂ ಶಿರವು ಹೊನ್ನ ಕಳಶವಾಗಿ ಉಳಿಯುವ ರೀತಿ ಗಮನಾರ್ಹ. 'ಹೊನ್ನ' ಎನ್ನುವ ಪದವೇ ಶ್ರೇಷ್ಠತೆಯ ಕುರುಹು. ಯಾಕೆಂದರೆ ಇದೇ ಶರಣರು 'ಪುರುಷ ಗುಣವನರಸುವುದೇ ಕಬ್ಬಿಣದಲಿ' ಎಂದು ಕಬ್ಬಿಣವನ್ನು ಉಪೇಕ್ಷಿಸುತ್ತಾರೆ. ದೇಹದ ಸ್ಥಿತಿಯೊಳಗೇ ಮೇಲು-ಕೀಳಿನ ಪ್ರಶ್ನೆಯನ್ನು ಇಲ್ಲಿ ಕಾಣುತ್ತೇವೆ. ಬೌದ್ಧಿಕ ಚಿಂತನೆಗಳಿಗೆ ಮಸ್ತಕ ಪ್ರಧಾನವಾದರೆ ಶರಣರಿಗೆ ಎದೆ ಪ್ರಧಾನ. ಅದು ಇಷ್ಟಲಿಂಗವಿರುವ ಜಾಗ. ಸೊಂಟದ ಕೆಳಗಿನ ದೇಹವನ್ನು ಹೇಯವಾಗಿ ಕಾಣುವ ಪರಿಯನ್ನು ಶರಣರಲ್ಲಿ ಕಾಣುತ್ತೇವೆ. ಬ್ರಾಹ್ಮಣತ್ವವನ್ನು ಹೊರಗೆ ವಿರೋಧಿಸುವ

ಶರಣರು ಅದರ ಸಾಮಾಜಿಕ ಶ್ರೇಷ್ಠತೆಯ ಮಾದರಿಯೊಂದನ್ನು ಒಳಗೊಳಗೇ ಒಪ್ಪಿದ್ದರೆ ? ಎನ್ನುವ ಸಂದೇಹ ಇಂಥಲ್ಲಿ ಇಣುಕುತ್ತದೆ.

ಆದರೆ ಶ್ರಮಿಕ ವರ್ಗದ ವಚನಕಾರರಲ್ಲಿ ಇಂಥ ತಾರತಮ್ಯತೆ ಕಾಣುವುದಿಲ್ಲ. ದೇಹದ ನಿರಾಕರಣೆಗಿಂತ ಸ್ವೀಕರಣೆ ಪ್ರಧಾನವಾಗಿ ಕಾಣುತ್ತದೆ. ವಾಸ್ತವದ ಜಡತೆಯಲ್ಲಿಯೇ ಚಲನಶೀಲತೆಯನ್ನು ಇವರು ಅರಸುತ್ತಾರೆ. ಇವರಲ್ಲಿ ಆಲಯ ಪ್ರಮುಖ ರೂಪಕವಾಗುವುದರೊಂದಿಗೆ 'ರಥ', 'ಚಕ್ರ'ದ ಪ್ರತಿಮೆಗಳು ಆ ಜಡತ್ವದ ವಿಕಸನಕ್ರಮದ ಪರಿಕರಗಳಾಗಿ ಬಳಕೆಯಾಗುತ್ತವೆ.

*ಘಟಸ್ಥಾವರದೊಳಗನೊಡೆದು ಕಿಚ್ಚಿನ ಹೊರೆಯಂ ಕಂಡೆ*
*ಕಾಣಿಸಿ ಮಿಕ್ಕಾದ ಹೊರಗಣ ಹೊರೆಯ ತಿಗುಡಂ ಕೆತ್ತಿ*
*ಕಂಬವ ಶುದ್ಧೈಸಿ ನೆಲವಟ್ಟಕ್ಕೆ ಚದುರಸವನಿಂಬುಗೊಳಿಸಿ*
*ಮೇಲಣವಟ್ಟಕ್ಕೆ ಎಂಟುಧಾರೆಯ ಏಣಂಮುರಿದು*
*ಕಡಿಗೆವಟ್ಟ ವರ್ತುಳಾಕಾರದಿಂ ಶುದ್ಧವ ಮಾಡಿ*
*ಏಕೋತ್ತರ ಶತಸ್ಥಲವನೇಕೀಕರಿಸಿ*
*ಒಂದು ದ್ವಾರದ ಬೋದಗೆಯಲ್ಲಿ ಕಂಬವ ಶುದ್ಧೈಸಿ*
*ಕಂಬ ಎರವಿಲ್ಲದೆನಿಂದ ಮತ್ತೇ ಚದುರಸಭೇದ*
*ಅಷ್ಟದಿಕ್ಕಿನ ಬಟ್ಟೆ ಕೆಟ್ಟು ನವರಸ ಬಾಗಿಲು ಮುಚ್ಚಿ*
*ಹಿಂದಣ ಬಾಗಿಲು ಕೆಟ್ಟು ನಿಜವೊಂದೇ ಬಾಗಿಲಾಯಿತ್ತು*
*ಈ ಕೆಲಸವ ಆ ಕಂಬದ ನಡುವೆ ನಿಂದು ನೋಡಲಾಗಿ*
*ಮಂಗಳಮಯವಾಗಿ ಇದು ಯೋಗಸ್ಥಲವಲ್ಲ*
*ಇದು ಘನಲಿಂಗ ಯೋಗಸ್ಥಲ, ಇಂತೀ ಭೇದವ ತಿಳಿದಡೆ*
*ಬಸವಣ್ಣಪ್ರಿಯ ವಿಶ್ವಕರ್ಮಟಕ್ಕೆ*
*ಕಾಳಿಕಾವಿಮಲ ರಾಜೇಶ್ವರ ಲಿಂಗವಲ್ಲದಿಲ್ಲಾ ಎಂದೆ.*

ಬಾಚಿಕಾಯಕದ ಬಸವಯ್ಯನ ವಚನ ಅಲ್ಲಮ ಮತ್ತು ಬಸವನಿಗಿಂತ ಭಿನ್ನ ಪಾತಳಿಯಲ್ಲಿ ದೇಹವನ್ನು ಆಲಯೀಕರಿಸುತ್ತದೆ. ಇಂಥಲ್ಲಿಯೇ ಶ್ರಮಿಕ ವರ್ಗದ ವಚನಕಾರರಿಗೂ ಶ್ರಮಿಕವಲ್ಲದ ವಚನಕಾರರ ವರ್ಗಕ್ಕೂ ವ್ಯತ್ಯಾಸವಿರುವುದು. ಇಡೀ ವಚನ ವಾಸ್ತುಪುರುಷನ ತಾತ್ವಿಕತೆಯಲ್ಲೇ ವಿಕಸಿತಗೊಂಡಿದೆ. ದೈಹಿಕ ಸಂರಚನೆಯೇ ವಾಸ್ತುವಿಕಾಸಕ್ಕೆ ಮೂಲವಾಗಿದೆ. ಮೇಲಿನ ವಚನವು ದೇಹವನ್ನು ತುಂಬಾ ಕ್ರಿಯಾಶೀಲವಾದ ನೆಲೆಯಲ್ಲಿ ಆಲಯಗೊಳಿಸುತ್ತದೆ. ಮನೆಯೊಂದರ ಉಗಮ-ವಿಕಸನ ಪ್ರವೃತ್ತಿಯನ್ನು ಬಡಿಗ ವೃತ್ತಿಯೊಂದಿಗೆ ಪ್ರಾಯೋಗಿಕವಾಗಿ ಬೆಳೆಸಿಕೊಂಡು ಹೋಗುತ್ತದೆ. ದೇಹ ಆಲಯವಾಗುವುದು ಒಂದು ಪರಿಯಾದರೆ, ಅದು ಕ್ರಿಯಾತ್ಮಕವಾಗಿ ವಿಕಸನಗೊಳ್ಳುವುದು ಇನ್ನೊಂದು ಬಗೆ. ಮೊದಲಿನದರಲ್ಲಿ ಪೂರ್ಣಗೊಂಡುದುದರ ತಾತ್ವಿಕದರ್ಶನವಿದ್ದರೆ ಎರಡನೆಯದರಲ್ಲಿ ವಿಕಸನಶೀಲತೆಯ ಪ್ರಾಯೋಗಿಕತೆ ಇದೆ.

ತಾರ್ಕಿಕವಾದ ಕಟ್ಟುವಿಕೆಯನ್ನು ಮೇಲಿನ ವಚನ ನಿರೂಪಿಸುತ್ತದೆ. ಬಸವಣ್ಣ ಅಲ್ಲಮರಲ್ಲಿ ಇಂಥ ಕಟ್ಟುವ ಆಸೆಯನ್ನು ಕಾಣಲಾಗುವುದಿಲ್ಲ. ಬಾಚಿಕಾಯಕದ ಬಸವಯ್ಯ ರೂಪವನ್ನು ಬಳಕೆಗೆ ಹದಗೊಳಿಸುವಾಗ ತನ್ನ ವೃತ್ತಿ ಮೂಲವಾದ ಉಳಿ, ಬಾಚಿ, ಏಣು, ಕೊಡತಿ, ಕಂಬ, ಚದುರಸ, ಎಂಟುಧಾರೆ, ಕೆತ್ತುವ ಮುಂತಾದ ಪರಿಭಾಷೆಗಳನ್ನು ನಾಜೂಕಾಗಿ ದುಡಿಸಿ ಕೊಳ್ಳುವುದು ವಿಶೇಷವಾದದ್ದು. ಮನೆಯು ಹೊಂದಿರುವ ವಿವಿಧ ವಿನ್ಯಾಸ, ಒಪ್ಪುವ ಸಾಮಗ್ರಿಗಳು ಶೂನ್ಯದ ಸೃಷ್ಟಿಗಳಲ್ಲ; ಅವು ಬದುಕಿನ ಲಯದಿಂದಲೇ ಆಕೃತಿಗೊಳ್ಳುವಂಥವು. ದಾರ್ಶನಿಕ ಪರಿಭಾಷೆಯಲ್ಲಿ ಗುರುತಿಸುವುದಾದರೆ ದೇಹ ಮತ್ತು ಮನಸಿನ ವಿಕಾರಗಳನ್ನು ನಿಯಂತ್ರಿಸಿ ಅವನ್ನು ಸೃಷ್ಟ್ಯಾತ್ಮಕಗೊಳಿಸುವುದು. ನಿರ್ಭೇದತೆಯತ್ತ ಹೋಗುವುದು. ವಚನವು ವಿಕಾರಗಳೆಂಬ ಎಂಟು ಧಾರೆಯ ಏಣನ್ನು ಮುರಿದು ನೆಲವಟ್ಟಕ್ಕೆ ಸಮಗೊಳಿಸುವ, ವೃತ್ತಾಕಾರದಿಂದ ಶುದ್ಧಗೊಳಿಸುವ ಸಂಗತಿಗಳನ್ನು ಅನಾವರಣಗೊಳಿಸುತ್ತದೆ. ಸಮೂಹ ಬದುಕಿನ ಆವರ್ತನಶೀಲತೆಯಲ್ಲಿ ಅದು ಆಲಯವನ್ನು ಪರಿಭಾವಿಸುತ್ತದೆ. ಬಡಿಗ ವೃತ್ತಿಯ ಮುಖ್ಯ ಗುಣವೇ ರೂಪದೊಳಗಿನ ನಿರೂಪವನ್ನು ಮೂರ್ತಗೊಳಿಸುವುದು. ಯಾವುದೇ ಘನಾಕೃತಿಯನ್ನು ಆತ ನೋಡುವುದೇ ಈ ನಿರೂಪ ಪ್ರಜ್ಞೆಯಿಂದ. ಆದರೆ ಆತನ ಪ್ರಜ್ಞೆಯೊಳಗೆ ಅವಶ್ಯಕ ಆಕೃತಿಯೊಂದು ಮೂರ್ತೀಭವಿಸುತ್ತದೆನ್ನುವುದನ್ನು ಮರೆಯಲಾಗದು. ಲೌಕಿಕದ ಇರುವಿಕೆಯೊಂದಿಗೆ ಅಲೌಕಿಕದ ವಾಸ್ತವವನ್ನು ಕಂಡುಕೊಳ್ಳುವ ಸ್ಥಿತಿಯೇ ದೇಹ ಮತ್ತು ಅದರ ಆಚೆ ನಡೆಯುವ ಚಲನವಲನಗಳನ್ನು ಕಾಣುವುದಾಗಿದೆ. ಅವ್ಯಕ್ತವು ಅರಿವಿಗೆ ಬರುವುದು ವ್ಯಕ್ತದ ಮೂಲಕವೇ. 'ಕಂಡುದ ಹಿಡಿಯಲೊಲ್ಲದೆ ಕಾಣದುದನರಸಿ ಹಿಡಿಹೆನೆಂದರೆ ಸಿಕ್ಕದೆಂಬ ಬಳಲಿಕೆ ನೋಡಾ' ಎನ್ನುವ ಮಾತುಗಳೂ ಸಾದೃಶ್ಯದಿಂದ ಅಸಾದೃಶ್ಯದ ಕಡೆಗೆ ಸಾಗಿ ಮತ್ತೆ ಸಾದೃಶ್ಯವನ್ನೇ ಕೂಡುವ ನಿಲುವನ್ನೇ ಎತ್ತಿಹಿಡಿಯುತ್ತವೆ. ಕ್ರಿಯೆ ಮತ್ತು ಅರಿವಿನ ಅದ್ವೈತವಾದಿ ನೆಲೆಯನ್ನು ಪ್ರಸ್ತಾಪಿಸುತ್ತದೆ.

ಶರೀರದ ಆಕರ್ಷಣೆ-ವಿಕರ್ಷಣೆ ಹಾಗೂ ಅದರ ಮೇಲೆ ಅವಲಂಬಿತವಾದ ಸಿದ್ಧ-ಸಾಧನೆಯ ನೆಲೆಗಳು ಒಮ್ಮೊಮ್ಮೆ ವಿಸ್ಮಯಕಾರಕವಾಗಿ ಕಾಣಿಸುತ್ತವೆ. ಬಹುಪಾಲು ವಿರಕ್ತರಿಗೆ ಶರೀರವು ಭೀತಿಮೂಲವಾದದ್ದು. ಹೀಗಾಗಿ ಅವರಲ್ಲಿ ಶರೀರದ ನಿರಾಕರಣೆ ಬಹುಮುಖ್ಯವಾಗುತ್ತದೆ. 'ಅಮೇಧ್ಯದ ಮಡಕೆ ಮೂತ್ರದ ಕುಡಿಕೆ ಎಲುಬಿನ ತಡಿಕೆ ಕೀವದ ಹುಡಿಕೆ ಸುಡಲೀ ದೇಹವ' ಎನ್ನುವ ಅಕ್ಕಮಹಾದೇವಿ, ಹಿಂದೆಯೇ 'ಅಪ್ಪಿದರೆ ಆಸ್ತಿಗಳು ನುಗ್ಗುನುರಿಯಾಗಬೇಕು. ಬೆಚ್ಚರೆ ಬೆಸುಗೆಯರಿಯದಂತಿರಬೇಕು' ಎನ್ನುವಾಗ ಇವನ್ನು ಗ್ರಹಿಸುವ ನೆಲೆಗಳಾವುವು ? ಅನುಭಾವದ ಅಲೌಕಿಕತೆಯನ್ನು ಲೌಕಿಕದ ಸಂಭೋಗದ ತುರೀಯಾವಸ್ಥೆಯಲ್ಲಿ ಹುಡುಕುವ ತಡೆಯುವ ಕ್ರಿಯೆಗಳಿರುವ ಅರ್ಥವೇನು ? ಪ್ರಜ್ಞೆಯ ಮಟ್ಟದಲ್ಲಿ ಮಾತ್ರ ಈ ಲೋಕದ ಕಡೆಗಣಿತ ವಚನಕಾರರಲ್ಲಿ ಕಾಣುತ್ತದೆ. ತಮಗರಿಯದಂತೆ ಜೀವನ ಪ್ರೀತಿಯನ್ನು ಅವರ ವಚನಗಳಲ್ಲಿ ಪ್ರಕಟಿಸಿದ್ದಾರೆ.

ಲಘುವನ್ನು ಘನೀಕರಿಸುವ, ಘನವನ್ನು ಮಹಾಘನದೊಂದಿಗೆ ವಿಸ್ತರಿಸುವ ಶರಣರ ಈ ಹಂಬಲಗಳು ಸೃಷ್ಟಿ ಮತ್ತು ಅದರ ವಿಕಸನಶೀಲ ಪ್ರವೃತ್ತಿಗಳನ್ನು ಹೇಳುವುದೇ ಆಗಿದೆ. ಭಾರತೀಯ ದಾರ್ಶನಿಕ ಕೃತಿಗಳಲ್ಲಿ, ಪುರಾಣಗಳಲ್ಲಿ ಕಟ್ಟುವ ಸಂಬಂಧವಾಗಿ ಸೃಷ್ಟಿಕರ್ತ ಮಯನ ಪರಿಕಲ್ಪನೆಯನ್ನು ಕಾಣುತ್ತೇವೆ. ಮಯನ ಕೆಲಸ ಆಲಯ, ವಿಮಾನ, ಇಂಥವುಗಳ ನಿರ್ಮಾಣ. ಮಯ ನಿರ್ಮಾತೃ ಪರಂಪರೆಯ ಅಧಿದೇವತೆ. ಈ ಮಯದಲ್ಲಿ ಬಡಿಗ ನಿಹಿತವಾಗಿದ್ದಾರೆ. ಮಯ ಪರಂಪರೆಯ ಕುಡಿ ಬಾಚಿಕಾಯಕದ ಬಸವಯ್ಯ, ಕ್ರಿಯಾಮೂಲ ಜ್ಞಾನದ ಒಂದು ಪರಂಪರೆಯನ್ನು, ಒಂದು ವೃತ್ತಿ ಸಮುದಾಯದ ಸಂವೇದನೆಯನ್ನು, ಈ ವಿವರ ಕಟ್ಟಿಕೊಡುತ್ತದೆ. ದೈಹಿಕ ಶ್ರಮ ಮತ್ತು ಬೌದ್ಧಿಕ ಆಲೋಚನೆ ಒಂದಾಗಿದ್ದ ಸ್ಥಿತಿಯಿದು. ಕ್ರಿಯೆ ಇಲ್ಲದ ಜ್ಞಾನ ಪ್ರಯೋಜನವಿಲ್ಲವಯ್ಯ. ದೇಹವಿಲ್ಲದ ಪ್ರಾಣಕ್ಕೆ ಆಶ್ರಯವುಂಟೇ ಅಯ್ಯ. ಪ್ರಾಣವಿಲ್ಲದ ಕಾಯಕ್ಕೆ ಚೈತನ್ಯವುಂಟೇ ಅಯ್ಯ ಎನ್ನುವ ಹಾವಿನ ಹಾಳ ಕಲ್ಲಯ್ಯನ ಮಾತುಗಳು ಕ್ರಿಯೆ-ಅರಿವಿನ ಸಾತತ್ಯತೆಯನ್ನು, ಆ ಮೂಲಕ ದೇಹದ ಗತಿಶೀಲತೆಯನ್ನು, ಕುರಿತು ಹೇಳುತ್ತವೆ.

ಇಂಥ ಆಲಯದ ನಿರ್ಮಾಣದಲ್ಲಿ ಪ್ರಮಾಣಗಳನ್ನು ಕುರಿತು ಹೇಳುವುದು ಶರಣರ ಇನ್ನೊಂದು ವೈಶಿಷ್ಟ್ಯ. ತಾಳ-ಮಾನವನರಿಯೆ ಎನ್ನುತ್ತಲೇ ದೇಶೀಯ ಮಾನ- ಪರಿಮಾಣಗಳ ಬಳಕೆಯನ್ನು ಶರಣರು ಎತ್ತಿಹಿಡಿಯುತ್ತಾರೆ.

*ಮೂರಕೋಲ ಬ್ರಹ್ಮಂಗೆ ಅಳೆದು ಕೊಟ್ಟೆ*
*ನಾಲ್ಕು ಕೋಲ ವಿಷ್ಣುವಿಗೆ ಅಳೆದುಕೊಟ್ಟೆ*
*ಐದು ಕೋಲ ರುದ್ರಂಗೆ ಅಳೆದುಕೊಟ್ಟೆ*
*ಒಂದು ಕೋಲ ಸದಾಶಿವನಿಗೆ ಅಳೆದುಕೊಟ್ಟೆ*
*ಇಂತಿ ಐವರು ಕೋಲಿನ ಒಳ ಹೊರಗಿನಲ್ಲಿ*
*ಅಳಲುತ್ತ ಬಳಲುತ್ತ ಒಳಗಾದರು*
*ಇಂತಿ ಒಳಹೊರಗೆ ಶೋಧಿಸಿಕೊಂಡು*
*ಅಳಿವುಳಿವಿನ ವಿವರವನರಿಯಬೇಕು*
*ಧಾರೇಶ್ವರಲಿಂಗನರಿವುದಕ್ಕೆ*

ಕಾಮಾಟದ ಭೀಮಣ್ಣನ ಈ ವಚನ ಅಳತೆಯ ವಿವರಗಳನ್ನು ಆಧ್ಯಾತ್ಮಿಕವಾಗಿ ನಿರೂಪಿಸುತ್ತದೆ. ಶಿಲ್ಪಶಾಸ್ತ್ರದಲ್ಲಿ ಶಿಲ್ಪಿಯ ಅಳತೆಯ ಕೋಲನ್ನು 'ಕೋಲು' ಎಂದರೆ ಹಳ್ಳಿಗಳಲ್ಲಿ 'ಕಟಿಗಿ' ಎಂದು ಕರೆಯುತ್ತಾರೆ. ಈ ಅಳತೆಯ ಕೋಲನ್ನು ಭಾರತೀಯ ಶಿಲ್ಪ ಕ್ರಿಸ್ತಶಕದ ಆರಂಭದ ಮೂರು ಸಾವಿರ ವರ್ಷ ಮೊದಲೇ ರೂಪಿಸಿಕೊಂಡ ಬಗ್ಗೆ ಶಿಲ್ಪಶಾಸ್ತ್ರಗಳು ಹೇಳುತ್ತವೆ. ಶ್ರೇಷ್ಠರೂಪದಲ್ಲಿ ಕೋಲನ್ನು 'ದಂಡ'ವೆಂದು ಕರೆಯುತ್ತಾರೆ. ದಂಡ ಎಂದರೆ ನಾಲ್ಕು ಹಸ್ತಗಳ ಒಟ್ಟು ಮೊತ್ತ. ಅಂದರೆ ೨೪ ಅಂಗುಳ ಎಂದಿಟ್ಟುಕೊಳ್ಳಬಹುದು. ಕೋಲಿನ ಅಥವಾ ದಂಡದ ಉದ್ದ ೨೪ ಅಂಗುಳ. ಇದರಲ್ಲಿ ನಾಲ್ಕು ಭಾಗ ಮಾಡಿ 'ಹಸ್ತ'ಗಳನ್ನು (ನಾಲ್ಕು ಭಾಗ) ಗುರುತಿಸಲಾಗುತ್ತದೆ. ಒಂದು ಅಂಗುಳವೆಂದರೆ ಇಂಗ್ಲಿಷ್ ಮಾಪನದ ಒಂದು ಇಂಚು ಕಾಲು ಸೆಂಟಿಮೀಟರ್. ಅಂದರೆ ನಮ್ಮ ಬಲಹಸ್ತದ ಮಧ್ಯಮ ಬೆರಳಿನ ಒಂದು ಕಂಡಿಕೆ (ಗೆಣ್ಣು). ಈ ಅಂಗುಳವನ್ನು 'ಯವ'ದಿಂದ ಕೂಡಿಸುತ್ತಾರೆ. ಒಂದು ಅಂಗುಳದಲ್ಲಿ ಎರಡು 'ಯವ' ಇರುತ್ತದೆ. 'ಯವ' ಅಂದರೆ ಒಂದು ಬಾರ್ಲಿಕಾಳಿನ ಉದ್ದ. ಇಲ್ಲೂ ಮೇಲು ಕೀಳಿನ ಪ್ರಶ್ನೆಯನ್ನು ಕಾಣುತ್ತೇವೆ. ಅಳತೆಗೆ ಬಹು ಮುಖ್ಯವಾಗಿ ಬಲಗೈಯನ್ನು ಬಳಸಿದರೆ ಯವದ ಅಳತೆಗೆ ಬಾರ್ಲಿಗೆ ಬದಲಾಗಿ ಕೆಂಪುಶಾಲಿ (ಭತ್ತ)ಯನ್ನು ಪರಿಗಣಿಸುತ್ತಾರೆ. ಇದು ಶಿಲ್ಪಶಾಸ್ತ್ರದ ಗ್ರಂಥಗಳಿಂದ ತಿಳಿಯುತ್ತದೆ. ಇಂಥ ಕೆಂಪುಶಾಲಿಯನ್ನು ಒಂದರ ಮುಂದೆ ಒಂದರಂತೆ ಎಂಟುಕಾಳನ್ನು ಜೋಡಿಸಿದರೆ ಸಿಗುವ ಉತ್ತರ ಒಂದು ಶ್ರೇಷ್ಠ ಮಾನಂಗಳ. ಅಂಗುಳದಲ್ಲಿ ಇದು ಶ್ರೇಷ್ಠವಾದದ್ದು. ದೇವಾಲಯ, ವಾಸದ ಮನೆ, ಅರಮನೆ ಇತ್ಯಾದಿಗಳನ್ನು ಈ ಮಾನಾಂಗುಳದಿಂದಲೇ ಅಳೆದು ಆಯ-ವ್ಯಯ ನಿರ್ಧರಿಸುತ್ತಾರೆ.

ಈ ಅಂಗುಳದ ಬಳಕೆಯನ್ನು ಬಾಚಿ ಕಾಯಕದ ಬಸವಯ್ಯನ ಒಂದು ವಚನ ಅರ್ಥಪೂರ್ಣವಾಗಿ ವಿವರಿಸುತ್ತದೆ.

*ಮೂರಂಗುಲದಲ್ಲಿ ಅಳೆದು*
*ಐದಂಗುಲದಲ್ಲಿ ಪ್ರಮಾಣಿಸಿ*
*ಆರಂಗುಲದಲ್ಲಿ ವಟ್ಟಕ್ಕೆ ಶುದ್ಧವಾಯಿತು.*
*ಎಂಟರಳತೆ ಹದಿನಾರರ ಚದುರಸ*
*ಮೂವತ್ತೆರಡರ ಮಧ್ಯದಲ್ಲಿ ಹಸ್ತ ಕಂಬಿಯನಿಕ್ಕಿ*
*ಮೂರರಲ್ಲಿ ಭಾಗಿಸಲಾಗಿ ಎರಡು ಒಳಗು ನಿಂದಿತ್ತು*
*ಒಂದು ಹೊರಗಾದ ಕೈಸಾಲೆಯಾಯಿತು*
*ಈ ಕೆಲಸವೇ ಹೊರಗೆ ಬಾಚಿಯಿಂದ ಸವೆದ*
*ಒಳಗೆ ಉಳಿಯಲ್ಲಿ ಸವೆದ*
*ಇಂತೀ ತೆರನ ತಿಳಿದಡೆ*
*ಬಸವಣ್ಣ ಪ್ರಿಯ ವಿಶ್ವಕರ್ಮಟಕ್ಕೆ*
*ಕಾಳಿಕಾವಿಮಲ ರಾಜೇಶ್ವರಲಿಂಗವಲ್ಲದಿಲ್ಲ ಎಂದೆ.*

ಬಹುಮುಖ್ಯವಾಗಿ ವಚನ ವಾಸ್ತುವಿನ ಆಯ-ವ್ಯಯದ ಮೇಲೆ ಒತ್ತು ಕೊಡುತ್ತದೆ. ಹಸ್ತ ಎನ್ನುವುದನ್ನು ರೂಢಿಯಲ್ಲಿ 'ಮೊಳ' ಎಂದು ಕರೆಯಲಾಗುತ್ತದೆ. ಇದರಲ್ಲಿ ಇಪ್ಪತ್ನಾಲ್ಕು ಅಂಗುಳ. ಮೊಳ ದಿನನಿತ್ಯ ಉಪಯೋಗವಾಗುವ ಮಾಪನ. ಇಂತಹ ನಾಲ್ಕು ಮೊಳಗಳ ಒಂದು ಅಳತೆಯೇ ಕೋಲು. ಇದನ್ನು 'ಮಾರು' ಎಂದು ಕರೆಯುತ್ತಾರೆ.

ವಚನ ಗಮನ ಸೆಳೆವ ಇನ್ನೊಂದು ವಿಚಾರ 'ಎಂಟು', 'ಹದಿನಾರು' ಮತ್ತು ಮೂವತ್ತೆರಡರ ಭಾಗಲಬ್ಧ. ಎಂಟರಳತೆ ಹದಿನಾರರ ಚದುರಸ ಮೂವತ್ತೆರಡರ ಮಧ್ಯದಲ್ಲಿ ಹಸ್ತಕಂಬಿಯನಿಕ್ಕಿ ಎನ್ನುವುದಾದರೆ ೪x೮x೧೨x೧೬x೨೦x೨೪x೨೮x೩೨-ಆಯವನ್ನು ಚದುರಸದಲ್ಲಿ ಅಳೆಯುವ ಪದ್ಧತಿಯನ್ನು ಕಾಣುತ್ತೇವೆ. ೩೨ ವಾಸ್ತುಶಾಸ್ತ್ರದ ಶುದ್ಧ ಅಳತೆಯೆಂದು ಪರಿಗಣಿತವಾಗುತ್ತದೆ. ಮೊಳ(ಹಸ್ತ)ದಿಂದ ಆರಂಭವಾಗಿ ಮಾರು (ಕೋಲು)ಗಳ ಮೂಲಕ ವಿಕಾಸಗೊಳ್ಳುತ್ತದೆ. ನಾಲ್ಕು ಮೊಳ ಸೇರಿ ಒಂದು ದಂಡ, (೪x೮) ಎಂಟು ದಂಡಗಳು ಸೇರಿ ಒಂದು ಹಗ್ಗ (ರಜ್ಜು), ಒಂದು ಹಗ್ಗದಲ್ಲಿ ಮೂವತ್ತೆರಡು ಹಸ್ತಗಳು ಇರುತ್ತವೆ. ಯಾನ, ವಾಹನ, ಶಯನಗಳಿಗೆ ಬಳಕೆಯಾಗುವ ಮಂಚ, ಕುರ್ಚಿ, ಮೇಜುಗಳನ್ನು ಹಸ್ತಮಾನದಲ್ಲೂ ಗ್ರಾಮ ನಿವೇಶನ ಮುಂತಾದವನ್ನು ದಂಡಮಾನದಲ್ಲೂ ಅಳೆಯಬೇಕೆಂದು ಶಾಸ್ತ್ರಗ್ರಂಥಗಳೂ ಹೇಳುತ್ತವೆ. ಬಹಳ ಸ್ಪಷ್ಟವಾಗಿ ಇಲ್ಲಿ ಶ್ರೇಣೀಕರಣದ ಆಶಯಗಳು ತುಂಬಿಕೊಂಡಿವೆ. ಸಹಜ ಅಳತೆಗಳನ್ನು ವೈದಿಕ ಪ್ರಣೀತ ಶಾಸ್ತ್ರಗ್ರಂಥಗಳು ಸಂಸ್ಕೃತೀಕರಣಗೊಳಿಸಿದ, ಪವಿತ್ರೀಕರಿಸಿದ, ಹುನ್ನಾರ ಎದ್ದುಕಾಣುತ್ತದೆ.

ಆಯಾದಿ ಗಣಿತದಲ್ಲಿ ಸ್ವೀಕೃತವಾಗುವ ಮಾನವು ಯಾವಾಗಲೂ ವ್ಯಯಕ್ಕಿಂತಲೂ ಜಾಸ್ತಿಯಾಗಿರಬೇಕು. ಇದರಿಂದಾಗಿ ಅದನ್ನು 'ಒಂದು' ಎಂದು ಗುರುತಿಸದೆ 'ಲಾಭ' ಎಂದು ಕರೆಯುತ್ತಾರೆ. ಅಂದರೆ ಆಯವೆಂದು ಪರಿಗಣಿಸಲಾಗುತ್ತದೆ. ಜನಪದ ಸಂಪ್ರದಾಯಗಳಲ್ಲೂ ಈ ಪದ್ಧತಿಯನ್ನು ಕಾಣುತ್ತೇವೆ. ವಸ್ತು ಅಥವಾ ಕಾಳನ್ನು ಅಳೆಯುವಾಗ ಮೊದಲನೆ ಸೇರನ್ನು (ಎಣಿಕೆ) 'ಲಾಭ' ವೆಂದೇ ಕರೆದು ನಂತರ ೨ರಿಂದ ಎಣಿಸಲಾರಂಭಿಸುತ್ತಾರೆ. ನಿರ್ಮಾಣಕ್ಕೆ ಬಳಸುವ ಮಾನವನ್ನು (ವಚನದಲ್ಲಿ ಹೇಳಿದಂತೆ ಎಂಟರಳತೆ ಅಂದರೆ ಎಂಟರಿಂದ ಗುಣಿಸಿ ಹನ್ನೆರಡರಿಂದ ಭಾಗಿಸಿದಾಗ ಬರುವ ಶೇಷ) ಲಾಭ ಎಂದು ಸ್ವೀಕರಿಸಲಾಗುತ್ತದೆ. ಕಡಿಮೆ ಆಯ ಬರುವ ನಿವೇಶನ ಅಶುಭ ಎನ್ನುವುದು ವಾಸ್ತುಶಾಸ್ತ್ರದ ಗ್ರಹಿಕೆ. 'ಆಯ'ವನ್ನು 'ಯೋನಿ' ಎಂದೂ ಗುರುತಿಸುತ್ತಾರೆ. ಸೂಚಿತ ಮಾನವನ್ನು ೯ರಿಂದ ಗುಣಿಸಿ ೮ರಿಂದ ಭಾಗಿಸಿದರೆ ಬರುವ ಶೇಷ 'ಯೋನಿ'. ಇದರಲ್ಲಿ ಎಂಟುಬಗೆಯ ಆಯಗಳನ್ನು ಗುರುತಿಸುತ್ತಾರೆ.

ಒಟ್ಟು ಚರ್ಚೆಯಿಂದ ಗ್ರಹೀತವಾಗುವುದೆಂದರೆ ವಚನಕಾರರು ಬಳಸುವ ವಾಸ್ತುಶಾಸ್ತ್ರದ ಪರಿಕಲ್ಪನೆಗಳು ದೇಹ ಪ್ರಧಾನವಾದ ಕ್ರಿಯೆ ಮತ್ತು ಅರಿವಿನ ಮೂಲದಿಂದ ಹುಟ್ಟಿದಂತಹವು. ಅದರಲ್ಲೂ ವಿಶೇಷವಾಗಿ ಬಾಚಿ ಕಾಯದ ಬಸವಯ್ಯ, ಕಾಮಾಟದ ಭೀಮಣ್ಣನಂತಹ ಮನೆ ಕಾಯಕದ ವೃತ್ತಿನಿರತ ಶರಣರು ವೃತ್ತಿಮೂಲದಿಂದಲೇ ನಿರ್ವಹಿಸಿಕೊಳ್ಳುವ ಪರಿ ವಿಶಿಷ್ಟವಾದುದು. ಸಾಹಿತ್ಯದಲ್ಲಿ ಎಂದೂ ಕಾಣದ ಬಡಿಗ ವೃತ್ತಿ ಸಂವೇದನೆಗಳನ್ನು ಸಾಕಾರಗೊಳಿಸಿದ್ದು. ವಚನಗಳಲ್ಲಿ ಬಳಕೆಯಾದ ಕಾಲು, ಕೈ, ಮೊಳ, ಮಾರು, ಹಸ್ತ, ಯೋನಿ, ಹಗ್ಗ ಇವುಗಳು ದೇಹದ ಇರುವಿಕೆಯನ್ನು, ಅದರ ರಚನಾತ್ಮಕ ಕ್ರಿಯಾ ಪ್ರವೃತ್ತಿಯನ್ನು, ಎತ್ತಿತೋರಿಸುತ್ತವೆ.

ಉದಾರವಾದಿ ದರ್ಶನಗಳಲ್ಲಿ ದೇಹವನ್ನು ಯಂತ್ರವೆಂದು ಭಾವಿಸಲಾಗುತ್ತದೆ. ದೇಹದ ವಿಸ್ತರಣೆಯಾಗಿ ಯಂತ್ರವನ್ನು ಪರಿಭಾವಿಸಲಾಗುತ್ತದೆ. ವೈದಿಕದ ಆಧ್ಯಾತ್ಮಿಕತೆಯಲ್ಲಿ ಈ ದೇಹ ಕೀಳಿನ ಮೂಲವಾದದ್ದು, ಮನಸ್ಸು ಮಾತ್ರ (ಆತ್ಮ) ಶ್ರೇಷ್ಠವಾದದ್ದು. ಶರೀರ ಭೇದನವಾದ ಈ ಶ್ರಮ ಬುದ್ಧಿ-ಕ್ರಿಯೆಗಳನ್ನು ಒಡೆದು ವರ್ಗಭೇದದ ನೆಲೆಯನ್ನು ಪ್ರೋತ್ಸಾಹಿಸುತ್ತದೆ. ಶ್ರಮ ಹಾಗೂ ಜ್ಞಾನವನ್ನು ಏಕೀಭವಿಸಿ ಅದನ್ನು ಶರೀರದ ಉತ್ಪಾದನೆಯಾಗಿ ವಚನ ಧರ್ಮ ಗ್ರಹಿಸುತ್ತದೆ. ದೇವರು-ಗುಡಿ ಕಲ್ಪನೆಗಳಂತಹ ಪಾರಂಪರಿಕ ಪವಿತ್ರ ಸಾಧನಗಳನ್ನು ನಾಶಮಾಡಿ ಅದನ್ನು ದೇಹ ಮೂಲಕವಾಗಿ ಹೊಸತಾಗಿ ನಿರ್ವಚಿಸಿಕೊಳ್ಳುವ ಸೊಗಸನ್ನು ವಚನಕಾರರಲ್ಲಿ ಕಾಣುತ್ತೇವೆ. ಆದರೆ ದೇಹ ಮತ್ತು ಅದರ ಕ್ರಿಯೆಗಳನ್ನು ಅತಿಯಾದ ಪವಿತ್ರೀಕರಣಕ್ಕೆ ಒಳಗು ಮಾಡಿದರೇನೋ ಎನ್ನುವ ಸಂಶಯ ಬರುತ್ತದೆ. ಇದೂ ಅಲ್ಲದೆ 'ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ' ಎನ್ನುವಲ್ಲಿ ಸ್ಥಾವರವನ್ನು ವಿರೋಧ ಮಾಡುವ ವಚನಕಾರರು ದೇಹವನ್ನು ಆಲಯವನ್ನಾಗಿಸುವ ಪರಿ ವಿಚಿತ್ರವಾಗಿ ಕಾಣುತ್ತದೆ. 'ಭಾಷೆಗೆ ಊಣವಿಲ್ಲದ ಸದ್ಭಕ್ತರ ಆಶ್ರಮಕ್ಕೆ ನಿಜವಾಸವ ಮಾಡುವ, ಗುಣದ ಮತ್ತು ನೇಮದ ಬಾಚಿ ಕಾಯಕದ ಬಸಯ್ಯ, ಕಾಮಾಟದ ಭೀಮಣ್ಣನಂಥವರಿಗೆ ಆಲಯದ ಕಟ್ಟುವಿಕೆ ಪ್ರಧಾನವಾದ್ದು. ಬಹುಶಃ ಸ್ಥಾವರವನ್ನೊಪ್ಪುವ ಶೈವ ತಾಂತ್ರಿಕ ಪಂಥಗಳ ಪ್ರಭಾವ ವಚನಕಾರರ ಮೇಲೂ ಆದ ಪರಿಣಾಮವಿದಾಗಿರಬೇಕು. ಯಾಕೆಂದರೆ ಶರಣ ಚಳುವಳಿಯ ಒಂದು ಘಟ್ಟದಲ್ಲಿ ನಾಥಪಂಥೀಯರು ವೈಷ್ಣವರೊಂದಿಗೆ ಹೋರಾಡಲು ವೀರಶೈವರೊಂದಿಗೆ ಸೇರಿದ್ದು ಚರಿತ್ರೆಯಿಂದ ತಿಳಿದುಬರುತ್ತದೆ. ಕುತೂಹಲವೆಂದರೆ ಸ್ಥಾವರದ ಈ ಕಲ್ಪನೆಯನ್ನು ಕೆಳವರ್ಗದ ವಚನಕಾರರು ತುಂಬ ಸೃಷ್ಟಿಶೀಲ ಸಂವೇದನೆಯನ್ನಾಗಿ ದುಡಿಸಿಕೊಂಡಿದ್ದು. ಜಡವಾಗಿದ್ದ ಜಗತ್ತನ್ನು ಜಾಗೃತಗೊಳಿಸಿ ನೆಲದ ಬೇರುಗಳೊಂದಿಗೆ ಜೀವಂತವಾಗಿಸಿದರು. ಜಡದ ಬಗ್ಗೆ ಹೀನಭಾವವನ್ನು ತಾಳದೆ ಪಲಾಯನವಾದಿಗಳಾಗದೆ ಅದರಲ್ಲಿದ್ದು ಅನುಭವಿಸಿ ಅದರ ಬಹೂಪಯೋಗಿತ್ವವನ್ನು ಎತ್ತಿಹಿಡಿದರು. ದೇಹಮೂಲವಾದ ವಾಸ್ತುಶಾಸ್ತ್ರ ಕೂಡ ಮನುಷ್ಯನ 'ವಿಲ್‌ಪವರ್' ಹಾಗೂ ನಿಸರ್ಗದ ಋತುಮಾನಗತಿಯನ್ನು ಬಹುಮುಖ್ಯವಾಗಿಸಿಕೊಂಡದ್ದು. ನಿಸರ್ಗ ಪ್ರೀತಿಯನ್ನು ಹೇಳುವಂತಹದ್ದು. ಆದರೆ ದುರದೃಷ್ಟವಶಾತ್ ಕೆಲವೊಂದು ವಿಕಾರ ಪ್ರವೃತ್ತಿಗಳ ವಾಣಿಜ್ಯ ದಾಹಕ್ಕೆ ಬಲಿಯಾಗಿ ಅದು ತನ್ನ ನಿಸರ್ಗಗುಣದಿಂದ ವಿಮುಖವಾಗಿದೆ. ಶುಷ್ಕ ಶಾಸ್ತ್ರವಾಗಿ, ಶೋಷಣೆಯ ಅಸ್ತ್ರವಾಗಿ, ಗಳಿಕೆಯ ಮಾಧ್ಯಮವಾಗಿ, ಬುದ್ಧಿಪ್ರಧಾನ ಚಟುವಟಿಕೆಯಾಗಿ ಮೂಢನಂಬಿಕೆಯನ್ನು ಪ್ರೋತ್ಸಾಹಿಸುತ್ತದೆ. ಇದಕ್ಕೆ ಜ್ಯೋತಿಷ್ಯಶಾಸ್ತ್ರದ ಬೆಂಬಲ ಬೇರೆ.

ಡಾ॥ ವೀರೇಶ ಶೇ. ಬಡಿಗೇರ
ರೀಡರ್, ಹಸ್ತಪ್ರತಿಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ಕಮಲಾಪುರ-೫೮೩ ೨೨೧

## ಬೇಟೆಯಾಗಿ

ಕಚ್ಚುವ ಹಾವು ಕಚ್ಚಿಸಿಕೊಂಡಾಗ
ವಿಷವೇರಿ ವಿಲಗುಟ್ಟುವ ಹಾಗೆ
ನರಳುತ್ತಿದೆ
ಪದ್ಮವ್ಯೂಹವ ಹೊಕ್ಕ ಅಭಿಮನ್ಯು ಪಾತ್ರ

ದೆವ್ವ ದೇವರು ಪ್ರೀತಿ ಎಲ್ಲ ಒಂದೇ ಜಾತಿ
ಬೆನ್ನ ಬಾರೆತ್ತಿ ಮುದ್ದಿಸುವ ವಿಷ ಬೀಜ ಪಾಕ
ವಿಷಕ್ಕೆ ವಿಷದ ಮೇಲೇ ದೂರಿದರೆ
ಆಡುವ ಬಾಯೇ ವಿಷವೆಂದು
ಉಗುಳಿ ನರಳುತ್ತದೆ ತೊಗಲ ಪಂಜರ

ಗಾಜು ಗೋಡೆಯ ಎದುರು
ತಾನಾಗಿ ನಿಂತು ತಾನೇ
ದೂರಬಹುದೇ ಗಾಜು ಮೋಸವೆಂದು
ಬೆಕ್ಕ ಕೈಚೆಂಡು ಮೂಗಿಲಿ
ನೀಗಬಾರದು ಜೀವ
ಹಾಡಲುಂಟೇ ಸತ್ಯ ಪ್ರೀತಿಯ ರಾಗ ಸಾವಿನಾಟ

ಕಿತ್ತ ಎಕ್ಕಡಕೊಂದು
ಮೊಳೆಯ ಬಡಿದಂತೆ
ನಗೆಯ ಗೆರೆಯೊಂದ ಮುಖದಿ ಧರಿಸಿ
ಪ್ರೀತಿ ಮಾಡಲು ಹೋಗಿ
ದೀವವಾದನು ಇವನು
ಬೇಟೆಯಾಡಲು ಹೋಗಿ ಬೇಟೆಯಾಗಿ

ರಾಮಲಿಂಗಪ್ಪ ಟಿ. ಬೇಗೂರು
ನಂ. ೪೧೬, ಎರಡನೇ ಕ್ರಾಸ್, ಗೌರೀಪೇಟೆ, ಕೋಲಾರ-೫೬೩೧೦೧



# ಗೋಧಿ ಗುಡ್ಡ, ಶಾಸ್ತ್ರಿಗಳು ಮತ್ತು ಮೊಮ್ಮಗಳು

**ನೆ. ವಿಶ್ವನಾಥ**

ದಿನವೂ ಎಂಬಂತೆ ನಿನ್ನೆ ಸಂಜೆಯೂ ಪೌತ್ರಿಯೊಡನೆ ಮನೆಯ ಹತ್ತಿರದಲ್ಲೇ ಇರುವ ಗೋಧಿ ಗುಡ್ಡಕ್ಕೆ ಹೋಗಿದ್ದೆ. ತಾತನ ತೋಳೇರಿ, ಗುಡ್ಡದ ದೇವಸ್ಥಾನಗಳನ್ನು ಸುತ್ತಿ ಬೆಳೆದ ಈ ಮೊಮ್ಮಗಳು ಈಗ ನನ್ನ ಪಕ್ಕದಲ್ಲಿ ನಡೆದು ಬರುವಷ್ಟು ದೊಡ್ಡವಳಾಗಿದ್ದಾಳೆ. ಏಳು ವರ್ಷದ ಅವಳ ಕುತೂಹಲಗಳೆಲ್ಲ ಸಾಮಾನ್ಯವಾಗಿ ಪ್ರಶ್ನೆಗಳಾಗಿ ಮೊಳೆಯುತ್ತವೆ. ಅವುಗಳಿಗೆ ಉತ್ತರ ಹೇಳುತ್ತಾ, ತೋಚದಾಗ ಹುಡುಕುತ್ತಾ ಈ ನಿವೃತ್ತನ ಕಾಲ ಸಾರ್ಥಕವಾಗಿ ಕರಗುತ್ತದೆ.

ನಿನ್ನೆ ಸಂಜೆ ಮನೆಗೆ ವಾಪಸ್ಸಾಗುತ್ತಾ ದಾರಿಯಲ್ಲೇ ಬಂತು ಅವಳ ಪ್ರಶ್ನೆ : ''ಇದೇಕೆ ತಾತ, ಈ ಕಲ್ಲು ಗುಡ್ಡಾನ ಗುಡಿ ಗುಡ್ಡ ಅನ್ನದೆ ಗೋಧಿ ಗುಡ್ಡ , ಗೋಧಿ ಗುಡ್ಡ ಅಂತಾರೆ?''

ಹಿಂದೆ ಯಾವಾಗಲೋ ಕಾಡಿನ ಮಧ್ಯೆ ಇದ್ದು ನಗರದ ಮಧ್ಯದಲ್ಲಿ ಸೇರಿಹೋದ ಈ ಕಲ್ಲು ಗುಡ್ಡಕ್ಕೆ ಗೋಧಿ ಗುಡ್ಡವೆಂದು ಹೆಸರಾಗಬೇಕಾದರೆ ಅದಕ್ಕೆ ಏನೋ ಒಂದು ಕಥೆ ಇದ್ದೀತು. ನಾನಂತೂ ಕೇಳಿಲ್ಲ. ಈಗ ಮಗುವಿನ ಕುತೂಹಲ ತಣಿಸಲು ಒಂದು ಕಥೆ ಸೃಷ್ಟಿಸಿದರಾಯ್ತು ಅಂದುಕೊಂಡು, ''ಅದಕ್ಕೆ ಒಂದು ಕಥೆ ಇದೆಯಮ್ಮ. ಮನೇಲಿ ಹೇಳ್ತೀನಿ'' ಅಂದೆ. ಮೊಮ್ಮಗಳು ''ರಸ್ತೆ ಗಲಾಟೇಲಿ ಕೇಳಿಸೋಲ್ಲ ಅಲ್ವ?'' ಅಂದಳು.

ಮನೆ ತಲುಪಿದಾಗ ಮೊಮ್ಮಗಳ ಸಹಪಾಠಿ ಅಪ್ಪ-ಅಮ್ಮನ ಜೊತೆ ಬಂದು ಇವಳಿಗಾಗಿಯೇ ಕಾಯುತ್ತಿದ್ದಳು. ಬಂದವರು ಸ್ವಲ್ಪ ಹೊತ್ತು ಇದ್ದು ಮಾತುಕತೆಯಾಡಿ ಹಿಂದಿರುಗುವವರೆಗಿನ ಸಂಭ್ರಮ, ಆಮೇಲೆ ಒಂದು ಊಟ ನಿದ್ದೆಯ ಕರೆಯಲ್ಲಿ ನಮ್ಮ ಏಕಮಾತ್ರ ಮೊಮ್ಮಗಳಿಗೆ ಗೋಧಿ ಗುಡ್ಡದ ಕಥೆ ಮರೆತೇ ಹೋಗಿತ್ತು. ಮಾರನೆ ಬೆಳಗ್ಗೆ ಸ್ಕೂಲಿಗೆ ಹೋಗುವ ಸಮರ ಸನ್ನಾಹದಲ್ಲಿ ಕಥೆ ಯಾರಿಗೆ ನೆನಪಾಗುತ್ತೆ?

ಮೊಮ್ಮಗಳು ಸ್ಕೂಲಿಗೂ ಅವಳ ಹಿಂದೆಯೇ ಮಗ ಆಫೀಸಿಗೂ ಹೋದಮೇಲೆ ಸ್ನಾನದ ಸರದಿ ನನ್ನದು. 'ದೇಹವಿದು ನೀನಿರುವ ಗುಡಿಯೆಂದು ತಿಳಿದು' ಎಂದ ಕವಿವಾಣಿ ನೆನಪಿಸಿಕೊಳ್ಳುತ್ತಾ ಸ್ನಾನದ ಮನೆಗಿಳಿದಾಗ ನಿನ್ನೆ ಮೊಮ್ಮಗಳು ಕೇಳಿದ ಪ್ರಶ್ನೆ ಅಂತಃಪ್ರಜ್ಞೆಯಲ್ಲೆಲ್ಲೋ ಮಿಡುಕುತ್ತಿದ್ದಿರಬೇಕು - 'ಗುಡಿ' ಗುಂಗಾಯಿತು. ಗುಡಿಗಳಿಗೆ ಬರವೇ ಈ ಭಾರತದಲ್ಲಿ? ಗುಡಿ ಮಂದಿರ ದೇವಾಲಯ ದೇಗುಲ ದೇವಸ್ಥಾನ ಬಸದಿ ಚರ್ಚು ಮಸೀದಿ ಸಿನಗಾಗ್ - ಎಷ್ಟು ಹೆಸರು, ಎಷ್ಟು ಸಂಖ್ಯೆ! ಎಷ್ಟು ವೈವಿಧ್ಯ. ಅದೆಷ್ಟು ದೇವತೆಗಳು. ಊರ ಗಡಿಯಲ್ಲಿ, ನದಿಯ ದಡದಲ್ಲಿ, ಸಮುದ್ರದ ತೀರದಲ್ಲಿ, ಅರಣ್ಯದ ಅಂತರಾಳದಲ್ಲಿ, ಕೆರೆಯ ಏರಿಯಲ್ಲಿ, ಸರೋವರದ ದಂಡೆಯಲ್ಲಿ, ಪಾತಾಳದ ಕಂದರದಲ್ಲಿ, ಹಿಮಾಲಯದ ಉತ್ತುಂಗದಲ್ಲಿ, ಗುಡ್ಡದ ತಪ್ಪಲಲ್ಲಿ, ಅದರ ನೆತ್ತಿಯಲ್ಲಿ... ಎಲ್ಲಿಲ್ಲ? ಹಳೆಯ ಕಾಲದ ಮನೆಗಳಲ್ಲಂತೂ ದೇವರ ಕೋಣೆ ಒಂದು ಸಣ್ಣ ಗುಡಿಯೇ.

ಆ ದೇವರ ಕೋಣೆಗಳು ನಗರದ ಈ ಮನೆಗಳಲ್ಲಿ ಎಲ್ಲಿ ಸಿಕ್ಕಬೇಕು? ಶ್ರೀಮಂತರ ಮನೆಗಳಲ್ಲೂ ಅವುಗಳ ಗಾತ್ರ ಕುಗ್ಗಿದೆ. ಹಾಗಿರುವಾಗ ಮಧ್ಯಮ ವರ್ಗ ಎನಿಸಿಕೊಳ್ಳುವ ನಮಗೆಲ್ಲಿ ಬರಬೇಕು ದೇವರ ಕೋಣೆ? ದೇವರ ಕೋಣೆ ಎಂದು ಕರೆಸಿಕೊಳ್ಳುವ ಗೂಡಿನಲ್ಲಿ ಕುಳಿತು 'ಆಗಮಾರ್ಥಂ ತು ದೇವಾನಾಂ ಗಮನಾರ್ಥಂ ತು ರಕ್ಷಸಾಮ್', ಹೇಳುತ್ತಾ ಗಂಟೆ ಬಾರಿಸಿದೆ.

ಬಹುಶಃ ಇದೇ ಹೊತ್ತಿಗೆ ಗೋಧಿ ಗುಡ್ಡದ ದೇವಾಲಯದಲ್ಲಿಯೂ ಅರ್ಚಕರು ದೇವತಾ ವಿಗ್ರಹಕ್ಕೆ ಅಭಿಷೇಕ ಪ್ರಾರಂಭಿಸಿರಬಹುದು. ಭಕ್ತರ ಗುಂಪು ನೆರೆದಿರುತ್ತೆ. ಹೇಗಿದ್ದುದು ಹೇಗಾಗಿ ಹೋಯ್ತು ಈ ಗೋಧಿ ಗುಡ್ಡ. ನಾನೇ ಇಪ್ಪತ್ತೈದು ವರ್ಷದ ಹಿಂದೆ ನೋಡಿದಾಗ ಸುತ್ತ ಮುತ್ತ ಮುಳ್ಳು ಕಂಟಿ ಬೆಳೆದು, ಅಲ್ಲಲ್ಲಿ ಹುತ್ತಗಳಿಂದ ಸುತ್ತುವರಿದು ಹತ್ತಿರ ಸುಳಿಯಲು ಕಷ್ಟವಾಗುತ್ತಿದ್ದ ಇಲ್ಲೀಗ ಇಷ್ಟೊಂದು ಬದಲಾವಣೆಯೆ ! ಎಂದು ಅಚ್ಚರಿಯಾಗುತ್ತದೆ. ಅದರ ಮೊದಲಿನ ರೂಪ ನೋಡಿದ್ದವರು ಮತ್ತೆ ಮಧ್ಯೆ ನೋಡದೆ ಇಷ್ಟು ವರ್ಷ ಬಿಟ್ಟು ಈಗ ಬಂದರೆ ನಂಬುವುದೇ ಕಷ್ಟವಾದೀತು.

ಈಗ ಗುಡ್ಡದ ಸುತ್ತ ತೋಟದ ಸಿರಿಯೇನು, ಹೂಗಿಡಗಳ ಸೊಗಸೇನು, ಗುಡ್ಡವೇರಲು ಮೆಟ್ಟಿಲುಗಳ ಶಿಸ್ತೇನು, ಗುಡಿಯ ವಾಸ್ತುವಿನ ಚೆಲುವೇನು, ಚಿನ್ನದ ಶಿಖರಗಳ ಹೊಳಪೇನು, ದೀಪಾಲಂಕಾರಗಳ ಬೆಡಗೇನು, ಮಂತ್ರಘೋಷಗಳ ತುಂಬುನಾದವೇನು, ಅರ್ಚಕರುಗಳ ಶ್ರದ್ಧೆಯೇನು, ಭಕ್ತರ ತನ್ಮಯತೆಯೇನು, ಪ್ರಸಾದ ಹಂಚುವ ವಿತರಣೆಯೇನು, ಕಡೆಗೆ ಭಕ್ತರ ಪಾದರಕ್ಷೆಗಳನ್ನು ಕಾಯುವ ಕಾಳಜಿಯೇನು...... ನೋಡುತ್ತಾ ನೋಡುತ್ತಾ ಹೋದರೆ ತಲೆದೂಗುತ್ತದೆ. ದೇವಸ್ಥಾನ ಅಂದರೆ ಹೀಗಿರಬೇಕು ಅನಿಸುತ್ತದೆ.

ನಗರದ ನಾನಾ ಕಡೆ ದೇವಸ್ಥಾನಗಳೇನೋ ಇವೆ - ಹಳೆಯವು, ಹೊಸವು, ಮುಜರಾಯಿ ಇಲಾಖೆ ಸುಪರ್ದಿನವು, ಖಾಸಗಿ ಜನದವು, ನಾಲ್ಕು ಜನ ಸೇರಿ ಹುಟ್ಟು ಹಾಕಿದಂತಹವು. ಬಡ ದೇಗುಲಗಳಿಂದ ಹಿಡಿದು ಹೈ-ಟೆಕ್ ಮಂದಿರದವರೆಗೆ ಅವುಗಳ ವಿಸ್ತಾರ. ಯಾರಾದರೂ 20ನೇ ಶತಮಾನದ ಆಧುನಿಕ ನಗರಗಳಲ್ಲಿ ಪೂಜಾಸ್ಥಾನಗಳು : ಉಗಮ, ವಿಕಾಸ ಮತ್ತು ಅವುಗಳ ಧಾರ್ಮಿಕ - ಸಾಮಾಜಿಕ - ರಾಜಕೀಯ ಪ್ರಭಾವ ಮತ್ತು ಪರಿಣಾಮಗಳು ಅಂತಲೋ ಅಥವಾ ಹೀಗೆ ಇನ್ನಾವುದಾದರೂ ಇದೇ ತರಹ ಉದ್ದವಾಗಿ ಪದಗಳ ಸರಮಾಲೆ ಹೊಸೆದು ಮಹಾಪ್ರಬಂಧ ಅಂತ ಬರೆದರೆ ಯಾವುದಾದರೂ ವಿಶ್ವವಿದ್ಯಾಲಯದಿಂದ ಡಾಕ್ಟರೇಟು ಗಿಟ್ಟಿಸಿಕೊಳ್ಳಲು ಅಡ್ಡಿಯಿಲ್ಲ ಎಂದು ನಾನೂ ನನ್ನ ಸಮವಯಸ್ಕ ಮಿತ್ರರೂ ನಕ್ಕಿದ್ದುಂಟು.

'ಕಲಶಸ್ಯ ಮುಖೇ ವಿಷ್ಣುಃ ಕಂಠೇ ರುದ್ರಸ್ಸಮಾಹಿತಃ' ... ಮಂತ್ರ ಅದರ ಪಾಡಿಗೆ ಅದು ಮುಂದುವರಿಯುತ್ತಿದ್ದರೆ ಮನಸ್ಸು ಎತ್ತೆತ್ತಲೋ ಕುಪ್ಪಳಿಸಿ, ಲಹರಿಗಳ ವಿಸ್ತಾರದಲ್ಲಿ ಹಾರಾಡಿ ಮತ್ತೆ ಮತ್ತೆ ವಾಪಸ್ಸಾಗುತ್ತಿತ್ತು.

ಕ್ಷೀರೇಣ ಸ್ನಪಯಾಮಿ, ದಧ್ನಾ ಸ್ನಪಯಾಮಿ .... ಭರತಖಂಡದ ಉದ್ದಗಲದಲ್ಲಿಯೂ ಅರ್ಥವಾಗುವಂಥ ಸರಳ ಭಾಷೆ. ಅದರ ಕಲಿಕೆಗೂ ಬೇಕು ಸ್ವಲ್ಪ ಶ್ರದ್ಧೆ.

ಗೋಧಿ ಗುಡ್ಡ ದೇವಸ್ಥಾನದ ಜನರೂ

ಶ್ರದ್ಧಾವಂತರೇ. ನೋಡುತ್ತಾ ಬಂದಿದ್ದೀನಲ್ಲ ಹಲವಾರು ವರ್ಷಗಳಿಂದ. ಈ ಗೋಧಿ ಗುಡ್ಡ 'ಪರಾಕ್ರಾಂತ' ವಾಗಿಬಿಡುತ್ತಿತ್ತಂತೆ ಇಪ್ಪತ್ತೈದು ವರ್ಷದ ಹಿಂದೆ. ಹಾಗಾಗಲು ಬಿಡದೆ ಛಲ ತೊಟ್ಟು, ಜೀವಗಳನ್ನೇ ಅಪಾಯಕ್ಕೆ ಒಡ್ಡಿ ರಕ್ಷಿಸಿಕೊಂಡರಂತೆ - ಆಗಿನ ತರುಣರು. ಆದರೆ ಅವರ ಆ ತಾರುಣ್ಯ ಹಾಗೇ ಉಳಿಯಲು ಸಾಧ್ಯವೇ? ಕಾಲ ಅವರ ಹಣೆಗಳ ಮೇಲೆ ಸುಕ್ಕಿನ ಗೆರೆಗಳನ್ನು ಕೊರೆದಿದೆ. ಕೆಲವರಲ್ಲಂತೂ ತಾರುಣ್ಯದ ಆ ಉತ್ಸಾಹ ಶ್ರದ್ಧೆಗಳು ಹಲವಾರು ಪ್ರಭಾವಗಳಿಗೆ ಸಿಕ್ಕಿ ರೂಪಾಂತರಗೊಂಡಿವೆ. ಮುಸುಕು ಹಾಕಿಟ್ಟರೂ ಹೊರಗೆ ಇಣುಕುತ್ತವೆ. ಸನ್ನಿವೇಶಗಳ ಮಾಲಿನ್ಯಕ್ಕೆ ಸಿಕ್ಕಿ ಸತ್ವಗುಣ ಸ್ಫಟಿಕ ಶುದ್ಧತೆಯನ್ನು ಕಳೆದುಕೊಂಡು ಮಂಕಾಗುತ್ತಿದೆ, ರಜಸ್ಸಿಗೂ ತಮಸ್ಸಿಗೂ ಜಾರುತ್ತಿದೆ ಎಂದು ಸಂದೇಹ ಬರುತ್ತದೆ.

''ನೈವೇದ್ಯಕ್ಕೆ ಇಡಲೆ?'' ಅಂದ ಮಡದಿಯ ಮಾತು ಎಚ್ಚರಿಸಿತು. ಆ?! ಹಾಗಾದರೆ ಇಲ್ಲಿಯವರೆಗೂ ಪೂಜಾ ವಿಧಾನ ಏನೇನು ನಡೆಯಬೇಕೋ ನಡೆದಿದೆ. ಮನಸ್ಸು ಎತ್ತೆತ್ತಲೋ ಸುತ್ತುತ್ತಿದ್ದಾಗಲೂ ಇದೆಲ್ಲ ಹೇಗೆ ಸಾಗುತ್ತದೋ? ಅಭ್ಯಾಸ ಬಲವೇ?

ನೈವೇದ್ಯಕ್ಕೆ ಇಡಲೆ ಅಂದ ಮಡದಿ ಪೂಜಾಕ್ರಮ ಎಲ್ಲಿ ನಿಂತಿತು ಎಂದು ಜ್ಞಾಪಿಸುವಂತೆ ಮೆಲುದನಿಯಲ್ಲಿ ''ಕರ್ಪೂರ, ತುಪ್ಪದ ಬತ್ತಿ ಅಲ್ಲೇ ಇದೆಯಲ್ಲ...'' ಅಂದಾಗ ಅವುಗಳನ್ನು ಮಂಗಳಾರತಿ ಹಲ್ಲೆಗೆ ಇಟ್ಟು, ಹಚ್ಚಿ 'ಸಾಜ್ಯಂ ತ್ರಿವರ್ತಿ ಸಂಯುಕ್ತಂ ವಹ್ನಿನಾ ದ್ಯೋತಿತಂ ಮಯಾ...' ಹೇಳುತ್ತಾ ಮುಂದುವರಿಸಿದೆ. ಪಡಸಾಲೆಯಲ್ಲಿ ಟೆಲಿಫೋನ್ ಗಂಟೆ ಬಾರಿಸಿತು. ಸೊಸೆ, 'ಪೂಜೆ ಮಾಡ್ತಿದ್ದಾರೆ' ಅಂದಿದ್ದು ಕೇಳಿಸಿತು. ಆ ಕಡೆಯ ಉತ್ತರವನ್ನು ನನಗೆ ಹೇಳಲೆಂದೇ ಬರುತ್ತಿದ್ದವಳಿಗೆ ಮಂತ್ರಮಧ್ಯದಲ್ಲೇ 'ಯಾರು?' ಅಂದಾಗ, ''ಸಾಂಬಶಾಸ್ತ್ರಿಗಳು. ಈಗ ಎಲ್ಲೋ ಹೊರಟಿದ್ದಾರಂತೆ. ಒಂದು ಗಂಟೆಗೆ ಮತ್ತೆ ಮಾಡ್ತಾರಂತೆ'' ಅಂದಳು.

ಶಾಸ್ತ್ರಿಗಳು ನನಗೆ ದೂರದ ಸಂಬಂಧಿ. ಈ ಮಹಾನಗರದಲ್ಲಿ ಅವರೊಂದು ಕಡೆ ನಾವೊಂದು ಕಡೆ. ಹೀಗಾಗಿ ಏನಾದರೂ ಕಾರಣ, ಕಾಲಾವಕಾಶ ಒದಗಿದಾಗ ನಮ್ಮ ಒಡನಾಟ. ಆರು ತಿಂಗಳ ಹಿಂದೆ ಬಂಧುಗಳ ಮದುವೆಯಲ್ಲಿ ಸಿಕ್ಕಿದ್ದರು. ಮಕ್ಕಳು ಮರಿ ತಲೆಯೆತ್ತಿಕೊಂಡು ಎಲ್ಲರೂ ಜೊತೆಯಾಗಿ ನೆಮ್ಮದಿಯಾಗಿದ್ದಾರೆ. ಮೊದಲೇ ಸಾತ್ವಿಕ ಜೀವಿ. ಪುರಾಣ ಪುಣ್ಯಕಥೆ ಸತ್ಸಂಗ ಅಂತ ಕಾಲ ಕಳೆಯುತ್ತೆ. ಯಾವುದೋ ಇಲಾಖೆಯಲ್ಲಿದ್ದು ಈಗ ನಿವೃತ್ತರ ಪೆನ್‌ಷನ್ ಬರುತ್ತೆ. ಮಕ್ಕಳಿಗೆಲ್ಲ ಒಳ್ಳೊಳ್ಳೆ ಕೆಲಸ, ಕೈ ತುಂಬ ಸಂಬಳ. ಹಾಗಾಗಿ ಪೆನ್‌ಷನ್ ಹಣವನ್ನು ಇವರೂ ಇವರ ಪತ್ನಿಯೂ ತಮಗೆ ತೋಚಿದಂತೆ ಸತ್ಕಾರ್ಯದಲ್ಲಿ ಬಳಸಲು ಸ್ವತಂತ್ರರು.

ಶಾಸ್ತ್ರಿಗಳ ಈ ಪ್ರವೃತ್ತಿಯೇ ಅವರನ್ನು ತಮ್ಮ ಬಡಾವಣೆಯಲ್ಲಿ ಹೊಸದಾಗಿ - ಹೊಸದಾಗಿ ಅಂದರೆ ಸುಮಾರು ಇಪ್ಪತ್ತು ವರ್ಷದ ಹಿಂದೆ - ಹುಟ್ಟಿಕೊಂಡ ಗಣೇಶ ದೇವಸ್ಥಾನಕ್ಕೆ ಎಳೆಯುತ್ತಿದ್ದುದು. ಯಾರೋ ಒಬ್ಬಾತ ನೆರೆ ರಾಜ್ಯದವನು ಕಟ್ಟಿಸಿದ್ದು ಆ ದೇವಸ್ಥಾನ. ಐವತ್ತು ವರ್ಷದ ಹಿಂದೆ ಈಗಿನ ಈ ನಗರ ಕಾಲು ಭಾಗದಷ್ಟೂ ಇರದಿದ್ದಾಗ ಕೈಯಲ್ಲಿ ಒಂದು ಕರಣೆ ಹಿಡಿದು ಗಾರೆ ಕೆಲಸಕ್ಕೆ ಬಂದನಂತೆ. ಅದೃಷ್ಟ ದೇವತೆ ಒಲಿದಳಂತೆ. ನಗರ ಬೆಳೆಬೆಳೆದಂತೆ ಇವನೂ ಲಕ್ಷಾಧಿಪತಿಯಾಗಿ, ಕೋಟ್ಯಾಧಿಪತಿಯಾಗಿ ಬೆಳೆದ. ನಗರದ ನಾಲ್ಕಾರು ಕಡೆ ಬಡಾವಣೆಗಳಲ್ಲಿ ಯಾರಿಗೂ ಸೇರಿಲ್ಲವೆಂದು ನಿಂತ ಖಾಲಿ ಜಾಗಗಳ ಹದ ನೋಡಿಕೊಂಡು, ಪರಿಸ್ಥಿತಿಗಳನ್ನು ಉಪಯೋಗಿಸಿಕೊಂಡು ದೇವ ದೇವತೆಗಳ ಮಂದಿರ ಗಳನ್ನು ಕಟ್ಟಿಸಿದ. ನಗರದ ಜೊತೆಗೆ ಅವೂ ಬೆಳೆದುವು, ಮೆರುಗು ಮೆತ್ತಿಕೊಂಡವು, ಅಲಂಕಾರ ಬಂತು, ಆದಾಯ ಹರಿಯಿತು. ನಮ್ಮ ಶಾಸ್ತ್ರಿಗಳು ಹೋಗಿಬರುತ್ತಿದ್ದ ಗಣೇಶನ ದೇವಸ್ಥಾನವೂ ಅವುಗಳ ಪೈಕಿ ಒಂದು.

ರಿಟೈರಾದ ಮೇಲಂತೂ ಶಾಸ್ತ್ರಿಗಳು ಗಣೇಶನ ದೇವಸ್ಥಾನಕ್ಕೆ ಹೋಗಿಬರುವುದು ದಿನನಿತ್ಯದ ಕಟ್ಟಳೆಯಾಯ್ತು. ಆಗೊಂದು ದಿನ ಅದರ ಮಾಲೀಕ ದೇವಸ್ಥಾನಕ್ಕೆ ಕಾರಿನಲ್ಲಿ ಬಂದವನು ಶಾಸ್ತ್ರಿಗಳ ಮುಖದ ವರ್ಚಸ್ಸಿನಿಂದ ಆಕರ್ಷಿತನಾಗಿ ಪರಿಚಯ ಮಾಡಿಕೊಂಡನಂತೆ. ಪರಿಚಯ ಬಲಿತು, ಅವರ ಗುಣಸ್ವಭಾವಗಳನ್ನು ಚೆನ್ನಾಗಿ ಅರಿತುಕೊಂಡವ ಯಾವುದೋ ಸಂದರ್ಭದಲ್ಲಿ 'ಶಾಸ್ತ್ರಿಗಳೇ, ನೀವು ನನಗೊಂದು ಉಪಕಾರ ಮಾಡಬೇಕು' ಅಂದನಂತೆ. ಶಾಸ್ತ್ರಿಗಳಿಗೆ ಆಶ್ಚರ್ಯ, ಈ ಕೋಟ್ಯಾಧಿಪತಿಗೆ ಉಪಕಾರ? ಅವನು ತಾನು ಬಡತನದಲ್ಲಿ ಇದ್ದದ್ದು, ಬೆಳೆದು ಲಕ್ಷ್ಮೀಕಟಾಕ್ಷಕ್ಕೆ ಪಾತ್ರನಾದುದು ಎಲ್ಲ ಹೇಳಿಕೊಂಡು, 'ಹೀಗೆಲ್ಲ ದೇವಸ್ಥಾನಗಳನ್ನು ಕಟ್ಟಿಸಿದೆ, ಅವೆಲ್ಲ ನಡೀಬೇಕು ಅನ್ನೋದೆ ನನ್ನ ಮನಸ್ಸು. ಅದಕ್ಕೆ ನಿಮ್ಮಂಥವರ ಸಹಾಯ ಬೇಕು' ಅಂದನಂತೆ. ಅವನ ಒತ್ತಾಯಕ್ಕೆ ಮಣಿದು ಶಾಸ್ತ್ರಿಗಳು ಆಯ್ತು ಅಂದರು. ಆಮೇಲೆ ತುಂಬ ಸೌಜನ್ಯದಿಂದ ''ಶಾಸ್ತ್ರಿಗಳೇ, ಕೊಡೋಕೆ ನಾನು ಯಾರು? ಆ ಸ್ವಾಮಿ ಅನುಗ್ರಹ ಅಂತ ತಿಳಿದುಕೊಳ್ಳಿ. ಇದನ್ನು ನೀವು ಒಪ್ಕೋಬೇಕು'' ಅಂತ ತಿಂಗಳಿಗೆ ಇಷ್ಟು ಅಂತ ಸಂಭಾವನೆ ನೀಡುವ ಸೂಚನೆಯನ್ನು ಮುಂದಿಟ್ಟ. ಇದಕ್ಕೆ ಮಾತ್ರ ಶಾಸ್ತ್ರಿಗಳು ಸುತರಾಂ ಒಪ್ಪಲಿಲ್ಲ. ಆದರೆ ಮಾಲೀಕ, ಏನೇನೋ ವಿನಯ ಅನುನಯ ವಿಚಾರಗಳನ್ನು ಮುಂದೊಡ್ಡಿ ''ನೀವು ಉತ್ತಮರು, ನೀವು ಉಹ್ಞೂ ಅಂದರೆ ನನ್ನ ಮನಸ್ಸಿಗೆ ತುಂಬ ನೋವಾಗುತ್ತೆ'' ಅಂತ ಅವರನ್ನು ಹೇಗೋ ಒಪ್ಪಿಸಿದ. ಆ ಸಂಭಾವನೆಯನ್ನು ಶಾಸ್ತ್ರಿಗಳು ವಿಶೇಷ ಪೂಜೆ ಪ್ರಸಾದ ಪನಿವಾರ ಅಂತ ಅಲ್ಲೇ ವಿನಿಯೋಗಿಸಿಬಿಡುತ್ತಿದ್ದರು.




ಮಂತ್ರಿಗಳ ಶಿಫಾರಸಿನಿಂದ ಹೇಗೋ 'ಶಿಕ್ಷಕ ಪ್ರಶಸ್ತಿ' ಪಡೆದಿರಿ, ಆದರೆ ಈಗ ಊರಿನಲ್ಲಿ ನಿಮ್ಮನ್ನು ಯಾರೂ ಸನ್ಮಾನ ಮಾಡದೇ ಇರುವುದರಿಂದ ನಿಮಗೇ ಅವಮಾನ ಅನ್ನಿಸುತ್ತಿಲ್ಲವೇ?!

ಶಾಸ್ತ್ರಿಗಳು ದೇವಸ್ಥಾನದ ಮೇನೇಜರ್ ಆಗಿದ್ದು ನನಗೂ ಸಂತೋಷ. ತಿಂಗಳಿಗೋ ಪಕ್ಷಕ್ಕೋ ಅಲ್ಲಿಗೂ ಹೋಗಿ ಬರುತ್ತಿದ್ದೆ. ಶಾಸ್ತ್ರಿಗಳ ಮೇನೇಜರತ್ವದಲ್ಲಿ ದೇವಸ್ಥಾನಕ್ಕೆ ಏನೋ ಒಂದು ಹೊಸ ಕಳೆ ಬಂದಿತ್ತು.

ಈ ಮಧ್ಯೆ ದೆಹಲಿಯಲ್ಲಿರುವ ನನ್ನ ಮಗಳು-ಅಳಿಯನ ಕಾಗದಗಳ ವರಾತ ಹೆಚ್ಚಿ, ಮಡದಿಯೊಡನೆ ಅಲ್ಲಿಗೆ ಹೋಗಬೇಕಾಯ್ತು. ನಾಲ್ಕು ತಿಂಗಳು ಇದ್ದು ವಾಪಸ್ಸಾದಾಗ ಶಾಸ್ತ್ರಿಗಳ ದೇವಸ್ಥಾನಕ್ಕೆ ಹೋಗಿ ತುಂಬ ದಿನವಾಯ್ತೆಂದು, ಮಡದಿಯೊಡನೆ ಹೋಗಿ ಪೂಜೆ ಮಾಡಿಸಿಯಾದ ಮೇಲೆ, ಶಾಸ್ತ್ರಿಗಳು ಇಲ್ಲದ್ದನ್ನು ಗಮನಿಸಿ, ಅರ್ಚಕರ ಮುಂದೆ ''ಎಲ್ಲಿ ಕಾಣ್ತೋಲ್ಲವಲ್ಲ ಮೇನೇಜರು'' ಎಂದೆ. ಅರ್ಚಕರು ಸ್ವಲ್ಪ ಗಂಭೀರವಾಗಿ ''ಅವರು ಬರೋದು ನಿಲ್ಲಿಸಿ ತಿಂಗಳೇ ಆಯ್ತು'' ಎಂದವರು, ಯಾಕೆ ಎಂಬ ನನ್ನ ಪ್ರಶ್ನೆಗೂ ಕಾಯದೆ ತೇಲಿಕೆಯಲ್ಲಿ ''ಏನೋ ಅನಾನುಕೂಲವಂತೆ'' ಎಂದು ಬೇರೆ ಕಡೆ ಗಮನ ಹರಿಸಿದರು. ನಿಮಗೆ ಯಾಕೆ ಅವೆಲ್ಲ ಎನ್ನುವಂತಿತ್ತು ಅವರ ವರ್ತನೆ, ಮಾತಿನ ಧಾಟಿ. ಹೆಚ್ಚು ಕೇಳಿ ಪ್ರಯೋಜನವಿಲ್ಲವೆಂದು ನಾನೂ ಸುಮ್ಮನಾದೆ.

ಅದಾದ ಹದಿನೈದು ದಿನಕ್ಕೆ ನಾನೇ ಶಾಸ್ತ್ರಿಗಳ ಮನೆಗೆ ಹೋಗುವ ಸಂದರ್ಭ ಬಂತು. ಆತ್ಮೀಯ ಸ್ವಾಗತ, ಉಪಚಾರ, ಮಾತುಕತೆ ಜರುಗಿ ನಾನು ಹೋಗಿದ್ದ ಉದ್ದೇಶ ನೆರವೇರಿದ ಮೇಲೆ, ಕೇಳಲೋ ಬೇಡವೋ ಎಂಬಂತೆ ಸೂಕ್ಷ್ಮವಾಗಿ, ದೇವಸ್ಥಾನಕ್ಕೆ ಹೋಗಿದ್ದೆ, ತಾವು ಕಾಣಲಿಲ್ಲ ಅಂದೆ. ಸಹಜವಾಗಿ ಪ್ರಸನ್ನವಾಗಿರುತ್ತಿದ್ದ ಶಾಸ್ತ್ರಿಗಳ ಮುಖ ಈ ನನ್ನ ಪ್ರಸ್ತಾಪದಿಂದ ಮ್ಲಾನವಾಯ್ತೇನೋ ಎಂಬ ಸಂದೇಹ ತಲೆಯೆತ್ತುತ್ತಿದ್ದ ಆ ಎರಡು ಕ್ಷಣಗಳ ಮೌನ ಮುರಿದ ಶಾಸ್ತ್ರಿಗಳು, ಭಾರವೇ ಅನ್ನುವಂಥ ದನಿಯಲ್ಲಿ ''ಹೋಗಲಿ ಬಿಡಿ, ನನ್ನಂಥವರಿಗಲ್ಲ ಆ ಜಾಗ'' ಅಂದಾಗ, ಪ್ರಶ್ನೆ ಬೆಳೆಸುವುದು ಔಚಿತ್ಯವಲ್ಲವೆಂದು ಅಲ್ಲಿಗೇ ಬಿಟ್ಟಿದ್ದೆ.

ಆದರೆ ಮನುಷ್ಯ ಸಹಜ ಕುತೂಹಲ ಯಾರನ್ನು ಬಿಡುತ್ತದೆ. ಶಾಸ್ತ್ರಿಗಳಂಥ ಸಾತ್ವಿಕ ವ್ಯಕ್ತಿ..... ಅಥವಾ ಅಂಥವರೂ? ಜಿಜ್ಞಾಸೆಯ ಚಕ್ರ ಬೇಡಬೇಡವೆಂದರೂ ಮನಸ್ಸಿನಲ್ಲಿ ಸುತ್ತುತ್ತಿದ್ದಾಗ ನನ್ನ ಸಹಪಾಠಿಯಾಗಿದ್ದ ಗುಂಡಣ್ಣ ಭೇಟಿಯಾದ. ಮನುಷ್ಯನಾಗಿ ಗುಂಡಣ್ಣ ತುಂಬ ಸಂಭಾವಿತ ವ್ಯಕ್ತಿ. ಕೈಲಾದರೆ ಉಪಕಾರ ಮಾಡು, ಇಲ್ಲವಾದರೆ ಸುಮ್ಮನಿರು ಅನ್ನುವ ಸ್ವಭಾವ. ಮಿಕ್ಕಂತೆ ಅವನದೇ ಬೇರೆ ಲೋಕ - ವಿಚಾರವಾದದ್ದು ಮಾಹಿತಿಯದು ಸತ್ಯಾನ್ವೇಷಣೆಯದು. ಇಗೋ ಇಂಥವರು ಎಂದು ಒಂದು ಹೆಸರು ಹೇಳಿದರೆ ಅವರ ಹಿಂದು-ಮುಂದು, ಗುಣಾವಗುಣಗಳನ್ನೆಲ್ಲ ಬಿಡಿಸಿಡುತ್ತಿದ್ದ ಭೂಪ! ಇಂಥ ಒಂದು ವಿಚಾರ ಅಂದರೆ - ಉದಾಹರಣೆಗೆ 'ದೇವಸ್ಥಾನಗಳು' ಅಂದರೆ ಸಾಕು ದೇವಸ್ಥಾನಗಳ ಕಲ್ಪನೆ ಹೇಗೆ ಬೆಳೆಯಿತು, ಆಗಮಗಳು ಎಂದರೇನು, ಎಷ್ಟು ವಿಧ, ಶೈವಾಗಮಗಳು

ವೈಷ್ಣವಾಗಮಗಳು, ಯಾವ ಯಾವ ದೇವಸ್ಥಾನಗಳ ವಾಸ್ತು ಎಂಥದು, ಹಿಂದೆ ರಾಜಾಧಿರಾಜರಿಗೆ ದೇವಸ್ಥಾನಗಳೂ ಸಹ ಹೇಗೆ ಆದಾಯದ ಮೂಲಗಳಾಗಿದ್ದುವು, ಚಾಣಕ್ಯ ತನ್ನ ಅರ್ಥಶಾಸ್ತ್ರದಲ್ಲಿ ದೇವಸ್ಥಾನಗಳ ಬಗ್ಗೆ ಏನು ಹೇಳಿದ್ದಾನೆ, ನಮ್ಮ ದೇಶದ ಸಂಪದ್ಭರಿತ ದೇವಸ್ಥಾನಗಳನ್ನು ಯಾರು ಯಾರು ದೋಚಿದರು, ಅವರಲ್ಲಿ ಪರಕೀಯರು ಯಾರು ಸ್ವಕೀಯರು ಯಾರು, ಈಗ ವರ್ತಮಾನ ಕಾಲದಲ್ಲಿ ಯಾವ ಯಾವ ದೇವಸ್ಥಾನಗಳು ಎಷ್ಟೆಷ್ಟು ಸಂಪತ್ತು ತುಂಬಿಕೊಂಡಿವೆ, ಅದು ಹೇಗೆ ಸೋರಿಹೋಗುತ್ತದೆ, ಅವುಗಳಿಂದ ಯಾರು ಯಾರು ಪ್ರತಿಷ್ಠೆ ಬೆಳೆಸಿಕೊಳ್ಳುತ್ತಿದ್ದಾರೆ - ಹೀಗೆ ಅವನ ವಾಗ್ಧಾರೆ ವಿಚಾರಧಾರೆಯಾಗುತ್ತಿತ್ತು. ಇದನ್ನೆಲ್ಲ ಎಲ್ಲಿ ಓದಿಕೊಳ್ಳುತ್ತಿದ್ದನೋ ಎಲ್ಲಿ ತಿಳಿದುಕೊಳ್ಳುತ್ತಿದ್ದನೋ....

ಭೆಟ್ಟಿಯಾದ ಗುಂಡಣ್ಣನ ಮುಂದೆ ''ಶಾಸ್ತ್ರಿಗಳು ಈಗ ದೇವಸ್ಥಾನದಲ್ಲಿ ಇಲ್ಲವಂತೆ'' ಅಂದೆ. ಗುಂಡಣ್ಣ ''ನನಗೂ ಗೊತ್ತು. ಅಂಥವರು ಅಲ್ಲೆಲ್ಲಾ ಇರೋದಕ್ಕೆ ಆಗುತ್ತಾ!'' ಎಂದು ಉದ್ಗಾರವೆತ್ತಿದಾಗ ವಿಚಿತ್ರವೆನಿಸಿತು. ಏನು ಹೇಳುತ್ತಾನೋ ಇವನು ಎಂದು ಆತಂಕ ತಲೆಯೆತ್ತಿತ್ತು.

ಗುಂಡಣ್ಣ ಹೇಳಿದ್ದರಲ್ಲಿ ಶಾಸ್ತ್ರಿಗಳು ಒಂದು ವರ್ಷ ಆ ದೇವಸ್ಥಾನದಲ್ಲಿ ಮೇನೇಜರತ್ವ ವಹಿಸಿ ಮುಂದುವರಿದಿದ್ದೇ ಹೆಚ್ಚು. ಆ ದೇವಸ್ಥಾನದ ಮಾಲೀಕನ ಸೋದರಳಿಯನದೇ ಅಂತೆ ಅಲ್ಲಿ ಎಲ್ಲ ಕಾರುಬಾರು. ಇನ್ನೂ 34-35 ವರ್ಷದವನಂತೆ. ಪುಡಾರಿ ರಾಜಕೀಯದಲ್ಲಿ ಮುಳುಗಿ ಪಳಗಿದ್ದಾನಂತೆ. ಅವನೂ ಆ ಪಟ್ಟೆ ವಿಭೂತಿ ರುದ್ರಾಕ್ಷಿಮಾಲೆ ಜರತಾರಿ ಶಾಲುಗಳಷ್ಟೆ ಬಂಡವಾಳದ ಅರ್ಚಕನೂ ಶಾಮೀಲು. ಹುಂಡಿ ತುಂಬಿದ್ದು ನೋಡಿಕೊಂಡು ರಾತ್ರೋರಾತ್ರಿ ಖಾಲಿಯಾಗುತ್ತಂತೆ. ಅಭಿಷೇಕಕ್ಕೆ ಅಲಂಕಾರಕ್ಕೆ ನೈವೇದ್ಯಕ್ಕೆ ಒಂದಕ್ಕೆ ನಾಲ್ಕು ಲೆಕ್ಕ. ಹೀಗೆ ಸುಖವಾಗಿ ಉಡಾಯಿಸುತ್ತಿದ್ದವರಿಗೆ ಶಾಸ್ತ್ರಿಗಳು ಬಂದು ಏಕ್‌ದಂ ಕೈಕಟ್ಟಿ ಹೋಯ್ತು. 'ದೇವರಿಗೆ' ಶುಕ್ರದೆಸೆ ಬಂತು!

ಕಳ್ಳ ತೂಬುಗಳನ್ನು ಮುಚ್ಚಿದರೆ ಕೆರೆಯಲ್ಲಿ ನೀರು ನಿಲ್ಲುವುದು ಆಶ್ಚರ್ಯವೆ? ದೇವರ ಹೆಸರಿನ ಬ್ಯಾಂಕು ಲೆಕ್ಕದಲ್ಲಿ ಗಂಟು ಬೆಳೆದಾಗ ಶಾಸ್ತ್ರಿಗಳ ಮನಸ್ಸಿನಲ್ಲಿ ಒಂದು ಆಸೆ ಚಿಗುರಿತು. ಅದನ್ನು ಯಜಮಾನರ ಮುಂದಿಟ್ಟರು. ಆತನೂ 'ಅಗತ್ಯವಾಗಿ ಆಗಲಿ ಶಾಸ್ತ್ರಿಗಳೆ' ಅಂದ.

ದೇವಸ್ಥಾನದ ಪಕ್ಕದಲ್ಲಿದ್ದ ವಿಶಾಲವಾದ ಖಾಲಿ ನಿವೇಶನ ದೇವಸ್ಥಾನಕ್ಕೆ ಸೇರಿದ್ದಂತೆ. ಅದರಲ್ಲಿ ಒಂದು ಪ್ರವಚನ ಮಂಟಪ ಕಟ್ಟಿಸಿ ಪುರಾಣ-ಪುಣ್ಯಕಥೆ, ಪಂಡಿತರು ವಿದ್ವಾಂಸರಿಂದ ಉಪನ್ಯಾಸ ಚರ್ಚೆ ಗೋಷ್ಠಿ ಅಂತ ಏರ್ಪಡಿಸಿದರೆ ದೇವಸ್ಥಾನ ಕೇವಲ ಗಂಟೆ ಜಾಗಟೆ ಮಂಗಳಾರತಿ ಪ್ರಸಾದಗಳಿಗಷ್ಟೆ ಸೀಮಿತವಾಗದೆ ಸಾಂಸ್ಕೃತಿಕ ಕೇಂದ್ರವಾಗುತ್ತದೆ ಎಂದು ಶಾಸ್ತ್ರಿಗಳ ಆಲೋಚನೆ.

ಗುಂಡಣ್ಣ ಇಷ್ಟು ಹೇಳಿದಾಗ ನಾನು ಅದೇಕೆ ಮಕ್ಕಳ ಹಾಗೆ ಆತುರ ತೋರಿದೆನೋ! ''ಮುಂದೆ?''

''ಮುಂದೆ ಏನಾಗಬೇಕೋ ಅದೇ ಆಯ್ತು.'' ಗುಂಡಣ್ಣ ನಕ್ಕ.

''ಅಂದರೆ?''

ಗುಂಡಣ್ಣ ವಿವರಿಸಿದ : ''ಮಂಟಪ ನಿರ್ಮಾಣದಂಥ ದೊಡ್ಡ ಕೆಲಸ ನಡೆಯುವಾಗ ಶಾಸ್ತ್ರಿಗಳಿಗೆ ಒಬ್ಬರಿಗೇ ಹೊರೆ ಜಾಸ್ತಿಯಾಗುತ್ತೆ, ಸಹಾಯಕ್ಕೆ ತಾವೂ ಇರ್ತೀವಿ ಅಂತ ಯಜಮಾನರನ್ನು ಹೇಗೋ ಒಪ್ಪಿಸಿ ಅರ್ಚಕನೂ ಸೋದರಳಿಯನೂ ಒಳಕ್ಕೆ ತೂರಿಕೊಂಡರು. ಜಲ್ಲಿ ಕಲ್ಲು ಕಬ್ಬಿಣ ಸಿಮೆಂಟು ಅಂತ ವ್ಯವಹಾರದ ಯಾವುದೋ ಹಂತದಲ್ಲಿ ಶಾಸ್ತ್ರಿಗಳಿಗೆ ಏಮಾರಿಸಿದ್ದಾಯ್ತು. ಯಜಮಾನನ ಮನಸ್ಸಿನಲ್ಲಿ ಶಾಸ್ತ್ರಿಗಳ ವಿಚಾರಕ್ಕೆ ಸಂದೇಹ ಹುಟ್ಟಿಸಿದ್ದೂ ಆಯ್ತು. ಅವನ ಮಾತಿನಲ್ಲಿ ತಮ್ಮನ್ನು ಕುರಿತಂತೆ ಘನತೆ ಗೌರವಗಳ ತೂಕ ತಪ್ಪುತ್ತಿರುವ ಸೂಕ್ಷ್ಮ ಅರಿತ ಕೂಡಲೆ ಶಾಸ್ತ್ರಿಗಳು ಹೊರಬಿದ್ದರು.''

ಆ ಘಟ್ಟದಲ್ಲಿ ಗುಂಡಣ್ಣ ಒಂದು ಕ್ಷಣ ತಡೆದು, ''ಶ್ರೀಮಂತರು ಅಂದರೆ ಏನೆಂದುಕೊಂಡಿದ್ದೀರಿ? ಅವರು ಬಹಳ ಮಾಡಿ ಗುಣಗ್ರಾಹಿಗಳಲ್ಲ, ಹಣಗ್ರಾಹಿಗಳು'' ಎಂದು ನಕ್ಕ.

''ಈಗ?''

''ಈಗಲಾ? ಶಾಸ್ತ್ರಿಗಳನ್ನು ಬಿಟ್ಟು ಮಿಕ್ಕ ಅವರೆಲ್ಲ ಸಂತೋಷವಾಗಿದಾರೆ. ಇರದೆ ಏನು ಗುನುಗು ದೇವಸ್ಥಾನದಿಂದ ಬರ್ತಾ ಇದ್ದರೆ'' ಅಂತ ಇನ್ನಷ್ಟು ನಕ್ಕವನು ಪುನಃ ''ನಿಮ್ಮಂಥ ಭೋಳೆ ಭಕ್ತರ ಬಲ ಇರುವವರೆಗೂ ಯಾವುದಕ್ಕೆ ಕಡಿಮೆ ದೇವಸ್ಥಾನಗಳಿಗೆ, ಅವುಗಳ ಧರ್ಮದರ್ಶಿಗಳಿಗೆ?'' ಅಂದ ಅರ್ಧ ಹಾಸ್ಯದಲ್ಲಿ ಅರ್ಧ ಗಾಂಭೀರ್ಯದಲ್ಲಿ.

''ನಮ್ಮ ಗೋಧಿ ಗುಡ್ಡದಲ್ಲಿ ಹೀಗೆಲ್ಲ ಇಲ್ಲ ಬಿಡು'' ಅಂದೆ.

ಈಗ ಗುಂಡಣ್ಣ ಸ್ವಲ್ಪ ಸಿಡುಕಿದಂತೆ ''ಗೋಧಿ ಗುಡ್ಡವೋ ಹಾದಿ ಗುಡ್ಡವೋ ಯಾವುದಾದರೇನು? ಎಷ್ಟು ಜನ ನೋಡಿದ್ದೀರಿ ದೇವಸ್ಥಾನಗಳ ಆಯ-ವ್ಯಯದ ಲೆಕ್ಕ? ದೇವಸ್ಥಾನವೇ ಇರಬಹುದು, ಚರ್ಚ್ ಇರಬಹುದು,

## ಪಾರಂಬಿ ಮರ

ಪೆನ್ನು ತಗೊಂಡು
ಬಿಳಿಯ ಹಾಳೆಯ ಮ್ಯಾಲೆ
ಪಾರಂಬಿ ಮರವೆಂಬ ಶಬ್ದವ ಬರೆದು
ನೋಡು :
ಕ್ಷಣದಲ್ಲಿ ಬೇರಿಳಿದು
ಗಿಡ ಬೆಳೆದು ಹೆಮ್ಮರವಾಗಿ
ರೆಂಬೆ ಕೊಂಬೆಯ ಹರಹಿ
ವಿಸ್ತಾರವಿಹಸವಾಗಿ
ಋತುಮಾನಗಳಿಗೆ ತೆರೆದುಕೊಂಡಿತೋ ?
ಈಗ ತಗೊ :
ಚಿಗುರ ಮೊಗ್ಗಿನ ಹಿಗ್ಗು ಕಾಡ ತುಂಬ !
ಘಮಘಮಾ ಚೈತ್ರಗಳ ವಿಜಯೋನ್ಮಾದ
ದುಂಬಿ ದುಂದುಭಿಯ ಕಹಳೆ ಕಂಸಾಳೆ
ಮರದ ನೆರಳಿನ ಕೋಲು ಬೆಳಕಿನಲ್ಲಿ
ಬಣ್ಣ ಬಣ್ಣದ ಬಯಲಾಟದ ಕಲೆ !

ಗೂಡು ಕಟ್ಟುವ ಗೀಜಗ
ಹಿಗ್ಗ ಸೂಸಿ ಆಕಾಶದವಕಾಶ ತುಂಬುವ ಗೊರವಂಕ
ಗರಿಗೆದರಿ ಹಾರಿ ನಭದಲ್ಲಿ ಮಿಂಚಿನ ಗೆರೆ ಎಳೆವ,
ಕೂಗಿ ನೀಲಿಮದ ಮೌನ ಗೀಚುವ
ಹಕ್ಕಿಗಳ ನೆಲೆ.
ಮರದಲ್ಲಿ ಬೆಳಕಿಲ್ಲದಲ್ಲಿ ಜೋತು ಬಿದ್ದಿವೆ
ಜೋತಾಳ ಬಾವಲಿಗಳ ಬತ್ರೆ.



ಸಂಜೆಯಾಯಿತೆ ?
ಹಗಲಿರುಳು ಬೆರೆಯುವ ಬೂದಿ ಬೆಳಕಿನಲ್ಲಿ
ಬಿಳಲುಗಳ ಇಕ್ಕಟ್ಟಿನಲ್ಲಿ
ಪರಸ್ಪರ ಹಸ್ತ ಹೊಸೆವ, ಪಿಸುನುಡಿದು ಕಿವಿ ಕಚ್ಚುವ
ಬೆರಳು ಹೆಣೆವ, ತೋಳಕೋಳದಲಿ ನಲುಗುವ
ನಿರನುಭವಿ ಬಾಲ ಬಾಲೆಯರ
ಎಕ್ಕುವುಕ್ಕುವ ಕಚ್ಚಾಡಿ ಎಂಜಲುನೆಕ್ಕುವ
ಸುಖ ಪಾರಂಬಿಕೆ !

ಸೊಕ್ಕಿದ ಗೂಳಿ, ಹುಯ್ಯೆನುವ ಗಾಳಿ ಬೀಸಿ
ಧೂಳೆಬ್ಬಿಸಿ ದಿಕ್ಕುದೆಸೆ ಇಲ್ಲದೆ ನೆಗೆದಾಡಿತೆ ?
ಹಸಿರೆಲೆಗಳ ಮರ್ಮರ
ಒಣಗಿದೆಲೆಗಳ ಸರಸರ
ಹಸುಗಾಯಿ ಹಣ್ಣಾಗಿ ಮಾಗಿದನುಭವದ ಕಳೆ
ಮುಖದ ಮ್ಯಾಲೆ !
ಈ ಮರವೀಗ
ಹದ್ದಿಗೂ ನೆಲೆ, ಹಾವಿಗೂ ನೆಲೆ.
ಈಗ ಹೇಳು : ಪಾರಂಬಿಯ ಮರವ
ನಾನು ಬರೆದೆನೊ ?
ನನ್ನನ್ನ ಮರ ಬರೆಯಿತೊ ?

ಚಂದ್ರಶೇಖರ ಕಂಬಾರ
ಸಿರಿಸಂಪಿಗೆ, ನಂ. ೧೩೬, ಕೆಂಗೇರಿ ಉಪನಗರ,ಬೆಂಗಳೂರು-೬೦

ಮಸೀದಿ ಇರಬಹುದು. ಅಲ್ಲೆಲ್ಲ ನಡೆದುಕೊಳ್ಳುವ ಭಕ್ತರು ಸಾರ್ವಜನಿಕರೆ ತಾನೆ? ಅವರಿಂದ ಯಾವುದೇ ರೂಪದಲ್ಲಿ ಕಾಣಿಕೆ ಸೇರುವಾಗ ಅದರ ವಿನಿಯೋಗ ಹೇಗಾಗುತ್ತಿದೆ ಅಂತ ತಿಳಿಯೋ ಹಕ್ಕು ಎಲ್ಲರಿಗೂ ಇದೆ. ಕಾಣಿಕೆ ತನ್ನಿ ಅಂತ ನ್ಯೂಸ್ ಪೇಪರ್‌ಗಳಲ್ಲಿ ಜಾಹಿರಾತು ಹಾಕಿಸೋ ದೇವಸ್ಥಾನಗಳು ಲೆಕ್ಕ-ಪತ್ರ ಯಾಕೆ ಪ್ರಕಟಿಸೋಲ್ಲ? ಬೇಡ. ಜನಕ್ಕೆ ಕಾಣುವ ಹಾಗೆ ನೋಟೀಸು ಬೋರ್ಡಿನ ಮೇಲೆ ಅಂಟಿಸಿದ್ದನ್ನಾದರೂ ನೋಡಿದ್ದೀರಾ? ಇಷ್ಟು ಹೇಳ್ತೀರಲ್ಲ ನಿಮ್ಮ ಗೋಧಿ ಗುಡ್ಡ, ಅಲ್ಲಿ ನೋಡಿದ್ದೀರಾ?'' ಝಂಕಿಸಿ ಕೇಳಿದ ಗುಂಡಣ್ಣ.

''ನೋಡಿಲ್ಲ.''

''ನೋಡಿಲ್ಲವೇ?!'' ಈಗ ಪ್ರಶ್ನೆ ಕೇಳಿದ್ದು, ನನ್ನ ಮಡದಿ. ''ಇದೇನು ಇವತ್ತು'' ಅಂದಳು ನನ್ನ ವರ್ತನೆ ಅರ್ಥವಾಗದೆ. ಪೂಜೆಗೆ ಕುಳಿತವನ ಮನಸ್ಸಿನಲ್ಲಿ ಇಷ್ಟು ಹೊತ್ತು ನಡೆದ ವ್ಯಾಪಾರವನ್ನೆಲ್ಲ ಅವಳಿಗೆ ಹೇಳಲೆ? ಹೇಳಿದರೆ ನನ್ನ ಚಿತ್ತಚಾಂಚಲ್ಯ ಅವಳಿಗೆ ನಗು ಬರಿಸುತ್ತದೋ ನೋವುಂಟುಮಾಡುತ್ತದೋ... ನಾಲಿಗೆ ನುಡಿಯಿತು, ''ಯಾರೋ ಬಂದು, ಗೋಧಿ ಗುಡ್ಡದಲ್ಲಿ ದೇವರನ್ನು ನೋಡಿದ್ದೀರಾ ಅಂತ ಕೇಳಿದ ಹಾಗಾಯ್ತು. 'ನೋಡಿಲ್ಲ' ಅಂದುಬಿಟ್ಟೆ.'' ಹಾಗೆ ಹೇಳಿ ವಿಷಾದದಿಂದೆಂಬಂತೆ ಸಣ್ಣಗೆ ನಕ್ಕೆ.

ಮಡದಿ ನಗಲಿಲ್ಲ. ಗಂಭೀರವಾಗಿ ''ಅದೆಲ್ಲ ಅವರವರ ಪುಣ್ಯ. ನಾವು ನೋಡಿಲ್ಲ ಅಂದರೆ ಯಾರೂ ನೋಡಿಲ್ಲ ಅಂತ ಇಲ್ಲವಲ್ಲ. ಪ್ರಯತ್ನ ಪಡುತ್ತಿದ್ದರೆ ಎಂದಾದರೂ ಒಂದು ದಿನ ಕಂಡಾನು'' ಅಂದಳು.

ಗೀತೆಯ 'ಬಹೂನಾಂ ಜನ್ಮನಾಮ್ ಅನ್ತೇ ಕಶ್ಚಿತ್ ಯತತಿ ಸಿದ್ಧಯೇ ....' ಜ್ಞಾಪಕವಾಯ್ತು. ಮಡದಿಯ ಮುಖ ನೋಡಿದೆ, ಸ್ನಿಗ್ಧ ಶಾಂತತೆ.

ಪೂಜೆಯ ಕೊನೆಯಲ್ಲಿ 'ಕಾಯೇನ ವಾಚಾ ...ನಾರಾಯಣಾಯ ಇತಿ ಸಮರ್ಪಯಾಮಿ' ಎಂದು ಸಮರ್ಪಣೆ ಹೇಳಿ ಮುಗಿಸಿದಾಗ ಪಡಸಾಲೆಯ ಗಡಿಯಾರ ಹನ್ನೊಂದು ಗಂಟೆ ಮೊಳಗಿಸಿತು. ಉಪಾಹಾರ ಮುಗಿಸಿ ಕೈ ತೊಳೆದು ಒರಸಿಕೊಳ್ಳುತ್ತಿದ್ದಾಗ ಮೊಮ್ಮಗಳ ರೂಪದ ಸಂಭ್ರಮೋತ್ಸಾಹಗಳು ಕುಣಿಯುತ್ತಾ ಬಾಗಿಲು ದಾಟಿ ಒಳಗೆ ಬಂತು. ''ಅರೆ!'' ಎಂದೆ. 'ಇದೇನು ಇವತ್ತು ಇಷ್ಟು ಬೇಗ' ಎಂಬ ನನ್ನ ಮುಖದ ಆಶ್ಚರ್ಯದ ಪ್ರಶ್ನೆಗೆ ''ಅಯ್ಯೋ ತಾತಾ! ಇವತ್ತು ಶನಿವಾರ ಅಲ್ವ? ಅರ್ಧ ಸ್ಕೂಲು, ಗೊತ್ತಿಲ್ವ?'' ಅಂದಳು. ಹಿಂದೆಯೇ ''ಜ್ಞಾಪಕ ಇದೆ ತಾನೆ?'' ಅಂತ ಪ್ರಶ್ನೆ ಬೇರೆ ಎಸೆದಳು ಅಜ್ಜನ ಮೇಲೆ ಅಧಿಕಾರಿಕವಾಗಿ.

''ಜ್ಞಾಪಕ? ಯಾವುದಮ್ಮ?'' ಕಣ್ಣು ಕಿರಿದು ಮಾಡಿ ಪ್ರಶ್ನಿಸಿದೆ.

''ಅದೇ...'' ಕಣ್ಣರಳಿಸುತ್ತಾ, ''ಗೋಧಿ ಗುಡ್ಡದ ಕಥೆ'' ಅಂದಳು.

''ಓ! ಅದಾ! ಮೊದಲು ಸ್ಕೂಲಿನ ಯೂನಿಫಾರ್ಮ್ ಬದಲಾಯಿಸಿ ಕೈಕಾಲು ತೊಳಿ. ಅಜ್ಜಿ ಬಡಿಸ್ತಾಳೆ, ಊಟ ಮಾಡು. ಆಮೇಲೆ ಕಥೆ.''

ಇನ್ನೇನು ಈಗಲೋ ಆಗಲೋ ಹಾಜರಾಗುತ್ತಾಳೆ ಮೊಮ್ಮಗಳು. ಅವಳಿಗೆಂದು ಕಲ್ಪಿಸಿ ಗೋಧಿ ಗುಡ್ಡದ ಕಥೆ ಏನು ಹೇಳುವುದು? ಚಿಕ್ಕಂದಿನ ಮಕ್ಕಳ ಕಥೆಗಳು ಮಸುಕು ಮಸುಕಿನ ಹಂದರಗಳಾಗಿ ಮನಸ್ಸಿನಲ್ಲಿ ಮೂಡಿದುವು. ಉಹ್ನು, ಅವ್ಯಾವೂ ಗೋಧಿ ಗುಡ್ಡ– ಕಲ್ಲು ಗುಡ್ಡಗಳಿಗೆ ಹೊಂದುವುದಿಲ್ಲ. ಈಗ ಒಂದು ನವಸೃಷ್ಟಿಯೇ ಆಗಬೇಕು. ಆಗುತ್ತಿಲ್ಲವೇ... ಅಯ್ಯೋ ದೇವರೆ! ಈಗ ಇನ್ನೊಂದೆರಡು ನಿಮಿಷಗಳಲ್ಲಿ ಮೊಮ್ಮಗಳು ಬರುತ್ತಾಳೆ. ಏನು ಮಾಡಲಿ? ರಾಕೆಟ್ ಉಡಾಯಿಸುವ ಇಳಿಕೆ ಗಣನೆ ಪ್ರಾರಂಭಿಸಿದಂತಾಯ್ತು. ಗೋಧಿ ಗುಡ್ಡ, ಗೋಧಿ ಗುಡ್ಡ... ಏಳು ಆರು... ಐದು ನಾಲ್ಕು ಮೂರು... ಗೋಧಿ ಗುಡ್ಡ... ಗೋಧಿ... ಎರಡು ಒಂದು... ಗೋ- ಹ್ಹಾ! ಹೊಳೆಯಿತು! ಬದುಕಿದೆ.

''ತಾತ! ಬಂದೆ.'' ಕೈ ಒರೆಸಿಕೊಳ್ಳುತ್ತಾ ಬಂದ ಮೊಮ್ಮಗಳು ನನ್ನ ಈಸಿ ಛೇರಿನ ಪಕ್ಕದಲ್ಲೆ ತನ್ನ ಸಣ್ಣ ಕುರ್ಚಿ ಎಳೆದುಕೊಂಡು ಕುಳಿತು, ''ಹ್ಞೂ!'' ಅಂದಳು ಪ್ರಾರಂಭಿಸು ಎನ್ನುವಂತೆ.

''ಒಂದಾನೊಂದು ಕಾಲದಲ್ಲಿ ಒಂದು ಹಳ್ಳಿ ಇತ್ತು....''

ಮಕ್ಕಳ ಕಥೆಗಳು ಒಬ್ಬ ರಾಜಕುಮಾರ ಅಂತಲೋ ರಾಜಕುಮಾರಿ ಅಂತಲೋ ಪ್ರಾರಂಭವಾಗಬೇಕಲ್ಲವೆ? ಇದೇನೋ ಹೊಸ ತರಹ ಇದೆಯಲ್ಲ ಅನ್ನುವಂತೆ ಪ್ರಶ್ನಿಸಿದಳು ಮೊಮ್ಮಗಳು, ''ಹಳ್ಳೀನಾ?''

''ಹ್ಞೂ. ಹಳ್ಳಿ'' ಅಂದೆ. ''ಆ ಹಳ್ಳಿಯಲ್ಲಿ ಒಬ್ಬ ಹಣ್ಣು ಹಣ್ಣು ಮುದುಕಿ. ಪಾಪ ಯಾರೂ ದಿಕ್ಕಿರಲಿಲ್ಲ. ದಿನಾ ಭಿಕ್ಷೆ ಬೇಡಿ ಹೊಟ್ಟೆ ಹೊರೆಯುತ್ತಿದ್ದಳು. ಹೀಗೇ ಇದ್ದಾಗ ಆ ವರ್ಷವೂ ಸುಗ್ಗಿ ಕಾಲ ಬಂತು. ಊರ ಜನ ಕಣ ಮಾಡಿ....''

''ಕಣ ಅಂದರೆ?'' ಕನ್ನಡ ಕಲಿಯುತ್ತಿರುವ ಪಟ್ಟಣದ ಹುಡುಗಿ. ಪ್ರಶ್ನೆ ಸಹಜವೇ.

''ಕಣ ಅಂದರೆ ಬೆಳೆ ಬೆಳೀತಾರಲ್ಲ, ಅದರ ತೆನೆಗಳಲ್ಲಿ ಕಾಳು ಇರುತ್ತಲ್ಲ, ಅದನ್ನೆಲ್ಲ ಬಡಿದು....''

''ಹ್ಞೂ, ಗೊತ್ತಾಯ್ತು. ಟಿವೀಲಿ ನೋಡಿದೀನಿ. ಮುಂದೆ, ತಾತ.''

''ಸರಿ. ಕಣ ಮಾಡಿ ರಾಶಿ ಹಾಕಿ ತಮ್ಮ ಮನೆಗಳಿಗೆ ಸಾಗಿಸೋಕೆ ಹೋದರು. ಕೈಯ್ಯಲ್ಲಾಗದ ನಮ್ಮ ಮುದುಕಿ ಸಾಯಂಕಾಲವಾಗಲಿ, ಬಿಸಿಲು ಇಳಿದಿರುತ್ತೆ, ಆಗ ಹೋದರೆ ರೈತರು ಮೊರದ ತುಂಬ ಭಿಕ್ಷೆ ಹಾಕ್ತಾರೆ ಅಂತ ಯೋಚಿಸಿಕೊಂಡು ಹಾಗೇ ಮಲಗಿಕೊಂಡಳು....''

''ಹ್ಞೂ'' - ಮುಂದುವರಿಸು ಎಂಬ ಮೀಟು.

''ಎಚ್ಚರವಾದಾಗ ನೋಡ್ತಾಳೆ, ಆಗಲೇ ಸೂರ್ಯ ಪಶ್ಚಿಮ ದಿಕ್ಕಿನಲ್ಲಿ ಇಳೀತಾ ಇದಾನೆ. ಹೊತ್ತಾಗ್ಗಿ ಹೋಯ್ತಲ್ಲ ಅಂತ ಮುದುಕಿಗೆ ಗಾಬರಿ. ಕಷ್ಟಪಟ್ಟುಕೊಂಡು ಕಾಡಿನ ಮಧ್ಯೆ ಬೇಗ ಬೇಗ ನಡೆಯುತ್ತಾ ಇದ್ದಾಗ ಅವಳ ದುರದೃಷ್ಟಕ್ಕೆ....''

''ಏನಾಯ್ತು, ತಾತ?'' ಆತಂಕದ ಪ್ರಶ್ನೆ.

''ಒಂದು ಕಲ್ಲು ಎಡವಿ ಬಿದ್ದುಬಿಟ್ಟಳು...''

''ಅಯ್ಯೋ ಪಾಪ! ಗಾಯ ಆಯ್ತಾ?''

''ಅವಳ ಪುಣ್ಯ. ಆಗಿರಲಿಲ್ಲ. ಅಲ್ಲೆ ಕುಳಿತು ಸುಧಾರಿಸಿಕೊಂಡು ಕಣ ಇದ್ದ ಕಡೆ ಬಂದು ನೋಡ್ತಾಳೆ, ಎಲ್ಲರೂ ಹೊರಟೇ ಹೋಗಿದ್ದಾರೆ. ಕಣವೆಲ್ಲ ಖಾಲಿ ಖಾಲಿ. ಅಯ್ಯೋ ಅಯ್ಯೋ ಹೀಗಾಯ್ತಲ್ಲ ಅಂತ ಅಜ್ಜಿ ಗೊಳೋ ಅಂತ ಅತ್ತಳು. ಸ್ವಲ್ಪ ಹೊತ್ತು ಕಳೆಯಿತು. ಪೂರ್ವ ದಿಕ್ಕಿನಲ್ಲಿ ತುಂಬಿದ ಚಂದ್ರ, ....''

''ಸೂರ್ಯ ಅಲ್ಲವಾ ತಾತ, ಪೂರ್ವದಲ್ಲಿ ಹುಟ್ಟೋದು?''

''ಅವತ್ತು ಹುಣ್ಣಿಮೆ. ಹುಣ್ಣಿಮೆ ದಿನ ಗುಂಡನೆ ಚಂದ್ರ ಪೂರ್ವದಲ್ಲೇ ಅಲ್ಲವಾ ಹುಟ್ಟೋದು?''

''ಹ್ಞೂ, ಹ್ಞೂ.'' ಮೊಮ್ಮಗಳು ತ್ವರೆ ಮಾಡಿದಳು. ''ಹೇಳು. ತುಂಬಿದ ಚಂದ್ರ, ಬಂದ....''

''ಚಂದ್ರ ಮೇಲಕ್ಕೆ ಬರ್ತಾ ಬರ್ತಾ ಬೆಳದಿಂಗಳು ಚೆನ್ನಾಗಿ ಚೆಲ್ಲಿದಾಗ ಕಣದಲ್ಲಿ ಅಲ್ಲಿ ಇಲ್ಲಿ ಸ್ವಲ್ಪ ಸ್ವಲ್ಪ ಗೋಧಿ ಕಾಳು ಮುದುಕಿಗೆ ಕಾಣಿಸಿತು. ಪಾಪ! ಮುದುಕಿ ಆಸೆಯಿಂದ ಉಸ್ಸಪ್ಪಾ ಅಂತ ಎದ್ದು ಆ ಕಾಳೆಲ್ಲ ಹೆಕ್ಕಿ ಒಂದು ಬೊಗಸೆಯಷ್ಟು ಸಣ್ಣ ಗುಡ್ಡೆ ಮಾಡಿದಳು. ಅದನ್ನೇ ನೋಡ್ತಾ, ಎಷ್ಟು ಹೊತ್ತು ಅಂತ ನೋಡ್ತಾಳೆ? ಆಕಾಶದ ಕಡೆ ತಲೆಯೆತ್ತಿ ಮೇಲೆ ನೀಲಿ ಆಕಾಶದಲ್ಲಿ ತೇಲುತ್ತಾ ಇದ್ದ ಚಂದ್ರನನ್ನೇ ದೇವರು ಅಂತ ಭಾವಿಸಿ, ''ಅಯ್ಯಾ ದೇವರೆ, ಈ ಗುಡ್ಡೆ ಮೊರದಷ್ಟಾದರೂ ಆಗಬಾರದೆ'' ಅಂತ ಮೊರೆಯಿಟ್ಟಳು. ಆಗ ಒಂದು ಗಂಭೀರ ಧ್ವನಿ 'ಅಜ್ಜೀ' ಅಂದಿತು.''

''ದೇವರು ಪ್ರತ್ಯಕ್ಷವಾದನಾ ತಾತಾ? ಧ್ರುವನಿಗೆ ಆದನಲ್ಲ ಹಾಗೆ?'' ಮುಗ್ಧವಾಗಿ ಕೇಳಿದಳು ಮೊಮ್ಮಗಳು.

ನಾನು ಕಲ್ಪಿಸಿಕೊಂಡಿದ್ದ ಕಥೆಯಲ್ಲಿ ದೇವರು ಪ್ರತ್ಯಕ್ಷನಾಗಿರಲಿಲ್ಲ. ಮಗು ಕೇಳಿದಳೆಂದು ಈಗ ಪ್ರತ್ಯಕ್ಷ ಮಾಡಿಸಿಬಿಟ್ಟರೆ ಕಥೆಯ ತಿರುವನ್ನು ನಿಭಾಯಿಸುವುದು ಹೇಗೆ? ''ಇಲ್ಲಮ್ಮ'' ಅಂದೆ. ''ಅವನ ಮಾತು ಮಾತ್ರ ಕೇಳಿಸಿತು. ಮುದುಕಿಗೆ ಆಶ್ಚರ್ಯ. ಯಾರೋ ಕರೆದರಲ್ಲಾ ಅಂತ ಆ ಕಡೆ ಈ ಕಡೆ ಮೇಲೆ ಕೆಳಗೆ ಮುಖ ತಿರುಗಿಸಿ ನೋಡಿ, ಅಯ್ಯೋ ನನ್ನ ಭ್ರಮೆ ಅಂತ ಸುಮ್ಮನೆ ಅಲ್ಲೇ ಕುಳಿತುಕೊಂಡಳು...''

''ಆಮೇಲೆ?''

''ಆಮೇಲೆ ಪುನಃ ಅದೇ ದನಿ 'ಅಜ್ಜೀ' ಅಂದಿತು.''

''ಅದು ದೇವರ ದನೀನೇ ತಾತ.''

''ಹೌದು ಅದು ದೇವರ ದನಿ. ಮುದುಕಿ ಕಿವಿ ಚುರುಕು ಮಾಡಿಕೊಂಡು ತಲೆಯೆತ್ತಿ ಕೇಳಿಸಿಕೊಂಡಳು. 'ಅಜ್ಜೀ, ಈ ಹಿಡಿ ಗೋಧಿ ಗುಡ್ಡೆಯನ್ನು ಮನೆಗೆ ತೆಗೆದುಕೊಂಡು ಹೋಗು. ನಿನಗೆ ಒಳ್ಳೆಯದಾಗುತ್ತೆ. ಒಂದು ವಾರ ಬಿಟ್ಟು ಇಲ್ಲಿಗೆ ಬಾ. ಯಾರಿಗೂ ಹೇಳಬೇಡ', ಅಂತ ಕೇಳಿಸಿತು. ಮುದುಕಿಗೆ ಅದೇನೋ ನಂಬಿಕೆ ಮೂಡಿ ಆ ಹಿಡಿ ಗೋಧಿಯನ್ನು ಸೆರಗಿನಲ್ಲಿ ಕಟ್ಟಿಕೊಂಡು ತನ್ನ ಗುಡಿಸಲಿಗೆ ಹೋದಳು. ಅದನ್ನು ಒಂದು ಮೊರದಲ್ಲಿ ಸುರಿದು, ಅಯ್ಯೋ ದೇವರೆ ಈ ಹಿಡಿ ಗೋಧಿ ಏನು ಮಾಡಲಿ? ಇದು ಮೊರದಷ್ಟಾದರೂ ಆಗಬಾರದೆ ಅಂತ ಅತ್ತಳು. ಅತ್ತೂ ಅತ್ತೂ ಹಾಗೇ ಮಂಪರು ನಿದ್ದೆ ಬಂತು. ಎಚ್ಚರವಾದಾಗ ಕಣ್ಣು ಬಿಟ್ಟು ನೋಡ್ತಾಳೆ....''

''ಮೊರದಷ್ಟಾಗಿತ್ತಾ ತಾತ?!''

''ಹ್ಞೂಮತ್ತೆ? ದೇವರು ಹೇಳಿದ್ದಲ್ಲವಾ? ಆಗಿತ್ತು...''

''ನಿಜವಾಗಿಯೂ ಆಗಿತ್ತಾ ತಾತ?'' ಅರಳಿದ ಕಣ್ಣುಗಳ ದೃಷ್ಟಿಯನ್ನು ನನ್ನ ಕಣ್ಣುಗಳಲ್ಲಿ ನೆಟ್ಟು ಕೇಳಿದಳು. ''ಆಗುತ್ತಾ? ಸುಮ್ಮನೆ ಕಥೆ'' ಅಂದು ಮಗುವಿನ ಸುಂದರ ಕಲ್ಪನೆಯನ್ನು ಹೊಸಗಿ ಹಾಕಿದರೆ ಲಾಭವಾದರೂ ಏನು? ಮನಸ್ಸು ತಡೆಯಿತು.

ಆಲೋಚನೆಯಲ್ಲಿ ಮುಳುಗಿದಂತೆ ಕಂಡ ನನ್ನ ಗಲ್ಲ ತಟ್ಟಿ ಮತ್ತೆ ಕೇಳಿದಳು ಮೊಮ್ಮಗಳು, ''ನಿಜವಾಗಿಯೂ ಆಗಿತ್ತಾ ತಾತ?''

''ಹೌದಮ್ಮ, ಆಗಿತ್ತು!'' ದನಿಯಲ್ಲಿ ನಾನೂ ವಿಸ್ಮಯ ತುಂಬಿಕೊಂಡೆ. ಮಗುವಿಗೆ ಉತ್ಸಾಹ ಬಂತು. ''ಆಮೇಲೆ?'' ಅಂದಳು.

''ಮೊರದ ತುಂಬಾ ಗೋಧಿ! ಅಜ್ಜಿಗೆ ಸಂತೋಷವೋ ಸಂತೋಷ. ಆಗ ಅವಳಿಗೆ ದೇವರು ಯಾರಿಗೂ ಹೇಳಬೇಡ ಅಂದಿದ್ದು ಜ್ಞಾಪಕವಾಯ್ತು. ಎಷ್ಟು ಬೇಕೋ ಅಷ್ಟು ತೆಗೆದಿಟ್ಟುಕೊಂಡು ಮಿಕ್ಕಿದ್ದನ್ನು ಬಚ್ಚಿಟ್ಟಳು. ಅದೂ ಖರ್ಚಾದ ಮೇಲೆ....''

''ತಿರುಗಾ ದೇವರು ಹೇಳಿದ ಜಾಗಕ್ಕೆ ಹೋದಳು ಅಲ್ವಾ?''

''ಅವತ್ತೂ ಅವಳಿಗೆ ಒಂದು ಹಿಡಿ ಗೋಧಿ ಸಿಕ್ಕಿತು. ಮುಂಚಿನ ಹಾಗೇ. ಹಿಡಿ ಗೋಧಿ ಮೊರದಷ್ಟಾಯಿತು. ಹೀಗೇ ನಡೀತಾ ಇದ್ದಾಗ ಒಂದು ದಿನ ಮುದುಕಿ, ಇದೇನು ದೇವರ ವರವೋ, ವಾರ ವಾರವೂ ಅಷ್ಟು ದೂರ ಹೋಗಬೇಕಲ್ಲ, ಒಟ್ಟಿಗೇ ಎರಡು ಮೊರದಷ್ಟಾಗಬಾರದೆ ಅಂದುಕೊಂಡಳು. ಅವಳು ಅಂದುಕೊಂಡದ್ದೇ ತಡ, ಅಗೋ! ಅಲ್ಲಿ ಎರಡು ಮೊರದಷ್ಟು ಗೋಧಿ! ಮುದುಕಿಗೆ ಒಂದು ಆಲೋಚನೆ ಬಂತು, ಇದರಲ್ಲಿ ಒಂದು ಮೊರ ಮಾರಿದರೆ ದುಡ್ಡು ಸಿಕ್ಕುತ್ತೆ, ತನಗೆ ಬೇಕಾದುದನ್ನು ಕೊಂಡುಕೊಳ್ಳಬಹುದು ಅಂತ. ಮೆಲ್ಲಗೆ ನಡೆಯುತ್ತಾ ಪಕ್ಕದ ದೊಡ್ಡ ಊರಿಗೆ ಹೋಗಿ ಮಾರಿ, ತನಗೆ ಇಷ್ಟವಾದ ತಿಂಡಿ ತಿಂದು ಬಂದಳು. ವಾರ ವಾರವೂ ಮುದುಕಿ ದೇವರಿಂದ ಹಿಡಿ ಗೋಧಿ ತರುವುದು ನಾಲ್ಕು ಮೊರವಾಗಲಿ ಐದು ಮೊರವಾಗಲಿ ಅಂತ ಕೇಳೋದು, ಅದನ್ನು ಮಾರುವುದು ದುಡ್ಡು ಮಾಡುವುದು. ಹೀಗೆ ಮುದುಕಿ ಹತ್ತಿರ ನಿಧಾನವಾಗಿ ದುಡ್ಡಿನ ಗಂಟು ಬೆಳೆಯುತ್ತಾ ಹೋಯ್ತು....''

''ದುಡ್ಡಿನ ಗಂಟು! ಬಡವಿ ಮುದುಕಿ ಸಾಹುಕಾರ ಮುದುಕಿ ಆಗಿಬಿಟ್ಟಳು ಅಲ್ಲವಾ?''

''ಹೌದಮ್ಮ ಹೌದು, ಮುದುಕಿಗೆ ದುಡ್ಡಿನ ಆಸೆ ಹೆಚ್ಚುತ್ತಾ ಹೋಯ್ತು. ಒಂದು ಹುಣ್ಣಿಮೆ ದಿನ ಗೋಧಿ ತರೋಕೆ ಅಂತ ಕಾಡಿನ ಮಧ್ಯೆ ಹೋಗಿ, ಅವತ್ತೂ ಒಂದು ಹಿಡಿ ಗೋಧಿ ಗುಡ್ಡೆ ಆದಾಗ ಮುದುಕಿಗೆ ಇಲ್ಲೇ ಯಾಕೆ ದೇವರ ಶಕ್ತಿ ಪರೀಕ್ಷೆ ಮಾಡಬಾರದು ಅಂತ ಕೆಟ್ಟ ಬುದ್ಧಿ ಹುಟ್ಟಿತು. 'ಏ ದೇವರೆ, ಈ ಹಿಡಿ ಗೋಧಿ ದೊಡ್ಡ ರಾಸಿ ಆಗಲಿ' ಅಂದಳು. ಏನಾಶ್ಚರ್ಯ ! ಹಾಗೇ ಆಯ್ತು. ಇನ್ನೂ ಆಗಲಿ ಅಂದಳು. ಅದೂ ಆಯ್ತು. ಇನ್ನೂ ಬೆಳೆಯಲಿ...''

ಈಗ ಮೊಮ್ಮಗಳೇ ಕಥೆ ಮುಂದುವರಿಸಿದಳು -

''ಇನ್ನೂ ಬೆಳೆಯಲಿ, ಇನ್ನೂ ಬೆಳೆಯಲಿ, ನಮ್ಮ ಮನೆ ಮುಂದೆ ಇದೆಯಲ್ಲ ತೆಂಗಿನ ಮರ ಅಷ್ಟೆತ್ತರ ಬೆಳೆಯಲಿ, ಗೋಧಿ ಗುಡ್ಡ ಆಗಲಿ ಅಂದಳು.'' ಎನ್ನುತ್ತಾ ಕೈ ಮೇಲೆತ್ತಿದಳು ಮೊಮ್ಮಗಳು.

''ಹ್ದೂ. ಹಾಗೇ ಬೆಳೆಯಿತು. ಆಗ ಏನಾಯ್ತು ಅಂದರೆ....''

''ಹ್ದೂ!''

''ಇಷ್ಟೆತ್ತರ ಹಾಗೆ ಒಬ್ಬ ಹಣ್ಣು ಹಣ್ಣು ಮುದುಕ ಕಷ್ಟಪಟ್ಟು ಕೋಲೂರಿಕೊಂಡು ನಿಧಾನವಾಗಿ ಅಲ್ಲಿಗೆ ಬಂದ. 'ತಾಯೀ' ಅಂತ ಕೂಗಿದ. ಗೋಧಿ ಗುಡ್ಡವನ್ನು ಮಾರಿದರೆ ಎಷ್ಟೊಂದು ದುಡ್ಡು ಸಿಕ್ಕುತ್ತೆ, ನಾನೇ ಸಾಹುಕಾತಿ, ನಾನೇ ಸಾಹುಕಾತಿ ಅಂತ ಕನಸು ಕಾಣುತ್ತಾ ಲೋಕವನ್ನೇ ಮರೆತಿದ್ದ ಮುದುಕಿಗೆ ಮುದುಕನನ್ನು ನೋಡಿ ರೇಗಿಹೋಯ್ತು. 'ಯಾಕೋ ಬಂದೆ ಇಲ್ಲಿ?' ಅಂತ ಗದರಿದಳು. ಮುದುಕ ಕೈಮುಗಿದುಕೊಂಡು 'ತಾಯಿ, ತುಂಬ ಹಸಿವಾಗ್ತಾ ಇದೆ. ಒಂದಿಷ್ಟು ಗೋಧಿ ಕೊಡಿ, ತಾಯಿ' ಅಂತ ಬೇಡಿಕೊಂಡ. ಆಗ ಮುದುಕಿ, 'ಏ ಹೋಗೋ ಇಲ್ಲಿಂದ. ಗೋಧಿನಂತೆ. ಏನು ಕಷ್ಟಪಟ್ಟಿದ್ದೀಯಾಂತ ಕೊಡಬೇಕೋ ನಿನಗೆ? ಹೋಗೋ ಹೋಗೋ' ಅಂತ ಹೊಡೆಯೋದಕ್ಕೆ ಹೋದಳು....''

''ಅಯ್ಯೋ ಪಾಪ! ಹೊಡೆದುಬಿಟ್ಟಳಾ, ತಾತ?''

''ಇಲ್ಲಮ್ಮ. ಮುದುಕ ಪೆಚ್ಚು ಮೋರೆ ಹಾಕ್ಕೊಂಡು ಗೋಧಿ ಗುಡ್ಡಕ್ಕೆ ಬೆನ್ನು ತಿರುಗಿಸಿ ನಿಧಾನವಾಗಿ ನಡೆಯುತ್ತಾ ದೂರ ದೂರ ಹೋದ. ಮುದುಕಿ ಅವನು ದೂರದಲ್ಲಿ ಚುಕ್ಕೆಯಾಗಿ, ಇನ್ನಷ್ಟು ಚುಕ್ಕೆಯಾಗಿ ಕರಗಿ ಕಣ್ಮರೆಯಾದ ಮೇಲೆ ಸದ್ಯ ತೊಲಗಿತು ಪೀಡೆ ಅಂತ ಹಿಂದಿರುಗಿ ನೋಡ್ತಾಳೆ...''

''ಗೊತ್ತಾಯ್ತು ಗೊತ್ತಾಯ್ತು. ಗೋಧಿ ಗುಡ್ಡ ಕಲ್ಲು ಗುಡ್ಡ ಆಗೋಗಿತ್ತು ಅಲ್ವಾ?!'' ಕಥೆಯ ಹೆಜ್ಜೆಯನ್ನು ತಾನೇ ದೌಡಾಯಿಸಿದಳು ಮೊಮ್ಮಗಳು.

''ಹ್ದೂ. ಕಲ್ಲು ಗುಡ್ಡ! ಗರಬಡಿದವಳ ಹಾಗೆ ನಿಂತುಬಿಟ್ಟಳು ಮುದುಕಿ. ಕಣ್ಣುಗಳೇ ಮೋಸ ಅಂತ ಕಣ್ಣುಜ್ಜಿಕೊಂಡಳು. ಹೋಗಿ ಗುಡ್ಡವನ್ನು ಕೈಯ್ಯಿಂದ ತಟ್ಟಿದಳು. 'ಏ ಗೋಧಿ ಗುಡ್ಡ ಏ ಗುಡ್ಡ' ಅಂತ ಕೂಗಿದಳು. ಎಲ್ಲಿಂದಲೋ ಅದೇ ಮಾರ್ದನಿ ಕೇಳಿಸಿತು. 'ಯಾರೋ ಅದು ಅಣಕಿಸೋದು?' ಅಂತ ಅಬ್ಬರಿಸಿದಳು. 'ನನ್ನೆ ಅಣಕಿಸುತ್ತೀರಾ? ನೋಡ್ರೋ ಹುಚ್ಚಪ್ಪಗಳಿರಾ. ಇದು ಗೋಧಿ ಗುಡ್ಡ ಕಣ್ರೋ ಗೋಧಿ ಗುಡ್ಡ' ಅಂತ ಕೂಗುತ್ತಾ ಗುಡ್ಡದ ಸುತ್ತಾ ಸುತ್ತಿ ಸುತ್ತೀ ಬೆಳಗ್ಗೆ ಆಗೋದರಲ್ಲಿ ಹುಚ್ಚಿಯಾಗಿ ಹೋದಳು. ಬೆಳಗ್ಗೆ ದನ ಕುರಿ ಮೇಕೆ ಮೇಯಿಸೋ ಹುಡುಗರು, ಸೌದೆ ಸೊಪ್ಪಿಗೆ ದೊಡ್ಡವರು ಬಂದು ನೋಡ್ತಾರೆ - ಮುದುಕಿ ಕೂಗ್ತಾ ಇದ್ದುದು ಮೊದಲು ತಮಾಷೆಯಾಗಿತ್ತು. ಆಮೇಲೆ ಮುದುಕಿಗೆ ಹುಚ್ಚು ಹಿಡಿದಿದೆ ಅಂತ ಖಾತ್ರಿಯಾಯ್ತು. ಅವರೆಲ್ಲ ನಕ್ಕು ಸುಮ್ಮನಾದರು.''

ಕಥೆ ಮುಗಿಯಿತು, ಎಂಥ ಸೊಗಸಾದ ಕಥೆ ಹೆಣೆದೆ ಎಂದು ಹೆಮ್ಮೆ ಪಡುತ್ತಿದ್ದಾಗ ಏನನ್ನೊ ಅನುಮಾನಿಸಿದವಳಂತೆ ಮೊಮ್ಮಗಳು ಮೆಲ್ಲನೆ ದನಿಯೆತ್ತಿ ''ತಾತ...'' ಅಂದಳು. ನಾನು ಇನ್ನೇನೂ ಉಳಿದಿರ ಲಾರದು ನಿನ್ನ ಕುತೂಹಲ ಅನ್ನೋ ಧಾಟಿಯಲ್ಲಿ ''ಹೇಳಿದೆನಲ್ಲಮ್ಮ ಗೋಧಿ ಗುಡ್ಡ ಹುಟ್ಟಿಕೊಂಡ ಕಥೆ'' ಅಂದೆ. ಮೊಮ್ಮಗಳು ''ಅದಲ್ಲ ತಾತ. ಈಗ, ಇಷ್ಟು ದಿನ ಈ ಗುಡ್ಡ ಇರಲಿಲ್ಲ, ಇವತ್ತು ಎಲ್ಲಿಂದ ಬಂತು ಅಂತ ಜನಕ್ಕೆ ಡೌಟ್ ಬರಲಿಲ್ವ?'' ಅಂದಳು.

ಎಲಾ! ಹೌದಲ್ಲವೇ? ಅಷ್ಟು ಎತ್ತರಕ್ಕೆ ಪೇರಿಸಿದ್ದ ಕಥೆಯ ಶಿಖರವೇ ಬಿದ್ದುಹೋಯ್ತಲ್ಲ. ಮೊಮ್ಮಗಳ ಪ್ರಶ್ನೆಯ ಪ್ರೇರಕಶಕ್ತಿ ತರ್ಕವೋ, ಕುತೂಹಲವೋ ಎಂದು ಅವಳ ಮುಖವನ್ನೇ ದಿಟ್ಟಿಸಿದೆ. ಏನು ಉತ್ತರ ಎಂದು ಗಲಿಬಿಲಿಗೊಂಡೆ. ಮೊಮ್ಮಗಳು ನಿಧಾನವಾಗಿ ತಾನೇ ಮಾತನಾಡಿದಳು -

''ಅಯ್ಯೋ ತಾತ! ನಾನೇ ಹೇಳ್ತೀನಿ. ಜನರಿಗೆ ಡೌಟ್ ಬರಲಿಲ್ಲ.''

''?''

''ಹ್ದೂ, ತಾತ. ಯಾಕೇಂದ್ರೆ, ಒಂದು ಕಲ್ಲು ಗುಡ್ಡ ಮೊದಲಿಂದಲೂ ಅಲ್ಲೇ ಇತ್ತು. ದೇವರ ಮಾಯೆಯಿಂದ ಆ ಕೆಟ್ಟ ಮುದುಕಿಗೆ ಗೋಧಿ ಗುಡ್ಡವಾಗಿ ಕಾಣಿಸ್ತು. ತಿರುಗಾ ಮಾಯೆ ಹೋಗಿಬಿಡ್ತು. ಅಷ್ಟೆ! ಗೋಧಿ ಗುಡ್ಡ ಅಂತ ಕೂಗಿಕೊಂಡು ಹುಚ್ಚಿ ಮುದುಕಿ ಸುತ್ತುತ್ತಾ ಇದ್ದಳಲ್ಲ ಗುಡ್ಡಾನ, ಅದಕ್ಕೇ ಜನ ಗೋಧಿ ಗುಡ್ಡ ಅಂತ ಕರೆದರು.''

ಹೌದಲ್ಲವೆ? 'ಮಮ ಮಾಯಾ ದುರತ್ಯಯಾ.'

ಪುನಃ ''ತಾತ...'' ಅಂದಳು ಮೊಮ್ಮಗಳು. ಈ ಸಾರಿ ಯಾವ ಪ್ರಶ್ನೆಯೋ ಎಂದು ಅನುಮಾನಿಸುತ್ತಿದ್ದಾಗ, ''ಆ ಹುಚ್ಚಿ ಮುದುಕಿ ಏನಾದಳು, ತಾತ?'' - ಸರಳವಾದ ಮುಗ್ಧ ಪ್ರಶ್ನೆ. ಮುದುಕಿ ಕೆಟ್ಟವಳು. ಕೆಟ್ಟವರೆಲ್ಲ ನರಕಕ್ಕೆ ಹೋಗುತ್ತಾರೆ, ಅಥವಾ ಬ್ರಹ್ಮರಾಕ್ಷಸರಾಗುತ್ತಾರೆ, ಇಲ್ಲವೆ ಪಿಶಾಚವಾಗುತ್ತಾರೆ. ಹೀಗೆ ತಾನೆ ಪುರಾಣ ಪುಣ್ಯಕಥೆಗಳು ಎಚ್ಚರಿಸುವುದು.

''ಏನಾದಳಾ? ಸತ್ತು ಪಿಶಾಚವಾಗಿ ಗೋಧಿ ಗುಡ್ಡದಂಥ ಗುಡ್ಡಗಳ ಸುತ್ತ ಅಲೆಯುತ್ತಾ ಇರ್ತಾಳೆ. ದೇವರ ಗುಡಿಯನ್ನು ಬರೀ ಚಿನ್ನದ ಬರೀ ಬಣ್ಣದ ಗುಡಿಯಾಗಿ ಮಾಡೋ ಧರ್ಮದರ್ಶಿಗಳು ಇರ್ತಾರಲ್ಲ ಅಂಥವರು ಗೊತ್ತಿದ್ದೂ ಗೊತ್ತಿದ್ದೂ ಕೈಗೆ ಬಣ್ಣ ಚಿನ್ನ ಮೆತ್ತಿಕ್ಕೊಂಡರೆ...''

ಉದ್ದಕ್ಕೂ ಕೇಳಿಸಿಕೊಳ್ಳುತ್ತಿದ್ದ ನನ್ನ ಮಡದಿಗೆ ಕಥೆ ಜಾಡು ತಪ್ಪುತ್ತಿದೆ ಎನ್ನುವ ಅನುಮಾನ ಬಂತೋ? ಸರ್ವಂ ಶಿವಮಯಂ ಅನ್ನುವ ದೃಷ್ಟಿ ಅವಳದು. ನಡುವೆ ಬಾಯಿಹಾಕಿ ಮೆದುವಾದರೂ ಖಚಿತವಾದ ದನಿಯಲ್ಲಿ ''ಸಾಕು, ಅಲ್ಲಿಗೇ ಬಿಡಿ ಅದನ್ನು'' ಅಂದವಳು, ''ಬಾ ಪುಟ್ಟಿ, ನಾನು ಹೇಳ್ತಿನಿ'' ಎಂದು ಮೊಮ್ಮಗಳನ್ನು ಹತ್ತಿರ ಕರೆದು ತೊಡೆಯ ಮೇಲೆ ಕೂರಿಸಿಕೊಂಡು, ''ದೇವರು ತುಂಬಾ ಒಳ್ಳೆಯವನು. ಯಾರಿಗೂ ಕೆಟ್ಟದ್ದು ಮಾಡೊಲ್ಲ. ಅಯ್ಯೋ ಪಾಪ ಅಂತ ಆ ಮುದುಕಿಯ ಪಿಶಾಚಿ ಜನ್ಮ ಹೋಗಲಾಡಿಸಿ ಆಕಾಶದಲ್ಲಿ ಒಂದು ನಕ್ಷತ್ರ ಮಾಡಿದ. ಬಾ, ದೇವರ ನಾಮ ಹೇಳಿಕೊಡ್ತೀನಿ'' ಎಂದು ಮೊಮ್ಮಗಳನ್ನು ಕರೆದೊಯ್ದಳು.

'ನ ಬ್ರೂಯಾತ್ ಸತ್ಯಮ್ ಅಪ್ರಿಯಮ್.' ಆದರೆ ಲೋಕವನ್ನು ತಿದ್ದುವ ಅಪ್ರಿಯ ಸತ್ಯವನ್ನು ವಾಚ್ಯವಾಗಿ ಬೇಡ, ಸೂಚ್ಯವಾಗಿ, ವ್ಯಂಗ್ಯವಾಗಿಯೂ ಹೇಳಬಾರದೆ? ಅದನ್ನೇ ಧೇನಿಸುತ್ತಾ ಮಥಿಸುತ್ತಾ ಈಸಿ ಛೇರಿನಲ್ಲಿಯೇ ಒರಗಿದ್ದೆ. ಒಳಕೋಣೆಯಿಂದ ಅಜ್ಜಿ ಹೇಳಿಕೊಡುತ್ತಿದ್ದ ಹಾಡು ಮೊಮ್ಮಗಳ ಎಳೆಯ ಕಂಠದಿಂದ ಹೊಮ್ಮಿ ಬರುತ್ತಿತ್ತು - 'ಬಾರೋ ಕೃಷ್ಣಯ್ಯ ಭಕ್ತರ ಮನೆಗೀಗ...' ಕೇಳುತ್ತಾ ಕಣ್ಣು ಮುಚ್ಚಿದ್ದಾಗ ಟೆಲಿಫೋನ್ ಟ್ರಿನ್ ಟ್ರಿನ್ ಬಾರಿಸಿತು. ಒಂದು ಘಂಟೆಗೆ ಫೋನು ಮಾಡುತ್ತೇನೆ ಅಂದಿದ್ದರಲ್ಲ ಶಾಸ್ತ್ರಿಗಳು, ಅವರದೆ ಇರಬಹುದು ಎಂದು ಮೆಲ್ಲನೆ ಎದ್ದೆ.

ನೆ. ವಿಶ್ವನಾಥ
೧೮೪೨, ೪೦ನೇ 'ಎ' ಕ್ರಾಸ್, ಜಯನಗರ ೯ನೇ ಬ್ಲಾಕ್
ಬೆಂಗಳೂರು - ೫೬೦ ೦೬೯




# ವೃದ್ಧರಿಂದ ವಿಘ್ನ

ಫ್ಯಾಕ್ಟರಿಯಲ್ಲಿ ಅಕೌಂಟೆಂಟ್ ಆಗಿದ್ದ ನಾರಾಯಣ ಸ್ವಾಮಿಗೆ ಭಾನುವಾರ ಮಾತ್ರ ರಜ. ಆದರೆ ಬೇರೆ ಆಫೀಸುಗಳಿಗೂ ಭಾನುವಾರವೇ ರಜ. ಹೀಗಾಗಿ ಮನೆಗೆ ಸಂಬಂಧಪಟ್ಟ ತನ್ನ ಸ್ವಂತ ಕೆಲಸಗಳೇನೇ ಇದ್ದರೂ ಅದಕ್ಕೋಸ್ಕರ ಬೇರೊಂದು ದಿನ ರಜ ಪಡೆದು ಬಿಡುವು ಮಾಡಿಕೊಂಡು ಮುಗಿಸಬೇಕು. ಬ್ಯಾಂಕು, ಪೋಸ್ಟ್ ಆಫೀಸ್‌ಗಳ ಕೆಲಸ, ಎಲೆಕ್ಟ್ರಿಕಲ್ ಬಿಲ್ ಕಟ್ಟೋದು, ನೀರಿನ ಬಿಲ್ ಕಟ್ಟೋದು, ರೇಷನ್ ತರೋದು ಇಂತಹ ಎಲ್ಲಾ ಕೆಲಸಗಳೂ ಆ ದಿನವೇ ಆಗಬೇಕು. ತಿಂಗಳಿಗೊಂದು ದಿನವಾದರೂ ಇವಕ್ಕಾಗಿ ರಜ ತೆಗೆದುಕೊಳ್ಳಲೇಬೇಕು.

ಈ ಕೆಲಸಗಳಿಗಾಗಿಯೇ ಒಂದು ದಿನ ರಜ ತೆಗೆದುಕೊಂಡ ನಾರಾಯಣಸ್ವಾಮಿ, ಬೆಳಗ್ಗೆ ಪೇಪರ್‌ನಲ್ಲಿ ಟೆಲಿಫೋನ್ ಡೈರೆಕ್ಟರಿಗಳನ್ನು ಕೊಡುತ್ತಿದ್ದಾರೆಂಬುದನ್ನು ನೋಡಿದ. ಕೆಲಸದಲ್ಲಿ ಕೆಲಸ, ಅದೂ ಆ ದಿನವೇ ಮುಗಿಸೋಣ ವೆಂದುಕೊಂಡು, ಭಾರವಾದ ಎರಡು ಹಳೇ ಸಂಪುಟಗಳನ್ನು ಹೊತ್ತುಕೊಂಡು, ಹತ್ತಿರವೇ ಇದ್ದ ವಿಜಯನಗರದ ಟೆಲಿಫೋನ್ ಆಫೀಸಿಗೆ ಹೊರಟ. ಅಲ್ಲಿ ನೋಡಿದರೆ, ಹೊರಗಡೆ ಗೇಟಿನವರೆಗೆ 'ಕ್ಯೂ' ಇತ್ತು. ನೋಡಿ ಹೆದರಿದ. ಒಂದು ಸಲ 'ಕ್ಯೂ' ಪಕ್ಕದಲ್ಲಿ ನಡೆದು ಹೋಗಿ, ತನ್ನ ಸರದಿ ಬರಲು ಎಷ್ಟು ಹೊತ್ತು ಆಗಬಹುದೆಂದು ನೋಡಿಕೊಂಡು ಬಂದ. ಎಲ್ಲರೂ ಎರಡೆರಡು ಭಾರವಾದ ಕಾಪಿಗಳನ್ನು ಹೊತ್ತು ವಿವಿಧ ಭಂಗಿಗಳಲ್ಲಿ ನಿಂತಿದ್ದರು.

ಮೊದಲು ಕೆಲವರು ವೃದ್ಧರು ಹೊರಲಾರದ ಭಾರವನ್ನು ಹೊತ್ತು ನಿಂತಿದ್ದರು. ಅವರನ್ನು ನೋಡಿ 'ಅಯ್ಯೋ' ಎನಿಸಿತು ಅವನಿಗೆ. ಹಾಗೇ ಮುಂದುವರೆದು ನೋಡಿದ. ಮತ್ತೆ ಕೆಲವು ವೃದ್ಧರೇ ನಿಂತಿದ್ದರು. 'ಕ್ಯೂ' ಪಕ್ಕದಲ್ಲಿ ಪೂರ್ತಿ ನಡೆದುಬಂದ. ಇನ್ನೂ ಕೆಲವು ವೃದ್ಧರು ! ಹೀಗಾಗಿ 'ಕ್ಯೂ' ವೃದ್ಧರಮಯವಾಗಿತ್ತು. ಅವರಲ್ಲಿದ್ದ ಒಂದೇ ವ್ಯತ್ಯಾಸವೆಂದರೆ ಕೆಲವರಿಗೆ ಬೋಳುತಲೆ, ಕೆಲವರಿಗೆ ಬಿಳಿತಲೆ. ಆದರೆ ಎಲ್ಲರೂ ಕೈಯಲ್ಲಿ ಭಾರವನ್ನು ಹೊತ್ತು 'ಸ್ಥಿರತೆ'ಯಿಂದ ನಿಂತಿದ್ದರು. ಅವರನ್ನು ಕಂಡ ನಾರಾಯಣಸ್ವಾಮಿಗೆ ಮುಂಚೆ ತಕ್ಷಣ ಮೂಡಿದ್ದ ಕನಿಕರ ಮಾಯವಾಗಿ, ಆದರ ಸ್ಥಳದಲ್ಲಿ ಜಿಗುಪ್ಸೆ ತಲೆದೋರಿತು.

**ಎಚ್‌ಎಮ್‌ಟಿ**
**ಬಹುಮಾನಿತ ಲೇಖನ**



ಇವರಿಗಂತೂ ಬೇರೆ ಕೆಲಸವಿಲ್ಲ. ಎಷ್ಟು ಹೊತ್ತು ಬೇಕಾದರೂ ಹಾಗೆಯೇ ನಿಂತಿರುತ್ತಾರೆ. ಆದರೆ ತನ್ನಂತೆ ತಿಂಗಳೆಲ್ಲಾ ಆಫೀಸಿಗೆ ಹೋಗುವ, ಆ ದಿನ ಮಾತ್ರ ಬಿಡುವು ಮಾಡಿಕೊಂಡು ಬರುವವರ ಗತಿ ಏನು? ತಮಗೆ ಅಡ್ಡವಾಗಿ ಗೋಡೆಗಳಂತೆ ಇವರು ನಿಂತು ಬಿಟ್ಟರೆ, ತಮ್ಮ ಸರದಿ ಬರುವುದು ಯಾವಾಗ? ಆ ದಿನ ತನ್ನ ಆ ಕೆಲಸ ಆಗುವುದಿಲ್ಲವೆಂದು ನಿರ್ಧರಿಸಿದ ಅವನು.

ಹೋಗಲಿ, ಎಲೆಕ್ಟ್ರಿಕ್ ಬಿಲ್ ಆದರೂ ಕಟ್ಟೋಣವೆಂದು ಅಲ್ಲಿಗೆ ಹೊರಟ ನಾರಾಯಣಸ್ವಾಮಿ. ಅಲ್ಲಿಗೆ ಹೋಗಿ ನೋಡಿದರೆ ಅಲ್ಲಿಯೂ ಅದೇ ಕಥೆ. ಮುದುಕರು ಸಾಲಾಗಿ ಪರಮಶಾಂತರಾಗಿ ನಿಂತಿದ್ದರು. ಅವರ ಹಿಂದೆ ತಾನೂ ನಿಂತು ಬಿಲ್ ಕಟ್ಟುವ ವೇಳೆಗೆ ಸೂರ್ಯ ನೆತ್ತಿಗೆ ಬಂದ.

ಅಲ್ಲಿಂದ ಮಲ್ಲೇಶ್ವರಂ ಸರ್ಕಲ್ ಬಳಿ ಇದ್ದ ತನ್ನ ಬ್ಯಾಂಕಿನ ಕೆಲಸಕ್ಕೆ ಧಾವಿಸಿದ. ಏಕೆಂದರೆ ಮಧ್ಯಾಹ್ನ ೨ ಗಂಟೆಗೇ ಬ್ಯಾಂಕ್ ಕ್ಲೋಸ್ ಆಗುತ್ತೆ. ಅಲ್ಲಿ ಹೋದರೆ, ಪುನಃ 'ಕ್ಯೂ' ನಿಲ್ಲಬೇಕಾಯಿತು. ಕೌಂಟರ್ ಹತ್ತಿರ, ಮುದುಕರ ಹಿಂದೆ. ಇವರಿಗೇನು ಬೇರೆ ಕೆಲಸವೇ ಇಲ್ಲವೆ ? ಎಲ್ಲಿ ನೋಡಿದರೂ ಇವರೇ ನಿಂತಿರುತ್ತಾರೆ. ನಿಲ್ಲೋದರಲ್ಲೂ ಒಂದು ರೀತಿಯ ಗಂಭೀರ, ಠೀವಿ ಬೇರೆ, ಜೀವನದಲ್ಲಿ ತಾವು ಎಲ್ಲವನ್ನೂ ಜಯಿಸಿರುವವರಂತೆ. ಸರಕಾರ ಇವರಿಗೆ ಹೇಗೂ 'ಬಿಟ್ಟಿ ಸಂಬಳ' (ಅಂದರೆ ಪೆನ್ಷನ್) ಕೊಡುತ್ತೆ. ಇನ್ನು ಹೊತ್ತು ಹೇಗೆ ಹೋಗಬೇಕು ? ಅದಕ್ಕೇ ಎಲ್ಲಿ ನೋಡಿದರೂ, 'ನಾವು ಸ್ವತಂತ್ರ ಭಾರತ ಪ್ರಜೆಗಳು, ನಮಗೂ ಹಕ್ಕಿದೆ' ಅಂತ ಬಂದು ನಿಂತು ಬಿಡುತ್ತಾರೆ. ಬೇರೆ ತನ್ನಂತಹವರಿಗೆ ಹೆಜ್ಜೆ, ಹೆಜ್ಜೆಗೆ 'ವಿಘ್ನ', ಎಂದು ಅವರನ್ನು ಒಳಗೆ ಶಪಿಸುತ್ತಲೇ, ತನ್ನ ಸರದಿಗಾಗಿ ಕಾದು, ಕೆಲಸವನ್ನು ಮುಗಿಸುವ ಹೊತ್ತಿಗೆ, ಮನೆಗೆ ಹೋಗಿ ಊಟಮಾಡಿ ಬಿದ್ದುಕೊಂಡರೆ ಸಾಕೆನಿಸಿತು ಅವನಿಗೆ.

**ಜಿ. ಶ್ರೀನಿವಾಸನ್**

ಬ್ಯಾಂಕಿನಿಂದ ಹೊರಬಂದು ಬಸ್ಸಿಗಾಗಿ ಕಾದ. ಬಸ್ಸೂ ಬಂತು. ಅದರಲ್ಲಿ ಹತ್ತಿಯೂಬಿಟ್ಟ. ಇಲ್ಲಿ ಅವನ ಅದೃಷ್ಟ ಚೆನ್ನಾಗಿದ್ದಂತೆ ಕಂಡಿತು. ಏಕೆಂದರೆ ಮಧ್ಯದಲ್ಲಿ ಒಂದು ಸೀಟು ಖಾಲಿ ಇತ್ತು. ದೊಡ್ಡ ನಿಧಿಯನ್ನು ಕಂಡಂತೆ, ನಾರಾಯಣ ಸ್ವಾಮಿ ಆತುರವಾಗಿ ಹೋಗಿ, ತೃಪ್ತಿಯಿಂದ ಕೂತುಬಿಟ್ಟ, ಕಾಲುಗಳನ್ನು ಹಿಸುಕಿಕೊಳ್ಳುತ್ತಾ. ಆದರೆ ಅವನ ದುರದೃಷ್ಟ ಇಲ್ಲಿಯೂ ಕಾಡಿತ್ತು ಅವನನ್ನು. ಅವನ ಹಿಂದೆಯೇ ವೃದ್ಧರೊಬ್ಬರು ಬಸ್ಸು ಹತ್ತಿದ್ದರು. ಅವರು ಇವನ ಸೀಟಿನ ಪಕ್ಕಕ್ಕೆ ಬಂದು 'ಪಿಳಪಿಳನೆ' ಕಣ್ಣು ಬಿಡುತ್ತಾ, ಇವನ ಕಡೆಯೇ ನೋಡುತ್ತಿದ್ದರು. ಆದರೂ ಸುಸ್ತಾಗಿದ್ದ ನಾರಾಯಣಸ್ವಾಮಿ ಏಳಲಿಲ್ಲ. ಅವನಿಗೂ ಸಾಕಾಗಿತ್ತು. ಆ ಮುದುಕನಿಗೆ ತನ್ನ ಸೀಟಿನ ಮೇಲೆಯೇ ಕಣ್ಣು ಎಂದುಕೊಂಡ.

ಅಷ್ಟು ಹೊತ್ತಿಗೆ ಕಂಡಕ್ಟರ್ ಟಿಕೆಟ್ ಕೊಡುವುದಕ್ಕೆ ಬಂದ. ಚಿಲ್ಲರೆ ತೆಗೆಯಲು ಜೇಬಿನಲ್ಲಿ ಕೈಹಾಕಿದ. ಸೂಟುಧಾರಿ ಮುದುಕರು, ಚಲಿಸುತ್ತಿದ್ದ ಬಸ್ಸಿನಲ್ಲಿ ಅತ್ತಿತ್ತ ಜೋಲಾಡುತ್ತಾ, ಕೆಳಗೆ ಬೀಳುವುದರಲ್ಲಿದ್ದರು. ಅದನ್ನು ನೋಡಿದ ಕಂಡಕ್ಟರ್ ನಾರಾಯಣಸ್ವಾಮಿ ಕಡೆ ನೋಡಿ, ''ಅವರಿಗೆ ಸೀಟು ಕೊಡಿ, ಸಾರ್, ಪಾಪ ವಯಸ್ಸಾಗಿದೆ'' ಎಂದು ರೆಕಮೆಂಡ್ ಮಾಡಿದ. ನಾರಾಯಣಸ್ವಾಮಿ ಎದ್ದುನಿಂತ. ಮುದುಕರು ಕೂತರು.

ವೃದ್ಧ ಜನಾಂಗದ ಮೇಲೆಲ್ಲಾ ಅಂದು ಅತ್ಯಂತ 'ಕೋಪ'ಗೊಂಡಿದ್ದ ಅವನು ಮನೆ ಸೇರಿದವನೇ, ಹೆಂಡತಿಯೊಡನೆ ತಾನು ಪಟ್ಟ ಅವಸ್ಥೆಯೆಲ್ಲವನ್ನೂ ಹೇಳಿಕೊಂಡ. ಊಟವನ್ನು ಮುಗಿಸಿದರೂ, ಇನ್ನೂ 'ಕೋಪದ ಕಾವಿ'ನಲ್ಲೇ ಇದ್ದ ಅವನು ಪೇಪರಿನಲ್ಲಿ ಸರಕಾರಕ್ಕೆ ಕೆಲವು ಸೂಚನೆಗಳನ್ನು ಕೊಡುವ ರೀತಿಯಲ್ಲಿ 'ಓದುಗರ ವಾಣಿ'ಗೆ ಒಂದು ಪತ್ರವನ್ನು ತಯಾರಿಸಿದ. ಅವನು ಸೂಚಿಸಿದ ಸಲಹೆಗಳು ಮುಖ್ಯವಾಗಿ ನಾಲ್ಕು :

೧) ೬೦ ವರ್ಷ ದಾಟಿದ ವೃದ್ಧರಿಗೆ ಎಲ್ಲಾ ಸಾರ್ವಜನಿಕ ಕಾರ್ಯಾಲಯಗಳಲ್ಲಿಯೂ ಪ್ರತ್ಯೇಕವಾದ

'ಕ್ಯೂ' ಏರ್ಪಾಡಾಗಬೇಕು.

೨) ಮಧ್ಯಾಹ್ನ ಬೇರೆಯವರು ಅಷ್ಟಾಗಿ ಪ್ರಯಾಣ ಮಾಡದ ವೇಳೆಯಲ್ಲಿ ಮಾತ್ರ ವೃದ್ಧರು ಸಿಟಿ ಬಸ್ಸುಗಳಲ್ಲಿ ಪ್ರಯಾಣ ಮಾಡಬಹುದೆನ್ನುವ ಕಾನೂನು ಮಾಡಬೇಕು; ಬೇರೆ ಸಮಯಗಳಲ್ಲಿ ಅವರು ಪ್ರಯಾಣ ಮಾಡಿದರೆ, ಅವರಿಗೆ ಡಬಲ್ ಚಾರ್ಜ್ ವಿಧಿಸಬೇಕು.

೩) ಪಾರ್ಕ್‌ಗಳಲ್ಲಿ, ದೇವಸ್ಥಾನಗಳಲ್ಲಿ ಹೆಂಗಸರು, ಮಕ್ಕಳಿಗೆ ತೊಂದರೆ ಆಗುವಂತೆ ಅಲ್ಲಿರುವ ಬೆಂಚುಗಳನ್ನು ವೃದ್ಧರು ಗಂಟೆಗಟ್ಟಲೆ ಆಕ್ರಮಿಸಕೂಡದು; ಅವರಿಗಾಗಿ ಪ್ರತ್ಯೇಕವಾಗಿ ಒಂದೆರಡು ಬೆಂಚುಗಳನ್ನು ಮಾತ್ರ ಸ್ವಲ್ಪ ದೂರದಲ್ಲಿ ವ್ಯವಸ್ಥೆ ಮಾಡಬೇಕು.

೪) ಇದೆಲ್ಲವನ್ನೂ ಕಾನೂನುಬದ್ಧವಾಗಿ ಅವರು ಅನುಸರಿಸುವಂತೆ ನೋಡಿಕೊಳ್ಳಲು ಸೂಕ್ತವಾದ ಪೊಲೀಸ್ ಪಹರೆಯನ್ನು ಏರ್ಪಡಿಸಬೇಕು; ತಪ್ಪಿತಸ್ಥರಿಗೆ ನಿರ್ದಾಕ್ಷಿಣ್ಯವಾಗಿ ಅಧಿಕ ಜುಲ್ಮಾನೆ ಹಾಕಬೇಕು.

ಒಟ್ಟಿನಲ್ಲಿ, ತನ್ನ ಪತ್ರ 'ವೃದ್ಧ ವಿರೋಧಿ' ನೀತಿಯದಾದರೂ, 'ಸಮಾಜ ಕಲ್ಯಾಣ'ಕ್ಕೆ ಅದು ಅನಿವಾರ್ಯವೆಂದು ನಾರಾಯಣಸ್ವಾಮಿ ತನ್ನನ್ನು ತಾನು ಸಮರ್ಥಿಸಿಕೊಳ್ಳಲು ಮರೆಯಲಿಲ್ಲ. ಸಾಯಂಕಾಲದೊಳಗೆ ಕಾಗದವನ್ನು ಪೋಸ್ಟ್ ಮಾಡಿದರೆ ಅವನ ಕೆಲಸ ಮುಗಿಯುತ್ತಿತ್ತು.

ಆದರೆ ಎಲ್ಲವೂ ಅವನು ಅಂದುಕೊಂಡ ಹಾಗೆಯೇ ಆಗುತ್ತದೆಯೇ? 'ನಾರಾಯಣಸ್ವಾಮಿಗಳೇ' ಎಂದು ಯಾರೋ ಹೊರಗಿನಿಂದ ಕರೆದಂತಾಯಿತು. ಬಾಗಿಲು ತೆಗೆದು ನೋಡಿದರೆ, ಐದಾರು ಮನೆಗಳ ದೂರದಲ್ಲಿದ್ದ ರಿಟೈರ್ಡ್ ಯಜಮಾನ್ರು, ನಾಗೇಶರಾಯರು ನಿಂತಿದ್ದರು !

''ಒಳಗೆ ಬರಬಹುದೆ ? ನಿಮ್ಮನ್ನು ಎಲೆಕ್ಟ್ರಿಕ್ ಆಫೀಸಿನಲ್ಲಿ ಬಿಲ್ ಕಟ್ಟುತ್ತಿದ್ದಾಗ ನೋಡಿದೆ. ನೀವು ಈ ದಿನ ರಜೆ ಹಾಕಿರಬಹುದೆಂದು ಊಹಿಸಿ ಮಾತನಾಡಿಸಿಕೊಂಡು ಹೋಗೋಣವೆಂದು ಬಂದೆ'' ಎಂದು ಹೇಳುತ್ತಾ, ಕುರ್ಚಿಯಲ್ಲಿ ಕೂತು ಕೈಗೆ ಪೇಪರ್ ಎತ್ತಿಕೊಂಡರು.

''ಬನ್ನಿ, ಬನ್ನಿ, ಅದಕ್ಕೇನಂತೆ, ನೀವು ಬರೋದೆ ನಮಗೆ ಒಂದು ಸಂತೋಷ'' ಎಂದ ನಾರಾಯಣಸ್ವಾಮಿ ಬೇಸರವನ್ನು ಮುಚ್ಚುವ ಉತ್ಸಾಹದ ಧ್ವನಿಯಲ್ಲಿ. ಆದರೆ, ನಿಜವಾಗಿಯೂ ಸಂತೋಷಪಟ್ಟಿದ್ದು ಅವನ ಹೆಂಡತಿಯೇ. ಹಿರಿಯರು ಮನೆಗೆ ಬಂದರೆ ಆಕೆಗೆ ಏನೋ ತೃಪ್ತಿ. ತಕ್ಷಣವೇ ಕಾಫಿ ಮಾಡಲು ಅಡಿಗೆ ಮನೆಗೆ ಹೋದಳು.

''ಅಂದ ಹಾಗೆ, ನೀವು ಯಾವ ಕಾಫಿ ಪುಡಿ ಉಪಯೋಗಿಸೋದು ?'' ಎಂದರು ರಾಯರು.

ತಾಳ್ಮೆ ಕಳೆದುಕೊಳ್ಳದೆ ನಾರಾಯಣಸ್ವಾಮಿ ''ಕಾಫಿ ಡೇ, ಅಲ್ಟ್ರಾ ರಿಚ್'' ಎಂದ.

''ನೋ, ನೋ, ಇನ್ನು ಮೇಲೆ ಅದು ಬೇಡ. ಕಾಫಿ ಡೇ ಪಿ. ಬಿ. ರಿಚ್ ಉಪಯೋಗಿಸಿ ನೋಡಿ, ಅದರಲ್ಲೂ ೨೦ ಪರ್ಸೆಂಟ್ ಚಿಕೋರೀನೇ ಇರೋದು. ಆದರೂ ಅಲ್ಟ್ರಾ ರಿಚ್‌ಗಿಂತಲೂ ಬೆಲೆ ಕಡಿಮೆ. ನಮ್ಮ ಮನೆಯಲ್ಲಿ ನಾವು ಅದನ್ನೇ ಉಪಯೋಗಿಸೋದು'' ಎಂದು ಉಚಿತ ಸಲಹೆ ನೀಡಿದರು.

ನಾರಾಯಣಸ್ವಾಮಿ ಸುಮ್ಮನಿದ್ದುದನ್ನು ನೋಡಿ, ''ಯಾಕೆ ತೆಪ್ಪಗಿದ್ದೀರಿ ? ಯಾವುದೋ ಆಲೋಚನೆಯಲ್ಲಿ ಇದ್ದಂತಿದೆ. ಏನಾದರೂ ಸಮಸ್ಯೆ ಇದ್ದರೆ ಹೇಳಿ, ನಾನಿದ್ದೀನಲ್ಲಾ ?'' ಎಂದರು ಧೈರ್ಯ ಕೊಡುವಂತೆ, ಅವನ ಭುಜವನ್ನು ಅಲ್ಲಾಡಿಸುತ್ತಾ.

ನಾರಾಯಣಸ್ವಾಮಿಗೆ ಅವರ 'ಆಶ್ವಾಸನೆ' ಕೇಳಿ ನಗು ಬಂತು, ಇವರೇನು ತನಗೆ ಸಹಾಯ ಮಾಡಬಲ್ಲರು ಎಂದು.

ಅವರು ಕಾಫಿ ಕುಡಿದು ಹೋದಮೇಲೆ ನಾರಾಯಣ ಸ್ವಾಮಿಯ ಹೆಂಡತಿ ಬಂದು ''ರೀ, ಪೇಪರ್‌ನಲ್ಲಿ ಇವತ್ತಿನ 'ದಿನಭವಿಷ್ಯ' ನೋಡಿದಿರಾ ? ಅದರಲ್ಲಿ ನಿಮ್ಮ ರಾಶಿಗೆ 'ವೃದ್ಧರಿಂದ ವಿಘ್ನ' ಅಂತಿದೆ. ಅದಕ್ಕೇ ಇವತ್ತು ನೀವು ಪಟ್ಟ ಅವಸ್ಥೆ ಎಲ್ಲಾ. ಮುಖ್ಯವಾಗಿ ನಿಮಗೆ ಭವಿಷ್ಯದಲ್ಲಿ ನಂಬಿಕೆ ಇಲ್ಲ, ಅದಕ್ಕೆ ನಾನೇನು ಮಾಡಲಿ ? ಈಗಲಾದರೂ ನಂಬಿಕೆ ಬಂತಲ್ಲ ?'' ಎಂದಳು.

ನಾರಾಯಣಸ್ವಾಮಿಗೆ ಅಷ್ಟು ಸುಲಭವಾಗಿ ನಂಬಿಕೆ ಬರಲು ಸಾಧ್ಯವಿರಲಿಲ್ಲ. ಆ ದಿನ 'ವೃದ್ಧರಿಂದ ವಿಘ್ನ' ತನ್ನಂತಹ ನೂರಾರು ಜನಕ್ಕೆ ಆಗಿತ್ತು; ಪ್ರತಿದಿನವೂ ಆಗುತ್ತಲೇ ಇರುತ್ತದೆ. ಅವರದೆಲ್ಲವೂ ತನ್ನ 'ರಾಶಿ'ಯೇ ? ಇದು ಭವಿಷ್ಯದ ವಿಷಯವೇ ಅಲ್ಲ; ನಮ್ಮ ಸಮಾಜ ಈಗ ಬೆಳೆದು ನಿಂತಿರುವ 'ಸ್ವರೂಪ' ಅನ್ನಿಸಿತು ಅವನಿಗೆ. ಆದರೆ ಇದನ್ನು ಸರಿಪಡಿಸುವುದು ಹೇಗೆ ? ತಾನು ಸಿದ್ಧಪಡಿಸಿರುವ ಪತ್ರವನ್ನು ಪೇಪರ್‌ಗೆ ಕಳುಹಿಸಿಬಿಟ್ಟರೆ ಸಮಸ್ಯೆ ಬಗೆ ಹರಿಯುವುದೆ ? ಇಲ್ಲವೆನಿಸಿತು ಅವನಿಗೆ. ಮನೆಗೆ ಬಂದು ಕೆಲಸಗಳಿಗೆ ಅಡ್ಡಿಯಾಗಿ ಕೂತುಬಿಡುವ ನಾಗೇಶರಾಯರಂತಹ 'ಹರಟೆ ಪ್ರಿಯ' ಮುದುಕರ ಉಪದ್ರವವನ್ನು ಹೇಗೆ ತಪ್ಪಿಸುವುದು? ತಮ್ಮಂತಹವರ 'ಕಾಲದ ಕಳ್ಳರು' ಇವರು. ಆದರೂ ಅವರೊಡನೆ ಸೌಜನ್ಯದಿಂದ ಮಾತನಾಡಬೇಕಾದ್ದು ನಮ್ಮ ಸಂಸ್ಕೃತಿಯಲ್ಲವೆ ?

'ಸಂಸ್ಕೃತಿ' ಎನ್ನುವುದು ಮನಸ್ಸಿಗೆ ಬಂದೊಡನೆ ನಾರಾಯಣಸ್ವಾಮಿಯ ಮನಸ್ಸಿನಲ್ಲಿ ತಾನು ಸಿದ್ಧಗೊಳಿಸಿದ ಪತ್ರ 'ನೈತಿಕ'ವಾಗಿ ಸರಿಯೇ ? ಎನ್ನುವ ಸಂಶಯ ತಲೆದೋರಿತು. ಈಗ ಬಂದಿದ್ದ ವೃದ್ಧರೇ ಎಷ್ಟು ಪ್ರೀತಿಯಿಂದ ಭುಜ ಮುಟ್ಟಿ ಮಾತನಾಡಿಸಿದ್ದರು! ಮಾನವೀಯ ಸಂಬಂಧಗಳಲ್ಲಿ ಇವೆಲ್ಲಾ ಎಷ್ಟೊಂದು ಮುಖ್ಯ. ಇವೆಲ್ಲಾ ಇಲ್ಲದಿದ್ದರೆ ಜೀವನವೇ ಯಾಂತ್ರಿಕವಾಗಿ, ಬರಡಾಗಿ ಹೋಗುವುದಿಲ್ಲವೇ ? ಇಂತಹವರಿಂದಲ್ಲವೆ ನಮ್ಮ ಸಾಮಾಜಿಕ ಜೀವನ ಇಷ್ಟಾದರೂ 'ಭಾವ ಸಂಪನ್ನ'ವಾಗಿ ಉಳಿದಿರುವುದು ? ಸಮಗ್ರ ಜೀವನದ ದೃಷ್ಟಿಯಿಂದ ನೋಡಿದರೆ ತಮ್ಮಂತಹವರ ತೀವ್ರಗತಿಯ ದೈನಂದಿನ ಬದುಕಿನಲ್ಲಿ ಅವರಿಂದ ಆಗಾಗ ಒದಗಬಹುದಾದ 'ವಿಘ್ನ'ಗಳೂ ಕೇವಲ ಸಾಂದರ್ಭಿಕ, ಸಹನೀಯ ಸತ್ಯಗಳಷ್ಟೇ ಅಲ್ಲವೆ ? ಎಂದೆಲ್ಲಾ 'ವಿಚಾರ ದ್ವಂದ್ವ'ಕ್ಕೆ ಒಳಗಾಯಿತು ಅವನ ಮನಸ್ಸು.

ಆಗಲೇ ಅವನ ಹೆಂಡತಿ ''ಸುಮ್ಮನೆ ಯಾಕೆ ವಯಸ್ಸಾದವರ ಮೇಲೆ 'ಕೋಪ' ನಿಮಗೆ? ನಾಳೆ ನೀವೂ ಮುದುಕರಾಗೋವರು ತಾನೆ ? ಅದನ್ನು ಮನಸ್ಸಿನಲ್ಲಿಟ್ಟುಕೊಂಡರೆ ನಿಮ್ಮ ಬೇಜಾರೆಲ್ಲಾ ಹೊರಟುಹೋಗುತ್ತೆ'' ಎಂದು ಎಚ್ಚರದ ಉಪದೇಶ ನೀಡಿದಳು.

ಇದರಿಂದಲ್ಲದಿದ್ದರೂ, 'ವಿಘ್ನಕಾರಕ ವೃದ್ಧರ' ಮೇಲಿನ ಅವನ ಕೋಪವು ಈಗಾಗಲೇ ಅವನ ಆಂತರಿಕ 'ವಿಚಾರ ಧಾರೆ'ಯಿಂದಲೇ ತಣ್ಣಗಾಗಿತ್ತು.

ಜ. ಶ್ರೀನಿವಾಸನ್
೨೩೬೪, ೧ನೇ ಮಹಡಿ, ೧೨ನೇ ಮೇನ್, 'ಎ' ಬ್ಲಾಕ್, ೨ನೇ ಹಂತ
ಸುಬ್ರಹ್ಮಣ್ಯನಗರ, ರಾಜಾಜಿನಗರ, ಬೆಂಗಳೂರು - ೫೬೦ ೦೧೦

## ಪ್ರೀತಿ ಎಂದರೇನು ?




ರಮ್ಯ ಕಾದಂಬರಿಗಳ ಓದು
ಸಿನಿಮಾದ ಮರಸುತ್ತುವ ಪ್ರೇಮಿಗಳು
ಅಮ್ಮಮ್ಮನ ಶೃಂಗಾರ ಹಾಸ್ಯ ಚಟಾಕಿ
ಎಲ್ಲವೂ ಬೆರೆತು
ಹದಿನೆಂಟರ ಹರೆಯದಲ್ಲಿ
ಕಣ್ಣ ತುಂಬೆಲ್ಲಾ ಪ್ರೇಮಲೋಕ
ನೋಡಿದಲ್ಲೆಲ್ಲಾ ಕಾಮನಬಿಲ್ಲು
ನೆಲದಿಂದ ಒಂದಡಿ ಮೇಲೆಯೆ
ನಡೆದಾಡಿದಂತೆ ಚಲನೆ !
ಕಾಲ ಸವೆಯುತ್ತಾ ಹೋದಂತೆ
ಅರಿವಾಗುತ್ತಿದೆ
ಪ್ರೀತಿಯೆಂದರೆ ಝಗಝಗಿಸುವ ಬೆಳಕಲ್ಲ
ಪ್ರೀತಿಯೆಂದರೆ ಅರಿವಿರದ ಆಪ್ತಾಲಾಪವಲ್ಲ
ಪ್ರೀತಿಯೆಂದರೆ ಗಾಳಿಯಲ್ಲಿ ತೇಲುವುದಲ್ಲ
ಪ್ರೀತಿಯೆಂದರೆ.....
ಬಟ್ಟೆ ಒಗೆಯುತ್ತಾ
ಅಡುಗೆ ಮಾಡುತ್ತಾ
ನೆಲ ಒರೆಸುತ್ತಾ
ತುತ್ತು ಹಂಚಿಕೊಳ್ಳುತ್ತಾ
ಕ್ರಿಯೆಯ ನಡುವಿನಲ್ಲೇ
ಸಾಕ್ಷಾತ್ಕರಿಸಿಕೊಳ್ಳಲು
ಹೆಣಗಾಡುತ್ತಾ
ನೆಮ್ಮದಿಯ ಉಸಿರೊಂದನ್ನು
ಒಳಗೆಳೆದುಕೊಳ್ಳುವುದು !
ಅದಷ್ಟೇ.... ಅದಷ್ಟೇ.... ಅದಷ್ಟೇ...

ಎಸ್. ಮಾಲತಿ
ಮಹಾಲಸ ನಿಲಯ, ಜೋಗ ರಸ್ತೆ, ಸಾಗರ-೫೭೭ ೪೦೧



# ಸಾಕ್ರಟೀಸ್‌ನ ಕೋಳಿ



ಸೆರೆಮನೆಯಲ್ಲಿ ಸತ್ತು ಮಲಗಿದ್ದ ತನ್ನ ಗುರು ಸಾಕ್ರಟೀಸ್‌ನ ಕಣ್ಣು ಬಾಯಿಯನ್ನು ಮುಚ್ಚಿ ಕ್ರಿಟೋ ಎದ್ದು ಆಚೆಗೆ ಹೊರಟ. ಉಳಿದ ಶಿಷ್ಯರು ಇನ್ನೂ ಅಲ್ಲೇ ಕುಳಿತಿದ್ದರು. ಕಟ್ಟಕಡೆಯ ಇಚ್ಛೆಯೋ ಎಂಬಂತೆ ಸಾಕ್ರಟೀಸ್ ಆಡಿದ್ದ ಮಾತುಗಳನ್ನು ಆದಷ್ಟೂ ಶೀಘ್ರವಾಗಿ ನೆರವೇರಿಸಲು ಶಿಷ್ಯ ಸಿದ್ಧನಾಗುತ್ತಿದ್ದ..... ಸಾಕ್ರಟೀಸ್ ತಮಾಷೆಗಾಗಿ ಆ ಮಾತು ಹೇಳಿದನೇ ? ಒಂದು ವೇಳೆ ಮನಃಪೂರ್ವಕವಾಗಿ ಹಾಗೆ ಹೇಳಿದ್ದರೆ 'ಗುರುವಚನ'ವನ್ನು ನಡೆಸಿಯೇ ತೀರಬೇಕಲ್ಲವೇ ? ಈ ಪರಿಯ ತಾಕಲಾಟದಲ್ಲಿ, ಕ್ರಿಟೋ ಗುರುವಿನ ಇಂಗಿತ ಏನೇ ಇರಲಿ... ಆತನ ಅಂತಿಮ ಇಚ್ಛೆಯನ್ನು ಅಕ್ಷರಶಃ ಪಾಲಿಸುವ ನಿರ್ಧಾರಕ್ಕೆ ಬಂದಿದ್ದ. ಮರಣ ಸಂಕಟದಲ್ಲಿದ್ದ ಸಾಕ್ರಟೀಸ್ ಮೇಲಂಗಿಯನ್ನು ಮುಖ ಮುಚ್ಚುವಂತೆ ಮೇಲಕ್ಕೆಳೆದುಕೊಂಡಿದ್ದ. ತಾನು ಅನುಭವಿಸುತ್ತಿರುವ ಘೋರ ವೇದನೆಯ ಅಸಹ್ಯ ದೃಶ್ಯ ಶಿಷ್ಯರಿಗೆ ಕಾಣಬಾರದೆಂಬುದು ಅವನ ಉದ್ದೇಶ. ಆಗ ಅವನು ಆಡಿದ ಆ ಮಾತುಗಳೇ ಚರಮ ವಾಕ್ಯವಾಯಿತು !

'ಕ್ರಿಟೋ...... ವೈದ್ಯ ದೇವತೆ ಈಸ್ಕ್ಯುಲಾಪಿಯಸ್‌ಗೆ ನಮ್ಮಿಂದ ಒಂದು ಕೋಳಿ ಸಲ್ಲಬೇಕಾಗಿದೆ; ಈ ದೈವ ಋಣ ತೀರಿಸಲು ಮರೆತೀಯೇ !' ಕ್ರಿಟೋವಿನ ಪಾಲಿಗೆ ಅದು ಪವಿತ್ರ ಹೊಣೆಗಾರಿಕೆಯಾಯಿತು. ಗುರುವಿನ ಮಾತನ್ನು ಅಳೆದು ಹೊಯ್ದು ವಿಚಾರ ವಿಶ್ಲೇಷಣೆ ನಡೆಸುವುದು ಅವನಿಗೆ ಇಷ್ಟವಿರಲಿಲ್ಲ. ಮೆಲಿಟಸ್, ಅನೈಟಸ್‌ರ ಆಪಾದನೆಗಳು ಏನೇ ಇರಲಿ, ಜನರಿಗೆ ಇಷ್ಟವಾದ ಅಧಿಕೃತ ಕರ್ಮಾಚರಣೆಗಳನ್ನು ಸಾಕ್ರಟೀಸ್ ಗೌರವಿಸುತ್ತಿದ್ದ ನಲ್ಲವೇ ? ಪುರಾಣ ಪ್ರಸಿದ್ಧ ಮಿಥಕಗಳಿಗೆ (ಅವು 'ಮಿಥಕ'ಗಳೆಂದು ಕ್ರಿಟೋ ಹೇಳಲಿಲ್ಲ) ಸಾಕ್ರಟೀಸ್ ಉದಾತ್ತ, ಗಹನ, ತಾತ್ವಿಕ ರೂಪವನ್ನೂ ಸಾಂಕೇತಿಕ ಅರ್ಥವನ್ನೂ ಅನ್ವಯಿಸಿ ವ್ಯಾಖ್ಯಾನ ಮಾಡುತ್ತಿದ್ದ. ಅವನು ಸುತ್ತು ಬಳಸಿ ಮಾತನಾಡುತ್ತಾ ಎಷ್ಟೇ ಕಾವ್ಯಮಯ, ಮೀಮಾಂಸಕ, ವಾಗ್ಜಾಲ ಹೆಣೆದರೂ ಗುಣಾತ್ಮಕ ಗ್ರೀಕ್ ರಾಷ್ಟ್ರಧರ್ಮದ ನಂಬಿಕೆಗಳನ್ನು ಗೌರವಿಸುತ್ತಿದ್ದುದು ನಿಜ. ಅವನ ಕೊನೆಯ ಪ್ರವಚನದಲ್ಲಿನ ಆ ಒಂದು ಸುಂದರ ಘಟನೆಯೇ ಇದಕ್ಕೆ ಸಾಕ್ಷಿ. (ಪ್ರಶ್ನೋತ್ತರಗಳ ಧಾಟಿಯಲ್ಲಿ ಪ್ರವಚನ ನಡೆಸುವಾಗಲೂ ಸಾಕ್ರಟೀಸ್ ಕೆಲವೊಮ್ಮೆ ತನ್ನ ಸುತ್ತಲಿನ ಪ್ರಾಶ್ನಿಕರನ್ನು ಮರೆತು ಅಲಂಕಾರಮಯ ಶೈಲಿಯಲ್ಲಿ ಸುದೀರ್ಘವಾಗಿ ಮಾತನಾಡುತ್ತ ಮೈ ಮರೆಯುತ್ತಿದ್ದುದನ್ನು ಕ್ರಿಟೋ ಗಮನಿಸಿದ್ದ). ಪರಲೋಕದ ವಿಸ್ಮಯಕಾರಿ ಸೌಂದರ್ಯವನ್ನೂ ಸಂಪ್ರದಾಯನಿಷ್ಠವಾದ ಅದರ ಸ್ಥಳಾಕೃತಿ ವರ್ಣನೆ ವಿವರಗಳನ್ನೂ ಬಣ್ಣಿಸುವಾಗ ಅವನು ತನ್ನ ಕಡು ಕಠೋರ ತತ್ವ ಜಿಜ್ಞಾಸೆ – ತರ್ಕ ಕೌಶಲ್ಯವನ್ನು ಮರೆಯುತ್ತಿದ್ದ.

ಆದರೆ ಅದೆಲ್ಲವನ್ನೂ ತಾನು ನಂಬುವುದಿಲ್ಲವೆಂದು ಸಾಕ್ರಟೀಸ್ ಎಂದೂ ಹೇಳಿರಲಿಲ್ಲ ಅಥವಾ ತಾನು ಹೇಳಿದ್ದೆಲ್ಲವೂ ಪರಮ ಸತ್ಯವೆಂದು ಪಟ್ಟು ಹಿಡಿದು ಅವನು ಕಟ್ಟಾ ಉಗ್ರವಾದಿಯಂತೆ ವಾದಿಸುವ ಗೋಜಿಗೂ ಹೋಗುತ್ತಿರಲಿಲ್ಲ. ಇದೇನು ಆಶ್ಚರ್ಯವಲ್ಲ. ಯಾಕೆಂದರೆ ಅವನು ಆತ್ಮದ ಅಮರತ್ವವನ್ನು ಸಮರ್ಥಿಸುವಾಗಲೂ ಸ್ವಂತದ ಭ್ರಮೆ-ಅಹಂಭಾವಗಳನ್ನು ಬದಿಗಿರಿಸಿ, ತನ್ನ ಕಲ್ಪನೆಗಳಲ್ಲೂ ತಪ್ಪಿರಬಹುದೆಂದು ಆಧ್ಯಾತ್ಮಿಕ ಸಾಧ್ಯತೆಯನ್ನು ಒಪ್ಪಿಕೊಳ್ಳುತ್ತಿದ್ದ. ಒಟ್ಟಿನಲ್ಲಿ, ಕ್ರಿಟೋವಿಗೆ ಅನಿಸಿತು - ತಾನು ವೈದ್ಯ ದೇವತೆಗೆ ಬಲಿಕೊಡಲು ಒಂದು ಕೋಳಿಯನ್ನು ತಲಾಷ್ ಮಾಡಲು ಹೊರಟರೆ ಅದರಿಂದ ತನ್ನ ಗುರುವಿನ ಸಿದ್ಧಾಂತಕ್ಕಾಗಲಿ, ಧೋರಣೆಗಾಗಲಿ ಅಪಚಾರ ಮಾಡಿದಂತಾಗದು ಎಂದು.

ದೈವಸಂಕಲ್ಪವೋ ಎಂಬಂತೆ ಕೆಲವೇ ಕ್ಷಣದಲ್ಲಿ ಕ್ರಿಟೋವಿನ ಮನೋರಥ ಕೈಗೂಡುವ ಸಂದರ್ಭ ಒದಗಿತು. ಸೆರೆಮನೆಯಿಂದ ಹೊರಟು ನಾಲ್ಕು ಹೆಜ್ಜೆ ಹಾಕುವುದರಲ್ಲಿ ರಸ್ತೆ ಬದಿಯ ಮನೆಯೊಂದರ ಅಂಗಳದ ಗೋಡೆ ಕಾಣಿಸಿತು. ಗೋಡೆಯ ಮೇಲೆ ತನ್ನ ವರ್ಣವೈಭವದ ರೆಕ್ಕೆಗಳನ್ನು ಕೆದರಿ ನಿಂತು ಒಂದು ಭರ್ಜರಿ ಹುಂಜ ಅತ್ತಿತ್ತ ನೋಡುತ್ತಿದೆ, ಅದು ಆಗ ತಾನೇ ತತ್ವಶಾಸ್ತ್ರಜ್ಞ ಗೋರ್ಗಾಸ್‌ನ ಮನೆ ಅಂಗಳದಿಂದ ಗೋಡೆಯ ಮೇಲಕ್ಕೆ ಎಗರಿ ಇನ್ನೇನು ರಸ್ತೆಗೆ ಜಿಗಿಯುವುದರಲ್ಲಿದೆ. ತನ್ನ ಅಸಹ್ಯ ಬಂಧನದಿಂದ ಪಾರಾಗಿ ಹೋಗಲೆತ್ನಿಸುತ್ತಿರುವ ಹುಂಜ ಅದು.

ಮೂಲ : ಲಿಯೊಪೋಲ್ಡೊ ಎಲಾಸ್‌ನ ಸ್ಪೇನಿಷ್ ಕಥೆ

ಅನುವಾದ : ಎಚ್. ಕೆ. ರಾಮಚಂದ್ರಮೂರ್ತಿ

ಕುಕ್ಕುಟರಾಜನ ಉದ್ದೇಶವೇನೆಂದು ಕ್ರಿಟೋ ಕ್ಷಣಾಗ್ರದಲ್ಲಿ ಗ್ರಹಿಸಿದ. ಅದು ರಸ್ತೆಗೆ ಹಾರಿದರೆ ತಾನು ಅದನ್ನು ಬೆನ್ನಟ್ಟಿ ಹೋಗಿ ಸುಲಭವಾಗಿ ಹಿಡಿಯಬಹುದೆಂಬ ನಿರೀಕ್ಷೆ ಅವನದು. ಅತಾರ್ಕಿಕವೆಂದು ಮನದಟ್ಟಾದಾಗಲೂ ತನ್ನ ಧಾರ್ಮಿಕ ಭ್ರಮಾಕಲ್ಪನೆಗಳಿಗೇ ಜೋತುಬೀಳುವ ಯಾವನೇ ವ್ಯಕ್ತಿ, ಯಾವತ್ತೂ ಮೂಢನಂಬಿಕೆಗೆ ಬಲಿಯಾಗುತ್ತಾನಷ್ಟೇ. ಕುಕ್ಕುಟ ಗ್ರಹಣದ ಯೋಚನೆ ಕ್ರಿಟೋ ತಲೆಯೊಳಕ್ಕೆ ಹೊಕ್ಕು ಕೂಡಲೇ ಈಸ್ಕ್ಯುಲಾಪಿಯಸ್ ದೇವತೆ ಬಯಸಿದ ಬಲಿ ಈ ಹುಂಜವೇ ಎಂದು ಅವನು ಪ್ರಬಲವಾಗಿ ನಂಬಿದ. ಈ ಯೋಗಾಯೋಗವು ದೈವ ನಿಯಾಮಕವೆನ್ನುವುದು ಅವನಿಗೆ ಖಚಿತವಾಯಿತು.

ಆದರೆ ಕೋಳಿಗೆ ಹಾಗೆನಿಸಿರಲಿಲ್ಲ - ತನ್ನನ್ನು ಹಿಡಿಯಲು ಮಾನವ ಪ್ರಾಣಿಯೊಂದು ತವಕಿಸಿ ಹಿಂಬಾಲಿಸುತ್ತಿದೆ ಎಂದು ಅರಿವಾದೊಡನೆ ಅದು ಶರವೇಗದಿಂದ ಧಾವಿಸ ಹತ್ತಿತು. ರೆಕ್ಕೆಗಳನ್ನು ಪಟಪಟ ಬಡಿಯುತ್ತಾ ತನ್ನಷ್ಟಕ್ಕೆ ಗಟ್ಟಿಯಾಗಿ 'ಕ್ಲಕ್ಕ'ಸುತ್ತಾ ಕೋಪೋದ್ರೇಕದಿಂದ ಅದು ಓಡಿತು. ಬೆಂಬತ್ತಿ ಬರುತ್ತಿರುವವನ ಗುರುತು ಅದಕ್ಕೆ ಬಲುಬೇಗ ಸಿಕ್ಕಿತು - ಅವನೂ ತನ್ನ ದಣಿ ಗೋರ್ಗಾಸ್‌ನೂ ತಮ್ಮ ಗುರುವಿನ ತೋಟದಲ್ಲಿ ಕುಳಿತು ಗಂಟೆಗಟ್ಟಲೆ 'ಪ್ರೇಮ', 'ದಿವ್ಯ ಸೌಂದರ್ಯ', 'ಪರಲೋಕ' ಎಂಬಿತ್ಯಾದಿ ವಿಷಯಗಳ ಕುರಿತು ಚರ್ಚಿಸುತ್ತಿದ್ದುದನ್ನು ಆ ದ್ವಿಪಾದಿ ಚೆನ್ನಾಗಿ ಗಮನಿಸಿತ್ತು - ಅಷ್ಟೇ ಅಲ್ಲ, ಇದೇ ಸಮಯದಲ್ಲಿ ಅವು ಯಾವ ತತ್ತ್ವ-ತರ್ಕಗಳ ನೆರವೂ ಇಲ್ಲದ ಸಲೀಸಾಗಿ

ಮಾತ್ರದಲ್ಲಿ ಹತ್ತು ಹಲವು ಹೆಂಟೆಗಳ 'ಮಾನಭಂಗ' ಮಾಡಿಬಿಡುತ್ತಿತ್ತು !

'ಇದೊಳ್ಳೇ ಫಜೀತಿ ಬಂತಲ್ಲಪ್ಪೋ' ಎನ್ನುತ್ತಾ ಹುಂಜವು ಮೇಲೆ ಜಿಗಿಯಲು ಸಿದ್ಧವಾಯಿತು. ಅಂಥ ಅಪಾಯ ಒದಗಿದರೆ ಹಾಗೆ ಮಾಡಲು ಅದಕ್ಕೇನೂ ಕಷ್ಟವಾಗಿರಲಿಲ್ಲ..... 'ಅತಿ ಬುದ್ಧಿಯ ಇಂಥವರನ್ನು ಕಂಡರೆ ನನಗೆ ಆಗುವುದಿಲ್ಲ - ನ್ಯಾಯಾನ್ಯಾಯ ವಿವೇಚಿಸಬೇಕಾದ ಈ ಜನ ನನ್ನನ್ನು ಹಿಡಿದು ವಶಪಡಿಸಿಕೊಳ್ಳಲು ನೋಡುತ್ತಾರಲ್ಲಾ ! ಯಾವಾಗಲೂ ವಟಗುಟ್ಟುವ ಆ ನನ್ನ ತರ್ಕಶಾಸ್ತ್ರದ ದಣಿಯ ಕೈಯಿಂದ ತಪ್ಪಿಸಿಕೊಳ್ಳಲು ಹೊರಟು ಅವನ ಹಾಗೆಯೇ ತಲೆಕೆಟ್ಟಿರುವ ಇನ್ನೊಬ್ಬ ನರಪೇತಲನ ಕೈಗೆ ಸಿಕ್ಕಬೇಕೇ ನಾನು ! ಇದು ಸರ್ವಥಾ ಕೂಡದು.'

ಹುಂಜ ಓಡಿಯೇ ಓಡಿತು - ತತ್ವಶಾಸ್ತ್ರಿ ಅದರ ಬೆನ್ನಟ್ಟಿ ಏದುಸಿರು ಬಿಡುತ್ತಾ ಹೊರಟ. ಇನ್ನೇನು ಅದು ಅವನ ಕೈಗೆ ಸಿಕ್ಕಿತು ಎನ್ನುವಷ್ಟರಲ್ಲಿ ಅದು ರೆಕ್ಕೆ ಬಡಿಯುತ್ತಾ ಹತ್ತಿರದಲ್ಲೇ ರಸ್ತೆ ಬದಿಯಲ್ಲಿ, ದಿಮ್ಮಗೆ ನೆಟ್ಟ ಪ್ರತಿಮೆಯ ತಲೆಯ ಮೇಲಕ್ಕೆ ಹಾರಿಹೋಗಿ ನಿಮಿರಿ ನಿಂತಿತು. ಅದು ಬೇರೆ ಯಾರ ಪ್ರತಿಮೆಯೂ ಅಲ್ಲ - ಸಾಕ್ಷಾತ್ ಅಥಿನೆ ದೇವತೆಯದು.

'ಎಲಾ, ಕರ್ಮಭ್ರಷ್ಟ ಮುಂಡೇದೆ !' ಎಂದು ತತ್ವಜ್ಞ ಕನಲಿದ. ಧರ್ಮಲಂಡರನ್ನು ದಂಡಿಸಬಯಸುವ ಕ್ರೂರ ನಿಷ್ಠೆಯ ಧರ್ಮಾಧಿಕಾರಿಯಂತೆ ಅವನು ಚಡಪಡಿಸಿದ. ಅವನ ಸಹಜ ಮಾನವೀಯತೆ 'ಬೇಡ, ಆ ಕೋಳಿ ತಂಟೆಗೆ ಹೋಗಬೇಡ' ಎನ್ನುತ್ತಿದ್ದರೂ ಕುತರ್ಕಕ್ಕೆ ಇಳಿದ ಅವನು ಯೋಚಿಸಿದ: 'ನಿನ್ನ ಈ ಭ್ರಷ್ಟತನಕ್ಕೆ ಮರಣವೇ ತಕ್ಕುದು. ನಿನ್ನನ್ನು ಹಿಡಿದು ಬಲಿ ಹಾಕುವುದೇ ನ್ಯಾಯ.'

ತತ್ವಶಾಸ್ತ್ರ ಪಂಡಿತ ಮೆಟ್ಟಿಂಗಾಲಿನಲ್ಲಿ ನಿಂತು, ತಿನುಕುತ್ತಾ ಪ್ರತಿಮೆಯ ತಲೆಯತ್ತ ಕೈಚಾಚಿದ. ಮೇಲಕ್ಕೆ ನೆಗೆದ, ಕುಪ್ಪಳಿಸಿ ದೇಕಿದ, ಅವಲಕ್ಷಣವಾಗಿ ಅಭಂಗ ನೃತ್ಯ ಮಾಡಿದ - ಎಲ್ಲವೂ ವ್ಯರ್ಥ.

'ಎಲವೋ, ಕೃತ್ರಿಮ ತತ್ವಶಾಸ್ತ್ರಿ !' ಕೋಳಿ ಸೊಗಸಾದ ಅಪ್ಪಟ ಗ್ರೀಕ್ ಭಾಷೆಯಲ್ಲಿ ಮಾತನಾಡಿತು. 'ವೃಥಾ ಶ್ರಮಪಟ್ಟು ಹೆಣವಾಗಬೇಡ; ನೀನೆಷ್ಟೇ ಹಾರಾಡಿದರೂ ಒಂದು ಕೋಳಿ ಮರಿ ಹಾರಬಲ್ಲ ಎತ್ತರಕ್ಕೆ ಏರಬಲ್ಲೆಯಾ ? ಯಾಕೆ ?? ಓಹೋ !! ನನಗೂ ಮಾತನಾಡಲು ಬರುತ್ತದೆಂದು ಆಶ್ಚರ್ಯವಾಯಿತೇ? ಅದು ಸರಿ.... ನನ್ನ ಗುರುತಾಗಲಿಲ್ಲವೇ ನಿನಗೆ ? ನಾನು, ಆ ನಿನ್ನ ಸ್ನೇಹಿತ ಪಂಡಿತ ಗೋರ್ಗಿಯಾಸ್‌ನ ಮನೆಯ ಕೋಳಿ, ತಿಳಿಯಿತೇ ? ನನಗೆ ನೀನ್ಯಾರೆಂದು ಗೊತ್ತು. ನೀನೊಂದು, ದೇಹವಿಲ್ಲದ ನೆರಳು - ಸತ್ತವರ ನೆರಳು; ಗುರು ಸತ್ತ ಮೇಲೆ ಹಿಂದುಳಿದ ನಿನ್ನಂಥ ಶಿಷ್ಯರ ಪಾಡು, ನಾಯಿಪಾಡು. ನಿನ್ನಂಥ ಪಂಡಿತರು ಈಗ ಕೇವಲ ಪುಟಾಣಿ ಮಕ್ಕಳನ್ನು ಬೆದರಿಸಬಲ್ಲ 'ಗೊಗ್ಗಯ್ಯ'ಗಳೇ ಸರಿ. ನಿನ್ನ ಗುರು, ದಿವ್ಯಸ್ಫೂರ್ತಿಯ ಕನಸಿಗ - ಅವನು ಸತ್ತು, ನಿನ್ನಂತೆಯೇ ರೆಕ್ಕೆ ತರಿದ ಶಿಷ್ಯರನ್ನು ಬಿಟ್ಟುಹೋಗಿದ್ದಾನೆ. ನೀವೆಲ್ಲ ಸೇರಿ ಆ ಉದಾತ್ತ ಕನಸುಗಾರನ ಕಾವ್ಯಾದರ್ಶವನ್ನು 'ಬೆದರುಗೊಂಬೆ' ಮಾಡಿ ಕೂರಿಸಿದ್ದೀರಿ - ಕುರುಡು ನಂಬಿಕೆಯ ವಿಕಟಾಕೃತಿ ಮಾಡಿರುವಿರಿ.'

'ಮುಚ್ಚೋ ಬಾಯಿ, ಖೊ ಖೊ ಖೋ ಕೋಳಿ ! ಪ್ರಕೃತಿಯ ಆದರ್ಶರೂಪದ ವಿಧಿಯಂತೆ (Idea) (ಮೂಲದಲ್ಲಿನ Idea ಎಂಬ ಶಬ್ದ ಪ್ಲೇಟೋವಿನ ತತ್ವಕ್ಕೆ ಸಂಬಂಧಿಸಿದುದು. 'ಯಾವ ವರ್ಗದಲ್ಲಾದರೂ ಇರುವ ಪ್ರತ್ಯೇಕ ವಸ್ತುಗಳು ಯಾವುದರ ಅಪೂರ್ಣ ಪ್ರತಿಗಳಾಗಿರುತ್ತವೆಯೋ ಆ ಚಿರಸ್ಥಾಯಿಯಾದ ಆದರ್ಶರೂಪ.' ಪರಿಷ್ಕೃತ ಇಂ.ಕನಿ. ೧೯೯೬, ಪು. ೨೦೦೮). ಮಾತುಬಾರದ ಪ್ರಾಣಿವರ್ಗದ ನೀನು, ಬಾಯಿ ಮುಚ್ಚಿಕೊಂಡಿರಬೇಕು, ತಿಳಿಯಿತಾ ?'

'ನಾನು ಮಾತನಾಡಿಯೇ ತೀರುತ್ತೇನೆ ಕಣೊ ! ನೀನು ಮಾತ್ರ 'ವಿಧಿ', 'ಆದರ್ಶ' ಅಂತ ಒರಲುತ್ತಾ ಇರು... ಇಲ್ಲಿ ಕೇಳಯ್ಯಾ. ನಾನು ಆ ನಿನ್ನ 'ಪ್ರಕೃತಿಯ ಆದರ್ಶರೂಪ'ದ ಅಪ್ಪಣೆ ಇಲ್ಲದೆಯೂ ಮಾತನಾಡಬಲ್ಲೆ.... ಹಾಗೆ ಮಾತನಾಡಲು ನನಗೆ ವ್ಯಕ್ತಿಯಾಗಿ ನನ್ನ ಸ್ವಂತ ಶಕ್ತಿಯೇ ಸಾಕು. ವಾಗ್ಮಿತ ಕಲೆ ಮೇಲೆ ನೀವು ನಡೆಸುತ್ತಿದ್ದ ಒಣ ಚರ್ಚೆ ಕೇಳಿ ಕೇಳಿ ತಲೆ ಚಿಟ್ಟು ಹಿಡಿದಿದೆ. ನಿಮ್ಮ ವಾಗ್ಮಿತ ಕಲೆ ಅಂದರೇನು ? ಕೇವಲ ಮಾತನಾಡುವ ಸಲುವಾಗಿ ಮಾತನಾಡೋದು, ಅಷ್ಟೇ ತಾನೇ ? ನಿಮ್ಮ ಚರ್ಚೆ ಕೇಳಿ ನಾನೂ ಸಹ ಆ ನಿಮ್ಮ ಶಬ್ದಗಳ 'ವ್ಯಾಪಾರ' ಕಲಿತಿದ್ದೇನೆ.....'

'ಹೌದು.... ನೀನು ಇದನ್ನೆಲ್ಲಾ ಕಲಿಸಿದ ನಿನ್ನ ಯಜಮಾನನಿಗೆ ಮಾಡಿರುವ ಪ್ರತ್ಯುಪಕಾರವೆಂದರೆ ಅವನ ಅಧಿಕಾರ ಧಿಕ್ಕರಿಸಿ, ಹೇಳದೆ ಕೇಳದೆ, ಅವನ ಮನೆಯಿಂದ

ಓಡಿ ಹೋಗ್ತಾ ಇದೀಯೆ, ಅಲ್ಲವಾ ?'

'ಓ ಬಿಡಯ್ಯ, ಆ ನನ್ನ ದಣಿ, ಗೋರ್ಗಿಯಾಸ್ ನಿನ್ನ ಹಾಗೆಯೇ ಒಬ್ಬ ಹುಚ್ಚ - ಖುಷಿಗಾರನಾದರೂ ಅವನ ಜೊತೆ ಬಾಳುವುದು ಸಾಧ್ಯವಿಲ್ಲ, ಕಣಯ್ಯಾ. ಅವನು ಎಲ್ಲವನ್ನೂ ರುಜುವಾತು ಮಾಡೋಕೆ ಹೊರಡುತ್ತಾನೆ - ಅದನ್ನು ಸಹಿಸೋಕೆ ಆಗಲ್ಲ - ಗಲಿಬಿಲಿಯಾಗುತ್ತದೆ - ಇಡೀ ಲೋಕದ ಸಕಲವನ್ನೂ ಹಾಗೆ ರುಜುವಾತು ಮಾಡಿ ತೋರಿಸುತ್ತಾ ಹೊರಟರೆ ಜೀವನ ಬರಡಾಗುತ್ತದೆ - ಎಲ್ಲದಕ್ಕೂ ಕಾರ್ಯ ಕಾರಣ ಸಂಬಂಧವನ್ನೇ ಶೋಧಿಸುತ್ತಾ ಇದ್ದರೆ ಕೊನೆಯಲ್ಲಿ ನಿನಗೆ ಸಿಕ್ಕುವುದು ವಸ್ತುಗಳ ರೇಖಾಗಣಿತ ಮಾತ್ರ, ತಿರುಳಲ್ಲ. ಇಡೀ ಜೀವನವನ್ನೇ ಒಂದು ಸಮೀಕರಣಕ್ಕೆ ಇಳಿಸಿದರೆ, ಅದು ರುಂಡ ಕೈಕಾಲುಗಳಿಲ್ಲದ ಬರಿಯ ಮುಂಡವಾಗಿ ಉಳಿಯುತ್ತದೆ. ತೆಪ್ಪಗೆ ನಿನ್ನ ದಾರಿ ಹಿಡಿದುಕೊಂಡು ಹೋಗಯ್ಯಾ, ಸಾಕು. ಯಾಕೆಂದರೆ..... ನಾನಾದರೋ ಇದೇ ರೀತಿ ೭೦ ದಿನ ಅಹೋರಾತ್ರಿ ಮಾತನಾಡುತ್ತಿರಬಲ್ಲೆ. ನಿನಗೆ ನೆನಪಿರಲಿ - ನಾನು ಕುತರ್ಕ ಪಂಡಿತ ಗೋರ್ಗಿಯಾಸ್‌ನ ಮನೆಯ ವಾಚಾಳಿ ಕೋಳಿ !!'




'ಹಾಗಾದರೆ, ನೀನು ಸಹ ಕುತರ್ಕಿ, ಒಬ್ಬ ಧರ್ಮ ದ್ರೋಹಿ. ಆದ್ದರಿಂದ ನೀನು ಮಹಾದೇವ ಝ್ಯೂಸ್‌ನ ಇಚ್ಛೆಯಂತೆ, ಸಾಯಲೇಬೇಕು... ಯಾಕೆ ಸುಮ್ಮನೆ ಎಗರಾಡುತ್ತೀಯೆ - ಸೋಲು ಒಪ್ಪಿಕೊಂಡು ಕೆಳಗೆ ಇಳಿದು ಬಾ.'

'ನೀನು ತಿಪ್ಪರಲಾಗ ಹಾಕಿದರೂ ಅದು ಸಾಧ್ಯವಿಲ್ಲ.... ನನ್ನನ್ನು ಹಿಡಿಯುವಂಥ ಅಗ್ಗದ ಆದರ್ಶ ಪುರುಷ ಇನ್ನೂ ಹುಟ್ಟಿಲ್ಲ..... ಅದು ಸರಿ... ಇದೆಲ್ಲಾ ಏನು ರಗಳೆ ? ನಿನಗೆ ಯಾಕಿಂಥ ಕ್ರೌರ್ಯ ? ನನ್ನನ್ನು ಯಾಕೆ ಅಟ್ಟಿಸಿಕೊಂಡು ಬರ್ತಿದ್ದೀಯೆ ?'

'ಯಾಕೆಂದರೆ..... ಸಾಕ್ರಟೀಸ್ ಸಾಯುವ ಮುನ್ನ, ಒಂದು ಕೋಳಿಯನ್ನು ವೈದ್ಯ ದೇವತೆಗೆ ಬಲಿಕೊಡಬೇಕು ಅಂತ ಹೇಳಿದ್ದ. ಈಸ್ಕ್ಯುಲಾಪಿಯಸ್ ದೇವತೆಯ ಅನುಗ್ರಹದಿಂದಲೇ ಅವನು, ಸಾವಿನ ಮೂಲಕ, ಜೀವನವೆಂಬ ಮಹಾ ರೋಗರುಜಿನದಿಂದ ಮುಕ್ತನಾಗಿರಲು ಸಾಧ್ಯವಾಯಿತು....'

'ಇದನ್ನೆಲ್ಲಾ ಸಾಕ್ರಟೀಸ್ ಹೇಳಿದನಾ ?'

'ಇಲ್ಲಾ..... ಕೋಳಿ ಬಲಿ ಕೊಡುವ ವಿಷಯ ಮಾತ್ರ ಹೇಳಿದ್ದ.'

'ಓಹೋ.... ಹಾಗಾದರೆ... ಉಳಿದ ಎಲ್ಲಾ ಈ ಜೊಳ್ಳು ಮಾತುಗಳು ನಿನ್ನ ಕಲ್ಪನೆ, ಊಹೆ, ತಾನೇ ?'

'ಅವನ ಮಾತಿಗೆ ಇನ್ನೇನು ತಾನೆ ಅರ್ಥ ?'

'ಅವನ ಮಾತಿಗೆ ಇನ್ನೂ ಹೆಚ್ಚು, ಮಾನವೀಯವಾದ ಅರ್ಥ ಇದೆ ಕಣೋ ಬೆಪ್ಪ! ಅದರಲ್ಲಿ ರಕ್ತಪಾತ, ಪ್ರಾಣಹಿಂಸೆಗಳ ಸೋಂಕಿಲ್ಲ... ಯಾವ ದೇವರಲ್ಲಿ ಸಾಕ್ರಟೀಸ್‌ಗೆ ಲವಶೇಶವೂ ನಂಬಿಕೆ ಇರಲಿಲ್ಲವೋ ಅಂಥ ದೇವರ ತೃಪ್ತಿಗೋಸ್ಕರ ನನ್ನನ್ನು ಕೊಲ್ಲುವುದು ದೇವತೆಗಳಿಗೆ ಅವಮಾನ ಮಾಡಿದಂತಲ್ಲವೆ ? ವೃಥಾ ನನ್ನ ಪ್ರಾಣಹಾನಿ !! ನಾನು ಜೀವಂತವಾಗಿರುವ ಒಂದು ಅಮಾಯಕ ಪ್ರಾಣಿ. ಸಾವಿನ ಘೋರ ರಹಸ್ಯದಲ್ಲಿ ಎಂಥೆಂಥ ನೋವು, ಸಂಕಟಗಳು ಅಡಗಿವೆ ಎಂಬ ಕಲ್ಪನೆ ನನಗಿಲ್ಲ....'

'ನೀನು ಬಲಿಯಾಗಬೇಕೆಂಬುದೇ ದೇವರ ಇಚ್ಛೆ.

'ಸಾಕ್ರಟೀಸ್ ಕೇವಲ ವ್ಯಂಗ್ಯಕ್ಕಾಗಿ ಹಾಗೆ ಹೇಳಿದ್ದ ಅಂತ ನಿನಗೆ ತಿಳಿಯಲಿಲ್ಲವೇ ? ಒಬ್ಬ ಅಸಾಧಾರಣ ಪ್ರತಿಭಾವಂತನ ಪ್ರಶಾಂತ, ಕೋಮಲ ವ್ಯಂಗ್ಯ ಅದು. ಅವನೊಬ್ಬ ಉದಾತ್ತ ಹೃದಯಿ. ಯಾರಿಗೂ ಅಪಾಯವಿಲ್ಲದಂತೆ, ಅವನು ವೈಚಾರಿಕತೆಯನ್ನೂ ಜನಸಾಮಾನ್ಯರ ಮುಗ್ಧ ಮೂಢನಂಬಿಕೆಗಳನ್ನೂ ಸಮನ್ವಯಗೊಳಿಸುವ ಸಂತೋಷದ ಕ್ರೀಡೆಯಲ್ಲಿ ತೊಡಗಿರುತ್ತಿದ್ದ ಅಲ್ಲವೇ ? ಸಾಕ್ರಟೀಸ್‌ನಂಥ ಸೃಜನಶೀಲ ರೆಲ್ಲರೂ ಹೊಸರೀತಿಯ ಪಾರಮಾರ್ಥಿಕ ಜೀವನಕ್ರಮ ವೊಂದನ್ನು ಸೂಚಿಸುವಾಗ ಸಾಂಕೇತಿಕ ಭಾಷೆಯಲ್ಲಿ ಮಾತನಾಡಬಲ್ಲರು. ಜೀವನದ ಅನೂಹ್ಯ ರಹಸ್ಯಗಳನ್ನು ಸ್ವಂತ ಅನುಭವದ ಮೂಲಕ ಗ್ರಹಿಸುತ್ತಾ ಅವುಗಳ ಅನನ್ಯ ಅಂತಃಸತ್ವವನ್ನು ಗೌರವಿಸುತ್ತಾ ಅವರು ತಮ್ಮ ಅನುಭವಗಳಿಗೆ ಕಾವ್ಯಾತ್ಮಕ ಅಭಿವ್ಯಕ್ತಿ ನೀಡಬಲ್ಲರು... ಪರಮಾತ್ಮನ ದೈವಿಕ ಪ್ರೇಮವು ಅಂತರಾತ್ಮವನ್ನು ಸಂಬೋಧಿಸುವ ರೀತಿ ಇದು. ಆದರೆ ಅಂಥವರು ಈ ಉನ್ನತ ಕ್ರೀಡೆಯನ್ನು ತ್ಯಜಿಸಿ ಲೋಕ ಬೋಧನೆಗೆ ಹೊರಟಾಗ ಅವರ ಪ್ರವಚನ ಶೈಲಿ ಎಷ್ಟು ಕಠಿಣವೂ ಸಂಕ್ಷಿಪ್ತವೂ ಆಗುತ್ತದೆ, ಅವರ ನೀತಿ ಸೂತ್ರಗಳು ತತ್ವೋಕ್ತಿಗಳು ಹೇಗೆ ಅನವಶ್ಯಕ ಆಲಂಕಾರಿಕತೆಯನ್ನು ಕಳಚಿಕೊಳ್ಳುತ್ತವೆಂಬುದನ್ನು ನೀನು ಗಮನಿಸಬೇಕು...'

'ಎಲೌ, ಗೋರ್ಗಿಯಾಸ್‌ನ ಕೋಳಿ ಹುಂಜವೇ ? ನೀನು ನಾಲಿಗೆ ಬಿಗಿಹಿಡಿದು, ಸಾಯಲು ಸಿದ್ಧನಾಗು.'

'ಎಲೌ ಅಯೋಗ್ಯ ಶಿಷ್ಯನೇ? ಬಾಯಿ ಮುಚ್ಚಿಕೊಂಡು ತೊಲಗಾಚೆ.... ನೀವೆಲ್ಲರೂ ಒಂದೇ ಸ್ವಭಾವದವರು... ಪ್ರತಿಭಾವಂತ ಗುರುವಿನ ದಡ್ಡ ಶಿಷ್ಯರು... ಅನನ್ಯ ಸಾಧಾರಣ ಪ್ರತಿಭೆಯ ಪರಮೋತ್ಕೃಷ್ಟ ಆತ್ಮಾವಲೋಕನದ ಸ್ವಗತವನ್ನು ಕೇಳಿ ಅರಿಯಬಲ್ಲ ಯೋಗ್ಯತೆ ನಿಮಗೆಲ್ಲಿದೆ ? ಆತನ ಹಾಗೂ ನಿಮ್ಮ ಭ್ರಮಾಕಲ್ಪನೆಗಳ ಮೂಲಕ ನೀವು ಅವನ ಸಿದ್ಧಾಂತಗಳನ್ನು ಕಲಬೆರಕೆ ಮಾಡಿ ಅವುಗಳನ್ನು ನೀರಸ ಸೂತ್ರಗಳಿಗೆ ಇಳಿಸಿ ಅವನ ಆತ್ಮದ ಸಾರಸರ್ವಸ್ವವನ್ನೂ ಚಿರಸ್ಥಾಯಿಗೊಳಿಸಬಹುದೆಂದು ಭ್ರಮಿ ಸುತ್ತಿರುವಿರಿ.... ಅವನನ್ನು ಒಬ್ಬ ಆರಾಧ್ಯದೇವತೆಯನ್ನಾಗಿಸಲು ನೀವು ಅವನ ಮೃತದೇಹವನ್ನು ಸುಗಂಧ ದ್ರವ್ಯಗಳಿಂದ ಚೆನ್ನಾಗಿ ಸಂಸ್ಕರಿಸಿ 'ಮಮ್ಮೀಕರಿಸಲು' ಹೆಣಗಾಡುತ್ತಿದ್ದೀರಿ. ಒಂದು ಉತ್ತಮ ಪರಿಕಲ್ಪನೆಯನ್ನು ನಿರ್ಜೀವಗೊಳಿಸಿ, ಒಂದು ಸೂಕ್ಷ್ಮ ಚಿಂತನೆಯನ್ನು ರಕ್ತಪಾತದ ಸಾಧನವನ್ನಾಗಿ ಬಳಸ ಹೊರಟಿರುವಿರಿ.... ನೀವು ಗೊಡ್ಡು ಸಂಪ್ರದಾಯದ ಮನುಷ್ಯ ಪ್ರತೀಕಗಳು. ಸಂತನೂ ಮೇಧಾವಿಯೂ ಆದ ಮಹಾತ್ಮನ ಕೊನೆಯ ಮಾತಿಗೆ ನಿಮ್ಮ ಮೊದಲ ಪ್ರತಿಕ್ರಿಯೆಯಾಗಿ ನೀನು ಅಮಾಯಕ ಕೋಳಿಯನ್ನು ಕೊಲ್ಲಲು ಹೊರಟಿರುವೆ... ಒಂದು ವೇಳೆ ಸಾಕ್ರಟೀಸ್ ಏನಾದರೂ ತನ್ನ ಜನರ ಮೂಢನಂಬಿಕೆಗಳನ್ನು ಇನ್ನಷ್ಟು ಬೆಳೆಸಿ ಸ್ಥಿರಗೊಳಿಸಲೆಂದು ಜನ್ಮ ತಾಳಿದ್ದರೆ, ಅವನು ಹೀಗೆ ವೈಚಾರಿಕ ಚಿಂತನೆಯ ಹುತಾತ್ಮನಾಗಿ ಸಾಯುತ್ತಿರಲಿಲ್ಲ, ಸರ್ವಶ್ರೇಷ್ಠ ತಾತ್ವಿಕ ಸಂತನೂ ಆಗುತ್ತಿರಲಿಲ್ಲ. ಅವನಿಗೆ ಈಸ್ಕ್ಯುಲಾಪಿಯಸ್ ಮುಂತಾದ ದೇವರು ದಿಂಡರಲ್ಲಿ ನಂಬಿಕೆ ಇರಲಿಲ್ಲ.... ಅವನು ಕೇವಲ ಅಗ್ಗದ ಜನಾನುರಾಗ ಗಿಟ್ಟಿಸಲು, ಕೋಳಿಯ ಮಾತಿರಲಿ, ಒಂದು ನೊಣವನ್ನು ಸಹ ಕೊಲ್ಲಲು ಬಿಡುತ್ತಿರಲಿಲ್ಲ...'

'ನನಗೆ ನನ್ನ ಗುರುವಿನ ಕೊನೆಯ ವಾಕ್ಯವೇ ಅಂತಿಮ ಸಾಕ್ಷಿ. ಬೇಗ ಇಳಿದು ಬಾ, ನಾನು ನಿನ್ನನ್ನು ಕೊಲ್ಲಬೇಕು...'

ಕ್ರಿಟೋ ಅತ್ತಿತ್ತ ಹುಡುಕಿ ಒಂದು ಕಲ್ಲನ್ನೆತ್ತಿ ಹುಂಜನ ತಲೆಯ ಕೆಂಜುಟ್ಟಿಗೆ ಗುರಿ ಇಟ್ಟು ಬೀಸಿದ. ಹುಂಜನ ತಲೆಯಿಂದ ರಕ್ತ ಚಿಮ್ಮಿ ಹರಿಯಿತು. ಗೋರ್ಗಿಯಾಸ್‌ನ ಕೋಳಿ ಜ್ಞಾನ ತಪ್ಪಿ ಕೆಳಗುರುಳಿತು. ಕೆಳಗೆ ಬಿದ್ದು ಸಾಯುವಾಗ ಅದು ಕಿರಿಚಿಕೊಂಡಿತು :

'ಖೊ ಖೊ ಖೊ ! ವಿಧಿ ಬರೆದಂತೆ ನಡೆಯಲಿ. ನಡೆದಷ್ಟು ದಿನ ಮೂಢರ ಅಧಿಕಾರ ನಡೆಯಲಿ !'

ಅಧೀನ ದೇವತೆಯ ಕಂದು ಕಲ್ಲಿನ ಹಣೆಯ ಮೇಲಿಂದ ಕೋಳಿಯ ರಕ್ತ ತೊಟ್ಟಿಕ್ಕುತ್ತಿತ್ತು.

ಅನು : ಎಚ್. ಕೆ. ರಾಮಚಂದ್ರಮೂರ್ತಿ
೨೦೯, ೧೧ನೇ 'ಬಿ' ಅಡ್ಡರಸ್ತೆ, ೨೯ನೇ ಮೇಯಿನ್, ಜೆ. ಪಿ. ನಗರ.
ಬೆಂಗಳೂರು-೫೬೦ ೦೭೮



# ಶ್ಯಾಮ ಪ್ರಸಾದ ಮುಖರ್ಜಿ

*ರಾಷ್ಟ್ರೀಯ ನಾಯಕರಾಗಿದ್ದ ಶ್ರೀ ಶ್ಯಾಮಪ್ರಸಾದ ಮುಖರ್ಜಿಯವರ ಜನ್ಮ ಶತಮಾನೋತ್ಸವವನ್ನು ಈ ವರ್ಷ ಆಚರಿಸಲಾಗುತ್ತಿದೆ. ಆಗಸ್ಟ್ ಕಡೆಯ ವಾರದಲ್ಲಿ ದೆಹಲಿಯ ರಾಷ್ಟ್ರೀಯ ಪತ್ರಾಗಾರದಲ್ಲಿ ಈ ಸಂಬಂಧವಾಗಿ ಒಂದು ಪ್ರದರ್ಶನವನ್ನು ಏರ್ಪಡಿಸಲಾಗಿತ್ತು. ಬಹುಶಃ ಇನ್ನು ಮುಂದೆ ಆ ಪ್ರದರ್ಶನವನ್ನು ಬೇರೆ ಬೇರೆ ರಾಜ್ಯಗಳಲ್ಲಿ ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಲಾಗುತ್ತದೆಯೆಂಬ ನಿರೀಕ್ಷೆ ಇದೆ. ದೆಹಲಿಯಲ್ಲಿ ಪ್ರದರ್ಶನಕ್ಕಿರಿಸಲಾಗಿದ್ದ ಕೆಲವು ಕಾಗದ-ಪತ್ರಗಳನ್ನು ಈ ಲೇಖನದಲ್ಲಿ ಬಳಸಿಕೊಳ್ಳಲಾಗಿದೆ.*

**ತ**ಮ್ಮ ೩೩ನೆಯ ವಯಸ್ಸಿನಲ್ಲಿ ಕಲ್ಕತ್ತಾ ವಿಶ್ವವಿದ್ಯಾನಿಲಯದ ಉಪಕುಲಪತಿಯಾಗಿ ನೇಮಕಗೊಂಡ ಶ್ಯಾಮಪ್ರಸಾದರು ಎರಡು ಅವಧಿಗಳನ್ನು ಪೂರೈಸುತ್ತಿರುವಾಗಲೇ ಬೆಂಗಳೂರಿನ ಭಾರತೀಯ ವಿಜ್ಞಾನ ಸಂಸ್ಥೆಯ ಆಡಳಿತ ಮಂಡಲಿಯ ಸದಸ್ಯರಾಗಿದ್ದು ೧೯೩೫ರಲ್ಲಿ. ಇಂದು ಜೀವಂತವಾಗಿದ್ದರೆ ಅವರು ಶತಾಯುಷಿಗಳಾಗಿರುತ್ತಿದ್ದರು. ೧೯೨೪ರಲ್ಲಿ ತೀರಿಕೊಂಡ ಅವರ ತಂದೆ ಆಶುತೋಷ್ ಮುಖರ್ಜಿ ಬಹುಮುಖದ ಪ್ರತಿಭಾವಂತರೆಂದು ಖ್ಯಾತಿಗಳಿಸಿದ್ದವರು. ಅಂತಹ ತಂದೆಯ ಮಗನಲ್ಲದಿದ್ದರೆ ಶ್ಯಾಮಪ್ರಸಾದರು ಅಷ್ಟು ಚಿಕ್ಕ ವಯಸ್ಸಿನಲ್ಲಿ ಉಪಕುಲಪತಿಗಳಾಗುತ್ತಿದ್ದರೇ ಎಂಬುದು ಈಗ ಗೌಣವಾದ ವಿಷಯ. ಕಾಂಗ್ರೆಸ್ ಪಕ್ಷದ ಅಭ್ಯರ್ಥಿಯಾಗಿ ಅವರು ಬಂಗಾಳದ ಶಾಸನ ಪರಿಷತ್ತಿಗೆ ಕಲ್ಕತ್ತಾ ವಿಶ್ವವಿದ್ಯಾನಿಲಯದ ಪ್ರತಿನಿಧಿಯಾಗಿ ಆಯ್ಕೆಗೊಂಡದ್ದು ೧೯೨೯ರಲ್ಲಿ. ಎಲ್ಲ ಶಾಸನಸಭೆಗಳಿಂದಲೂ ಹೊರಬರಬೇಕೆಂದು ಕಾಂಗ್ರೆಸ್ ತೀರ್ಮಾನಿಸಿದಾಗ ೧೯೩೦ರಲ್ಲಿ ತಮ್ಮ ರಾಜಿನಾಮೆ ನೀಡಿ ಮತ್ತೆ ಅದೇ ವರ್ಷ ಸ್ವತಂತ್ರ ಅಭ್ಯರ್ಥಿಯಾಗಿ ಪುನರಾಯ್ಕೆಗೊಂಡರು. ಪಕ್ಷಕ್ಕಿಂತಲೂ ಸ್ವಂತದ ವರ್ಚಸ್ಸು ಹಾಗೂ ಸ್ಥಾನ ಮುಖರ್ಜಿಯವರಿಗೆ ಮುಖ್ಯವಾದದ್ದು ಅದೇ ಮೊದಲು ಮತ್ತು ಕಡೆ. ಏಕೆಂದರೆ ೧೯೩೭ರಲ್ಲಿ ಬಂಗಾಳದ ವಿಧಾನಸಭೆಗೆ ಕಲ್ಕತ್ತ ವಿಶ್ವವಿದ್ಯಾನಿಲಯ ಕ್ಷೇತ್ರದಿಂದ ಪಕ್ಷೇತರರಾಗಿ ಆಯ್ಕೆಯಾದರು ಮತ್ತು ೧೯೩೯ರ ವೇಳೆಗೆ ಹಿಂದು ಮಹಾಸಭಾದ ತೆಕ್ಕೆಗೆ ಸೇರಿಕೊಂಡರು.

ಬಂಗಾಲಿ ಸಾಹಿತ್ಯದಲ್ಲಿ ಸ್ನಾತಕೋತ್ತರ ಪದವಿಯನ್ನು ತಮ್ಮ ೨೧ನೆಯ ವಯಸ್ಸಿನಲ್ಲಿ ಪಡೆದುಕೊಂಡ ಶ್ಯಾಮಪ್ರಸಾದರು ವಿಶ್ವವಿದ್ಯಾನಿಲಯದಲ್ಲಿ ವಾಗ್ಮಿಗಳಾಗಿ ಮತ್ತು ಶಿಕ್ಷಣ ತಜ್ಞರಾಗಿ ವಿಶೇಷವಾಗಿ ಬೆಳಕಿಗೆ ಬಂದರು. ೧೯೩೯ರಲ್ಲಿ ವೀರ ಸಾವರ್ಕರ್ ಅವರ ಅಧ್ಯಕ್ಷತೆಯಲ್ಲಿ ಹಿಂದೂ ಮಹಾಸಭಾದ ೨೧ನೆಯ ಅಧಿವೇಶನವು ಕಲ್ಕತ್ತೆಯಲ್ಲಿ ಜರುಗಿದಾಗ ಅದರಲ್ಲಿ ಹುಮ್ಮಸ್ಸಿನಿಂದ ಪಾಲ್ಗೊಂಡ ಮುಖರ್ಜಿಯವರು ಮಾರನೆಯ ವರ್ಷವೇ ಮಹಾಸಭಾದ ಕಾರ್ಯೋನ್ಮುಖ ಅಧ್ಯಕ್ಷರಾದರು. ೧೯೪೪ರವರೆಗೆ ಈ ಸ್ಥಾನದಲ್ಲಿದ್ದು ೧೯೪೬ರಲ್ಲಿ ಶ್ಯಾಮಪ್ರಸಾದರು ಸಂವಿಧಾನ ರಚನಾ ಸಭೆಗೆ ಚುನಾಯಿತರಾದ ನಂತರ ೧೯೪೭ರಲ್ಲಿ ನೆಹರು ಸರ್ಕಾರದಲ್ಲಿ ಉದ್ಯಮ ಹಾಗೂ ಸರಬರಾಜು ಖಾತೆಯ ಸಚಿವರಾದರು.

೧೯೪೨ರ ಮಾರ್ಚ್ ೩೦ರಂದು ಕ್ರಿಪ್ಸ್ ಆಯೋಗದ ಮುಂದೆ ಹಾಜರಾಗಿ ಶ್ಯಾಮಪ್ರಸಾದರು ಮುಖ್ಯವಾಗಿ ಎತ್ತಿದ ಒಂದು ಪ್ರಶ್ನೆಯು ಅನೇಕ ರಾಜ್ಯಗಳು ಭಾರತದ ಕೇಂದ್ರದ ವ್ಯಾಪ್ತಿಗೊಳಪಡುವ ನಿಬಂಧನೆಗಳಿಗೆ ಸಂಬಂಧಿಸಿದ್ದು. ರಾಜ-ಮಹಾರಾಜರು ತಮ್ಮ ಸಂಸ್ಥಾನಗಳನ್ನು ಕೇಂದ್ರದ ವ್ಯಾಪ್ತಿಗೆ ಒಳಪಡಿಸದಿದ್ದರೆ ಅಖಂಡ ಭಾರತದ ಗತಿ ಏನಾದೀತೆಂಬ ಭೀತಿ ಮುಖರ್ಜಿಯವರಿಗಿತ್ತು. ಹಿಂದು ಮಹಾಸಭಾದ ಮುಖವಾಣಿಯಾಗಿ ಒಂದು ಪತ್ರಿಕೆಯನ್ನು ಆರಂಭಿಸಬೇಕೆಂಬ ಅವರ ಉದ್ದೇಶಕ್ಕೆ ಅಂದಿನ ಬ್ರಿಟಿಷ್ ಸರ್ಕಾರ ಅಡ್ಡಗಾಲು ಹಾಕಿದಾಗ ಅದನ್ನು ಹಿಮ್ಮೆಟ್ಟಿಸಿ ೧೯೪೪ರ ಅಕ್ಟೋಬರ್‌ನಲ್ಲಿ 'ದಿ ನ್ಯಾಷನಲಿಸ್ಟ್' ಎಂಬ ಪತ್ರಿಕೆಯನ್ನು ಆರಂಭಿಸಿದರು. ಸ್ವಾರಸ್ಯದ ಸಂಗತಿಯೆಂದರೆ ಆ ಪತ್ರಿಕೆಯ ಪ್ರಕಾಶನದಲ್ಲಿ ಶ್ಯಾಮಪ್ರಸಾದರೊಡನೆ ಕೈಜೋಡಿಸಿದ್ದು ರಾಮನಾಥ ಗೋಯೆಂಕಾ. ಜಯಪ್ರಕಾಶ ನಾರಾಯಣರ 'ಸಂಪೂರ್ಣ ಕ್ರಾಂತಿ'ಯ ಸಂದರ್ಭದಲ್ಲಿ ಅವರ ಬೆಂಬಲಕ್ಕೆ ನಿಂತ 'ದಿ ಇಂಡಿಯನ್ ಎಕ್ಸ್‌ಪ್ರೆಸ್' ಇದೇ ಗೋಯೆಂಕಾ ಅವರ ಪತ್ರಿಕೆಯಾಗಿತ್ತು. 'ದಿ ನ್ಯಾಷನಲಿಸ್ಟ್' ಪತ್ರಿಕೆಯ ಆಕಾಂಕ್ಷೆಯನ್ನು ಶ್ಯಾಮಪ್ರಸಾದರು ಎಂ. ಆರ್. ಜಯಕರ್‌ಗೆ ಬರೆದ ಒಂದು ಪತ್ರದಲ್ಲಿ (೧೭-೪-೧೯೪೪) ಸ್ಪಷ್ಟಪಡಿಸಿದ್ದಾರೆ. ಪತ್ರಿಕೆಯ ಮೊದಲ ಸಂಚಿಕೆಗೆ ಸಂದೇಶವೊಂದನ್ನು ಕಳಿಸಬೇಕೆಂದು ಕೋರುತ್ತಾ ಜಯಕರ್‌ಗೆ ಸ್ಥೂಲವಾಗಿ ತಿಳಿಸಿದ್ದು ಇದು: ''ಭಾರತದ ಐಕ್ಯತೆಯ ಆಶಯವನ್ನು ಪ್ರತಿನಿಧಿಸುವ ನಮ್ಮ ಪತ್ರಿಕೆಯು ರಾಷ್ಟ್ರೀಯತೆಗೆ ಒತ್ತುಕೊಡುತ್ತದೆ. ಯಾವ ರಾಜ್ಯಗಳಲ್ಲಿ ಹಿಂದುಗಳು ಅಲ್ಪಸಂಖ್ಯಾತರಾಗಿದ್ದಾರೋ ಅಂತಹ ಪ್ರಾಂತ್ಯಗಳಲ್ಲಿ ಅವರು ಎದುರಿಸುವ ಸಮಸ್ಯೆಗಳು ಮತ್ತು ಅವರ ಅಗತ್ಯಗಳನ್ನು ವಿಶೇಷವಾಗಿ ಎತ್ತಿಹಿಡಿಯುವುದು ಪತ್ರಿಕೆಯ ಉದ್ದೇಶ.'' ೧೯೪೩ರ ಜನವರಿ ೧೭ರಂದು ಬಂಗಾಳದ ಅಂದಿನ ಮುಖ್ಯಮಂತ್ರಿ ಫಜಲುಲ್ ಹಕ್‌ಗೆ ಪತ್ರ ಬರೆದು ತಾಮಲುಕ್ ಜಿಲ್ಲೆಯ ಹಳ್ಳಿಗಳಲ್ಲಿ ನಾಗರಿಕರ ಆಸ್ತಿಪಾಸ್ತಿಯ ಲೂಟಿಯಾಗಿದ್ದುದನ್ನು ಅವರ ಗಮನಕ್ಕೆ ತಂದ ಶ್ಯಾಮಪ್ರಸಾದರು ಇಂತಹ ವಿಧ್ವಂಸಕ ಕೃತ್ಯಗಳನ್ನು ತಡೆಯಬೇಕೆಂದು ಆಗ್ರಹಪಡಿಸಿದ್ದರು. ಇದೇ ಸಂದರ್ಭದಲ್ಲಿ ಆಗಿನ ಕಾಂಗ್ರೆಸ್ ಅಧ್ಯಕ್ಷ ಅಬುಲ್ ಕಲಾಂ ಆಜಾದರನ್ನು ಸಾವರ್ಕರ್ ಅವರೊಂದಿಗೆ ಭೇಟಿಯಾದ ಮುಖರ್ಜಿಯವರು ಈ ವಿಷಯದ ಬಗ್ಗೆ ಚರ್ಚೆ ನಡೆಸಿದ್ದರು.

ನೆಹರು ಸಚಿವ ಸಂಪುಟದಲ್ಲಿದ್ದುಕೊಂಡು ತಮ್ಮ ಖಾತೆಗೆ ಹೆಚ್ಚಿನ ಗಮನ ನೀಡುವ ಸನ್ನಿವೇಶ ಮುಖರ್ಜಿಯವರಿಗೆ ಒದಗಿಬರಲಿಲ್ಲ. ಆಂತರಿಕ ರಾಜಕೀಯ ಸನ್ನಿವೇಶ ಹಾಗೂ ಸಂವಿಧಾನ ರಚನೆಯಲ್ಲಿ ತೊಡಗಿದ್ದ ಅಂದಿನ ಬಿಕ್ಕಟ್ಟುಗಳ ನಡುವೆ ಶ್ಯಾಮಪ್ರಸಾದರ ಹಿಂದು ಮಹಾಸಭಾ ಚಿಂತನೆಯು ಗಾಢವಾಗಿ ಬೆಳೆಯುತ್ತಿತ್ತು.

ನವೆಂಬರ್ ೧೯೪೯ರಲ್ಲಿ ಶ್ಯಾಮಪ್ರಸಾದರು ರಾಜೇಂದ್ರ ಪ್ರಸಾದರಿಗೆ ಒಂದು ಪತ್ರ ಬರೆದು ಖಾದಿ ಬಟ್ಟೆಯ ಮಾರಾಟವನ್ನು ಸರಿಯಾಗಿ ಯೋಜಿಸಬೇಕೆಂದು ಹೇಳಿದ್ದರು. ಅವರೇ ಐದು ತಿಂಗಳ ನಂತರ ನೆಹರುಗೆ ಪತ್ರ ಬರೆದು ತಮ್ಮ ಸಚಿವಸ್ಥಾನವನ್ನು ತ್ಯಜಿಸಿದಾಗ ತಮ್ಮ ಅಧೀನದಲ್ಲಿದ್ದ ಉದ್ಯಮ ವಿಭಾಗದ ತೊಡಕುಗಳನ್ನು ಮುಂದೆ ಮಾಡಲಿಲ್ಲ. ಬದಲಾಗಿ, ಸರ್ಕಾರವು ತುಳಿಯುತ್ತಿರುವ ಹಾದಿಗೂ ತಾವು ಅಪೇಕ್ಷಿಸುವ ಹಾದಿಗೂ ಬಹಳ ವ್ಯತ್ಯಾಸವಿದೆಯಾದ್ದರಿಂದ ತಮ್ಮ ರಾಜಿನಾಮೆ ಸ್ವೀಕರಿಸಬೇಕೆಂದು ಅವರು ಒತ್ತಾಯ ಮಾಡಿದರು. ಅವರ ವೈಯಕ್ತಿಕ ಅಭಿಪ್ರಾಯಗಳನ್ನು ಗೌರವಿಸುತ್ತಾ ೧೯೫೦ರ ಏಪ್ರಿಲ್ ೬ರಂದು ನೆಹರು ಒಂದು ಪತ್ರ ಬರೆದು, ಪೂರ್ವ ಬಂಗಾಳದಲ್ಲಿ ಹದಗೆಡುತ್ತಿದ್ದ ಪರಿಸ್ಥಿತಿಯನ್ನು ನಿಯಂತ್ರಿಸಲು ತಾವು ಸರ್ವಥಾ ಯತ್ನಿಸುತ್ತಿರುವುದಾಗಿಯೂ, ಆ ಉದ್ದೇಶದಿಂದ ಪಾಕಿಸ್ತಾನದ ಪ್ರಧಾನಿಯೊಡನೆ ಮಾತುಕತೆ ನಡೆಸುತ್ತಿರುವುದಾಗಿಯೂ ನೆಹರು ಮುಖರ್ಜಿಯವರಿಗೆ ತಿಳಿಸಿದರು. ಡಿಸೆಂಬರ್ ೧೯೪೪ರಲ್ಲಿ 'ಎದ್ದೇಳು ಹಿಂದುಸ್ತಾನ' ಎಂಬ ಹೊತ್ತಿಗೆಯನ್ನು ಘೋಷಣಾ ರೂಪದಲ್ಲಿ ಪ್ರಕಟಿಸಿದ್ದ ಶ್ಯಾಮಪ್ರಸಾದರಿಗೆ ಈ ರೀತಿಯ ಸಾಂತ್ವನದ ಮಾತುಗಳು ರುಚಿಸುವಂತಿರಲಿಲ್ಲ. ಪ್ರಬಲವಾದ ಸೈನಿಕ ಕಾರ್ಯಾಚರಣೆಯಿಂದಾದರೂ ಸರಿಯೇ, ಬಂಗಾಳದಲ್ಲಿ ಅನ್ಯಮತೀಯರನ್ನು ಕೂಡಲೆ ಹತ್ತಿಕ್ಕಬೇಕೆಂಬುದು ಶ್ಯಾಮಪ್ರಸಾದರ ಧೋರಣೆಯಾಗಿದ್ದಿತು. ಸ್ವಾತಂತ್ರ್ಯಪೂರ್ವದ ಹಾಗೂ ನಂತರದ ಘಟನೆಗಳು, ಗಾಂಧೀಜಿ ನೌಖಾಲಿಗೆ ಭೇಟಿ ನೀಡಿದ್ದುದು, ಮತೀಯ ಸೌಹಾರ್ದತೆಯ ಪ್ರಯತ್ನಗಳು, ಇವೆಲ್ಲಾ ಶ್ಯಾಮಪ್ರಸಾದರ ಗಣನೆಗೆ ಬರುವಂತಿರಲಿಲ್ಲ. ಅವರನ್ನು ಬೀಳ್ಕೊಡುವಾಗ ಅಭಿಮಾನದ ಮಾತುಗಳನ್ನಾಡಿಯೇ

ಜಿ. ರಾಮಕೃಷ್ಣ

ನೆಹರು ಬೀಳ್ಕೊಟ್ಟರು. ನೆಹರು-ಲಿಯಾಕತ್ ಒಪ್ಪಂದವು ಶ್ಯಾಮಪ್ರಸಾದರಿಗೆ ಒಪ್ಪಿಗೆಯಾಗದಿದ್ದುದು ಈ ಎಲ್ಲ ಪ್ರಸಂಗಗಳಿಗೆ ಕಾರಣವಾಗಿತ್ತು.

ಅದಕ್ಕೆ ಮುನ್ನ ಕಾಶ್ಮೀರದ ಸಮಸ್ಯೆ ಉಲ್ಬಣಗೊಂಡಿದ್ದಾಗ ಶ್ಯಾಮಪ್ರಸಾದರು ಪ್ರೇಮನಾಥ ಡೋಗ್ರಾ ಜೊತೆ ಸಮಾನಮನಸ್ಕರಾಗಿ ಹೋರಾಟದ ಕಣಕ್ಕಿಳಿದಿದ್ದರು. ಕಾಶ್ಮೀರದ ದೊರೆ ಹರಿಸಿಂಗ್ ಪರವಾಗಿದ್ದ ಡೋಗ್ರಾ, ಕಾಶ್ಮೀರವು ಸ್ವತಂತ್ರರಾಜ್ಯವಾಗಿ ಉಳಿಯಬೇಕೆಂದು ಭಾವಿಸಿದ್ದ ರಾಜಕಾರಣಿ. ಕಾಶ್ಮೀರವು ಒತ್ತಡಕ್ಕೆ ಸಿಲುಕಿದಾಗ ಈ ನಿಲುವನ್ನು ಬದಲಾಯಿಸಿಕೊಳ್ಳಬೇಕಾಗಿ ಬಂದದ್ದು ಬೇರೆ ವಿಷಯ. ಅಂತಹ ಒತ್ತಡ ಇಲ್ಲದಿದ್ದಾಗಲೂ ಮಹಾರಾಜ ಹರಿಸಿಂಗ್ ವಿರೋಧಿಯಾಗಿ, ಕಾಶ್ಮೀರವು ಭಾರತದೊಡನೆ ಸೇರ್ಪಡೆ ಹೊಂದಬೇಕೆಂದು ಬಹಿರಂಗವಾಗಿ ಘೋಷಿಸಿದ್ದ ಷೇಕ್ ಅಬ್ದುಲ್ಲಾ ಸಹಜವಾಗಿಯೇ ಪ್ರೇಮನಾಥ ಡೋಗ್ರಾ ಮತ್ತು ಶ್ಯಾಮಪ್ರಸಾದರ ರಾಜಕೀಯವನ್ನು ಖಂಡಿಸಿದ್ದುದು ಇಂದು ಒಂದು ಇತಿಹಾಸದ ವ್ಯಂಗ್ಯವಾಗಿ ತೋರಿದರೆ ಆಶ್ಚರ್ಯಪಡಬೇಕಾಗಿಲ್ಲ. ಈ ಎಲ್ಲದರ ಹಿನ್ನೆಲೆಯಲ್ಲಿ ಶ್ಯಾಮಪ್ರಸಾದರು ೧೯೫೧ರಲ್ಲಿ ಭಾರತೀಯ ಜನಸಂಘವನ್ನು ಸ್ಥಾಪಿಸಿ ಅದರ ಮೊದಲ ಅಧ್ಯಕ್ಷರಾದರು ಮತ್ತು ೧೯೫೨ರಲ್ಲಿ ದಕ್ಷಿಣ ಕಲ್ಕತ್ತಾ ಕ್ಷೇತ್ರದಿಂದ ಲೋಕಸಭೆಗೆ ಚುನಾಯಿತರಾದರು.

ಜನಸಂಘವು ಅಸ್ತಿತ್ವಕ್ಕೆ ಬರುವಾಗ ಹೊಚ್ಚ ಹೊಸ ಸೈದ್ಧಾಂತಿಕ ಪರಿಪ್ರೇಕ್ಷ್ಯಗಳನ್ನು ನಿರೂಪಿಸುವ ಅಗತ್ಯವಿರಲಿಲ್ಲ. ಏಕೆಂದರೆ, ಹೆಡ್ಗೆವಾರ್ ಸ್ಥಾಪಿಸಿದ್ದ ರಾಷ್ಟ್ರೀಯ ಸ್ವಯಂ ಸೇವಕ ಸಂಘವು ಆಗಲೆ ಒಂದು ಭೂಮಿಕೆಯನ್ನು ರಚಿಸಿ ಅದರ ಪ್ರಚಾರದಲ್ಲಿ ತೊಡಗಿತ್ತು. ರಾಷ್ಟ್ರೀಯ ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಹೆಡ್ಗೆವಾರ್ ಕೂಟವು ಬ್ರಿಟಿಷರ ವಿರುದ್ಧ ಉಗ್ರವಾಗಿ ಸೆಣಸಿದ್ದಿತೆ ಅಥವಾ ಅವರೊಡನೆ ಮೈತ್ರಿಯನ್ನು ಸಾಧಿಸಿದ್ದಿತೆ ಎಂಬುದರ ಬಗ್ಗೆ ಅನೇಕ ಅಭಿಪ್ರಾಯಗಳು ವ್ಯಕ್ತವಾಗಿವೆ. ತಾನೊಂದು 'ಸಾಂಸ್ಕೃತಿಕ' ಸಂಘಟನೆಯೆಂದು ಘೋಷಿಸಿಕೊಂಡಿದ್ದುದರಿಂದ ಆರ್.ಎಸ್.ಎಸ್.ಗೆ ಸ್ವಾತಂತ್ರ್ಯ ಹೋರಾಟದ 'ರಾಜಕೀಯ' ಬೇಡವೆನಿಸಿದ್ದಿರಬಹುದು. ಆದರೆ ಮತೀಯ ದುರಭಿಮಾನ ಹಾಗೂ ದುರ್ಭಾವನೆಗಳನ್ನು ಬಿತ್ತುವುದು ಯಾವ ಅರ್ಥದಲ್ಲಿ 'ಸಾಂಸ್ಕೃತಿಕ' ಎನಿಸಿಕೊಳ್ಳುತ್ತಿತ್ತೋ ಅದನ್ನು ವ್ಯಾಖ್ಯಾನಿಸುವುದು ಇಲ್ಲಿ ಅಗತ್ಯವಲ್ಲ. ಅದೇ ಭೂಮಿಕೆಯು ಶ್ಯಾಮಪ್ರಸಾದರಿಗೆ ಬುನಾದಿಯಾಯಿತೆಂಬುದಂತೂ ಸ್ಪಷ್ಟವಿದೆ. ಹಿಂದು ಮಹಾಸಭಾ ಹಾಗೂ ಆರ್.ಎಸ್.ಎಸ್.ಗಳ ಮಿಶ್ರಣವಾಗಿ ಜನಸಂಘವು ಹುಟ್ಟಿದ ಮೇಲೆ ಆರ್.ಎಸ್.ಎಸ್.ಗೆ ನೇರವಾದ ಒಂದು ರಾಜಕೀಯ ಮುಖ ದೊರೆತಂತಾಯಿತು ಹಾಗೂ ಹಿಂದು ಮಹಾಸಭಾ ಪ್ರತ್ಯೇಕವಾದ ಪಕ್ಷವಾಗಿ ಉಳಿಯುವುದು ಅನಗತ್ಯವಾಯಿತು. ಹೀಗೆ ಬೆಸೆಯುವ ಜಾಣತನವನ್ನು ಪ್ರದರ್ಶಿಸಿದ ಶ್ಯಾಮಪ್ರಸಾದರು ಜನಸಂಘದ ಕರಡು ಪ್ರಣಾಳಿಕೆಯನ್ನೂ ಸಿದ್ಧಗೊಳಿಸಿದ್ದರು. ಅದರಲ್ಲಿ ಮುಖ್ಯವಾಗಿ ಮೂರು ಅಂಶಗಳನ್ನು ಪ್ರಸ್ತಾಪಿಸಲಾಗಿತ್ತು:

ಅ) ದೇಶದ ಸಮಸ್ಯೆಗಳನ್ನು ಗುರುತಿಸಿ ಅವನ್ನು ಪರಿಹರಿಸುವ ದಿಕ್ಕಿನಲ್ಲಿ ಮುನ್ನಡೆಯಲು ಸಾಧ್ಯವಾಗದಂತಹ ತಪ್ಪು ನೀತಿಗಳನ್ನು ಅನುಸರಿಸಲಾಗುತ್ತಿದೆ; ಆ ನೀತಿಗಳು 'ಅ-ಭಾರತೀಯ' ಮತ್ತು ಅವಾಸ್ತವಿಕ. ಅವಕ್ಕೆ ಪರ್ಯಾಯವನ್ನೊದಗಿಸಲು ಜನಸಂಘವು ಶ್ರಮಿಸುತ್ತದೆ; (ಆ) ಭಾರತವನ್ನು ಪಾಶ್ಚಾತ್ಯ ರಾಷ್ಟ್ರಗಳ ಅಣಕು ಪ್ರತಿ ಎಂಬ ರೀತಿಯಲ್ಲಿ ಬೆಳೆಸಬೇಕೆಂಬ ಹುನ್ನಾರವನ್ನು ಹತ್ತಿಕ್ಕಲು ಜನಸಂಘವು ಬದ್ಧವಾಗಿದೆ; ಮತ್ತು (ಇ) ಭಾರತದ ಪುನರ್ನಿರ್ಮಿತಿಯು ಜನಸಂಘದ ಉದ್ದೇಶ; ಅದಕ್ಕೆ ಭಾರತೀಯ ಸಂಸ್ಕೃತಿ ಮತ್ತು ಮರ್ಯಾದಾ ಎಂಬುವು ಆಧಾರಗಳಾಗಿರಬೇಕು. ರಾಜಕೀಯ ಸಮಾಜ ಹಾಗೂ ಆರ್ಥಿಕ ಪ್ರಜಾಪ್ರಭುತ್ವಗಳು ಈ ಆಧಾರದ ಮೇಲೆ ನಿಲ್ಲಬೇಕು.

ಜನಸಂಘದ ಇಪ್ಪತ್ತಾರು ಮತ್ತು ಅದರ ಪುನರ್ಜನ್ಮವಾದ ಭಾರತೀಯ ಜನತಾ ಪಕ್ಷದ ಇಪ್ಪತ್ನಾಲ್ಕು ವರ್ಷಗಳ ಅವಧಿಯಲ್ಲಿ ಈ ಪುನರ್ನಿರ್ಮಿತಿ ಹೇಗೆ ನಡೆದು ಬಂದಿದೆಯೆಂಬುದು ತಿಳಿದ ವಿಷಯ. ಒಂದು ಮಾತನ್ನಂತೂ ಹೇಳಬಹುದು: ಶ್ಯಾಮಪ್ರಸಾದರು ಹಾಕಿಕೊಟ್ಟ ಮೇಲ್ಪಂಕ್ತಿಯನ್ನು ದಿವಂಗತ ದೀನದಯಾಳು ಉಪಾಧ್ಯಾಯರಿಂದ ಹಿಡಿದು ವಾಜಪೇಯಿವರೆಗೆ ಎಲ್ಲ ನಾಯಕರೂ ಬಹುಮಟ್ಟಿಗೆ ಅನುಸರಿಸುತ್ತಲೇ ಬಂದಿದ್ದಾರೆ. ಜನಸಂಘದ ಅಧ್ಯಕ್ಷರಾಗಿದ್ದು ಆಮೇಲೆ ಅದನ್ನು ತೊರೆದ ಬಲರಾಜ ಮಧೋಕ್ ೧೯೬೯ರಲ್ಲಿ ಶ್ಯಾಮಪ್ರಸಾದರ ಜೀವನ ಚರಿತ್ರೆಯನ್ನು ಬರೆದು 'ಹುತಾತ್ಮನೊಬ್ಬನ ವ್ಯಕ್ತಿಚಿತ್ರಣ' ಎಂಬ ಹೆಸರನ್ನು ಅದಕ್ಕೆ ಕೊಟ್ಟಿದ್ದರು. (ಜೈಕೋ ಪ್ರಕಾಶನ). ಮುಖರ್ಜಿಯವರು ಪ್ರತಿಪಾದಿಸಿದ್ದ ''ಭಾರತೀಯತೆ'' ಎಂಬುದರ ಕಲ್ಪನೆಯನ್ನು ಸ್ವಲ್ಪ ವಿಸ್ತರಿಸಿ 'ಭಾರತೀಕರಣ' ಎಂಬ ಪರಿಕಲ್ಪನೆಯನ್ನು ಚಲಾವಣೆಗೆ ತರುವ ಏಕಮೇವ ಸಾಧನೆ ಮಧೋಕರದ್ದು. ಅದರಂತೆ ನಮ್ಮ ದೇಶದ ಎಲ್ಲ ಜನರೂ, ವಿಶೇಷವಾಗಿ ಅನ್ಯ ಧರ್ಮೀಯ ಅಲ್ಪಸಂಖ್ಯಾತರು, ತಮ್ಮೆಲ್ಲ ಚಿಂತನೆ, ವ್ಯವಹಾರ ಮತ್ತು ಸಂಸ್ಕೃತಿಗಳನ್ನು 'ಭಾರತೀಕರಣ' ಗೊಳಿಸಿಕೊಳ್ಳಬೇಕು. ಅನ್ಯತೆಯ ದ್ರೋಹ, ಅನನ್ಯತೆಯ ಶ್ರೇಷ್ಠ ಎಂಬ ಸಂಕುಚಿತ ಮನೋಭಾವದ ಈ ಚಿಂತನೆಯು ಭಾರತದ ಇತಿಹಾಸ ಮತ್ತು ಸಂಸ್ಕೃತಿಗಳನ್ನು ವಿರೂಪಗೊಳಿಸಿ ಸಂಶಯ-ದ್ವೇಷಗಳ ವಾತಾವರಣವನ್ನು ಸೃಷ್ಟಿಸಿರುವುದು ನಮ್ಮ ದೇಶದ ಅನುಭವಕ್ಕೆ ಬಂದಿದೆ. ಆಶುತೋಷ ಮುಖರ್ಜಿಯವರ ಕುಟುಂಬದಲ್ಲಿ ಬೆಳೆದ ಶ್ಯಾಮಪ್ರಸಾದರು ಕೆಲವು ವಿಲಕ್ಷಣ ಚಿಂತನೆಗಳನ್ನು ಹೇಗೆ ಮೂಡಿಸಿಕೊಂಡರೆಂಬುದು ಮನೋವಿಜ್ಞಾನಿಗಳಿಗೆ ಒಂದು ಸವಾಲಾಗಬಹುದೇನೋ! ಆದರೆ ಶ್ಯಾಮಪ್ರಸಾದರಿಗೆ ಸ್ವಾಗತಾರ್ಹವಾದ ಅನೇಕ ಆಸಕ್ತಿಗಳಿದ್ದುವು. ಉದಾಹರಣೆಗೆ, ನಾಟಕ ಕಲೆ – ರಂಗಮಂದಿರಗಳಲ್ಲಿ ಅವರು ಸಕ್ರಿಯವಾಗಿ ತಮ್ಮನ್ನು ತೊಡಗಿಸಿಕೊಳ್ಳುತ್ತಿದ್ದುದುಂಟು. ೧೯೨೪ರಲ್ಲಿ 'ಕಲ್ಕತ್ತಾ ರಿವ್ಯೂ' ಎಂಬ ಪ್ರಸಿದ್ಧ ಪತ್ರಿಕೆಗೆ ಬಂಗಾಲಿ ನಾಟಕರಂಗವನ್ನು ಕುರಿತಂತೆ ಪ್ರಬುದ್ಧವಾದ ಲೇಖನವೊಂದನ್ನು ಶ್ಯಾಮಪ್ರಸಾದರು ಬರೆದಿದ್ದರೆಂಬುದನ್ನು ಇಲ್ಲಿ ಸ್ಮರಿಸಬಹುದು.

ಷೇಕ್ ಅಬ್ದುಲ್ಲಾ ಸರ್ಕಾರವು ಕಾಶ್ಮೀರದಲ್ಲಿ ಸ್ಥಾಪನೆಗೊಂಡಾಗಿನಿಂದಲೂ ಅದನ್ನು ವಿರೋಧಿಸಿದವರು ಶ್ಯಾಮಪ್ರಸಾದ್. ಕಾಶ್ಮೀರದ ಪ್ರಶ್ನೆಗೆ ಅಂದಿನ ಶ್ಯಾಮಪ್ರಸಾದ್ ಮತ್ತು ಇಂದಿನ ಅಡ್ವಾನಿ ಸೂಚಿಸುವ ಪರಿಹಾರ ಒಂದೇ: ಭಾರತದ ಪ್ರಭುತ್ವ ಶಕ್ತಿಯನ್ನು ಬಲವಾಗಿ ಬಳಸಿ ಕಾಶ್ಮೀರವನ್ನು ಹತೋಟಿಯಲ್ಲಿಟ್ಟುಕೊಳ್ಳುವುದು. ಹಾಗೆ ಕಾರ್ಯಾಚರಣೆಯಲ್ಲಿ ತೊಡಗಿದಾಗ ಜನಸಾಮಾನ್ಯರ ಪ್ರಾಥಮಿಕ ಹಕ್ಕುಗಳಿಗೆ ಚ್ಯುತಿಯುಂಟಾಗಬಹುದೆಂಬ ಆತಂಕ ಅವರಿಗಿಲ್ಲ. ಅವರ 'ರಾಷ್ಟ್ರೀಯತೆ' ಎಂಬುದು ಅಂತಹ ಎಲ್ಲ ದಮನ ನೀತಿಗಳನ್ನೂ ಸಮರ್ಥಿಸುತ್ತದೆಯೆಂದು ತೋರುತ್ತದೆ. ದಮನದಿಂದ ಪರಿಹಾರ ದೊರಕುವುದಿಲ್ಲವೆಂಬ ಇತಿಹಾಸದ ಕಟುಸತ್ಯವು ಅವರಿಗೆ ಅಪ್ರಸ್ತುತ. ಷೇಕ್ ಅಬ್ದುಲ್ಲಾ ಮತ್ತು ನೆಹರು ನೀತಿಗಳನ್ನು ವಿರೋಧಿಸಿದ ಶ್ಯಾಮಪ್ರಸಾದರು ಪ್ರೇಮನಾಥ ಡೋಗ್ರಾ ಅವರನ್ನು ಏಕೆ ಮೆಚ್ಚಿಕೊಂಡರೆಂಬುದು ಒಂದು ಒಗಟಾಗಿಯೇ ಉಳಿದಿದೆ. ೧೯೫೩ರ ಮೇ ತಿಂಗಳಲ್ಲಿ ಶ್ಯಾಮಪ್ರಸಾದರು ಕಾಶ್ಮೀರಕ್ಕೆ ತೆರಳಿದರು. ಅವರು ಕಾಶ್ಮೀರವನ್ನು ಪ್ರವೇಶಿಸಕೂಡದೆಂದು ಷೇಕ್ ಅಬ್ದುಲ್ಲಾ ಸರ್ಕಾರವು ಅರ್ಥವಿಲ್ಲದ ಒಂದು ಪ್ರತಿಬಂಧಕಾಜ್ಞೆಯನ್ನು ಹೊರಡಿಸಿತು. 'ಕಾಶ್ಮೀರವನ್ನು ಪ್ರವೇಶಿಸಲು ನಾನು ಯಾರ ಪರವಾನಗಿಯನ್ನೂ ಪಡೆಯಬೇಕಿಲ್ಲ' ಎಂದು ಮುಖರ್ಜಿ ಘೋಷಿಸಿದರು ಮತ್ತು ಅಂತೆಯೇ ಮೇ ೧೧ರಂದು ಕಾಶ್ಮೀರವನ್ನು ಪ್ರವೇಶಿಸಿದರು. ಕಾಶ್ಮೀರದ ಸರ್ಕಾರವು ಅವರನ್ನು ಬಂಧಿಸಿ ನಿಶಾತ್‌ಬಾಗ್ ಜೈಲಿನಲ್ಲಿ ಕೂಡಿಹಾಕಿತು. ಷೇಕ್ ಅಬ್ದುಲ್ಲಾ ಹಾಗೆ ಮಾಡದಿದ್ದರೆ ಶ್ಯಾಮಪ್ರಸಾದರ ರಾಜಕೀಯ ಆಂದೋಲನವು ಕಾಶ್ಮೀರದಲ್ಲಿ ಮತೀಯ ಘರ್ಷಣೆಗಳು ಹೆಚ್ಚಾಗುವಂತೆ ಮಾಡುತ್ತಿದ್ದಿತೇ ಅಥವಾ ಜನರನ್ನು ಒಗ್ಗೂಡಿಸುತ್ತಿತ್ತೇ ಎಂಬುದು ನಿಗೂಢವಾದ ಪ್ರಶ್ನೆಯೇನೂ ಅಲ್ಲ. ಆದರೆ ಭಾರತ ಸರ್ಕಾರವು ಕೆಲವೇ ವರ್ಷಗಳ ನಂತರ ಸ್ವತಃ ಷೇಕ್ ಅಬ್ದುಲ್ಲಾನನ್ನು ಜೈಲಿಗೆ ತಳ್ಳಿ ಸಮಸ್ಯೆಯನ್ನು ಹೇಗೆ ಬೆಳೆಯಗೊಟ್ಟಿತೆಂಬುದು ವಿಷಾದನೀಯವಾದ ಒಂದು ಅಧ್ಯಾಯ.

ಶ್ಯಾಮಪ್ರಸಾದರು ೧೯೫೩ರ ಜೂನ್ ೨೩ರಂದು ಜೈಲಿನಲ್ಲೇ ಹೃದಯಾಘಾತಕ್ಕೊಳಗಾಗಿ ಮಡಿದರು. ಅವರನ್ನು ಷೇಕ್ ಅಬ್ದುಲ್ಲಾ ಕಾರಾಗೃಹದಲ್ಲಿ ಹೇಗೆ ಕೊಂದುಹಾಕಿದನೆಂದು ಜನಸಂಘದ ವಕ್ತಾರರು ಪ್ರಚಾರ ಮಾಡಿದ್ದುಂಟು. ಈಗಲೂ ಬಿಜೆಪಿ-ಆರೆಸ್ಸೆಸ್ ವಲಯಗಳಲ್ಲಿ ಆ ಮಾತು ಕೇಳಿಬರುತ್ತದೆ. ಅದಕ್ಕೆ ಪುರಾವೆಯನ್ನು ಒದಗಿಸಲು ಹೊಸ ಸೃಷ್ಟಿ ತಂತ್ರಕ್ಕೆ ಬಲಿಯಾಗಿಲ್ಲದಿರುವುದು ವಾಜಪೇಯಿ ಸರ್ಕಾರದ ಒಂದು ಶ್ಲಾಘನೀಯ ಕ್ರಮ ಎನ್ನಬಹುದು. ಶ್ಯಾಮಪ್ರಸಾದರು ಬಹಳ ಚಿಕ್ಕವಯಸ್ಸಿನಲ್ಲೇ ತೀರಿಕೊಳ್ಳದಿದ್ದರೆ ಭಾರತೀಯ ಜನಸಂಘವು ವೈಷಮ್ಯರಹಿತ ಹಾದಿಯಲ್ಲಿ ಹೆಜ್ಜೆ ಹಾಕುತ್ತಿತ್ತೇ, ಮತೀಯ ಸೌಹಾರ್ದತೆಯನ್ನು ಚೆನ್ನಾಗಿ ಬೆಳೆಸುತ್ತಿತ್ತೇ ಎಂಬ ಪ್ರಶ್ನೆಗಳು ಇತಿಹಾಸದ ಕುತೂಹಲಗಳಲ್ಲಿ ಕೆಲವಾಗಿ ಸದಾಕಾಲಕ್ಕೂ ನಮ್ಮ ಮುಂದಿರುತ್ತವೆ.

□□□

# ಕಾಯಕಲ್ಪಕ್ಕೊಳಪಡಬೇಕಾದ ಸಾರ್ವಜನಿಕ ಪಡಿತರ

ಬಲ್ಲೇನಹಳ್ಳಿ ಎ. ಮಂಜುನಾಥ್

**ಸಹನೆಯುಳ್ಳ ಮನುಷ್ಯನ ಬಗ್ಗೆ ಎಚ್ಚರದಿಂದಿರಿ !** ಎಂಬ ಜಾನ್ ಡ್ರೈಡನ್‌ನ ಮಾತನ್ನು ಭಾರತದಲ್ಲಿ ಉಪೇಕ್ಷಿಸಿರುವಷ್ಟು ಬೇರೆಲ್ಲಿಯೂ ನಿರ್ಲಕ್ಷಿಸಿರಲಾರರೆಂಬುದೇ ನನ್ನ ಭಾವನೆ. ಹಣ-ಜನ-ಬಾಹುಬಲವುಳ್ಳವರ ನಡುವೆ ಯಾವ ಬಲವೂ ಇಲ್ಲದವ ಸಹನೆಯನ್ನಲ್ಲದೆ ಮತ್ತೇನನ್ನು ಉಳಿಸಿಕೊಂಡಿದ್ದಾನು ! ಭಾರತದ ದುರಂತ ಎಂದರೆ ಎಲ್ಲವನ್ನೂ ದೇವರೆಂಬ ಅಮೂರ್ತಕಲ್ಪನೆಯ ಮೇಲೆ ಎಸೆದು ನಿಶ್ಚಿಂತೆಯಿಂದ ಇದ್ದುಬಿಡುವುದು. ಬಡವರು ಬಡವರಾಗಿಯೇ - ಧನಿಕರು ಧನಿಕರಾಗಿಯೇ ಸಾಗುತ್ತಿರುವ ಈ ವ್ಯವಸ್ಥೆಯಲ್ಲಿ ದಿನದಿಂದ ದಿನಕ್ಕೆ ಅಸಮಾನತೆಯ ಅಂತರ ಹೆಚ್ಚಾಗುತ್ತಲೆ ಇದೆ. ಬಡತನ, ಹಸಿವು, ದಾರಿದ್ರ್ಯ ಬೆಂಬಿಡದ ಭೂತವಾಗಿ ಕಾಡುತ್ತಲೇ ಇದೆ. ದೇಶದ ಅದೆಷ್ಟೋ ಕೋಟಿ ಮಂದಿ ಒಪ್ಪೊತ್ತಿನ ಕೂಳಿಗೂ ಗತಿಯಿಲ್ಲದೆ ಒದ್ದಾಡುತ್ತಿದ್ದಾರೆ. ಕಾಳಸಂತೆ ಕೋರರ, ಖದೀಮರ ಸುಪರ್ದಿಗೆ ಮಾರುಕಟ್ಟೆಯ ಬೆಲೆ ನಿಯಂತ್ರಣ ಹೋಗಿಬಿಟ್ಟಿದೆ. ಹಾಗಾಗಿ ಬಡವರ, ರೈತರ, ಮಧ್ಯಮ ವರ್ಗದವರ ಹಸಿದ ಹೊಟ್ಟೆಯ ಮೇಲೆ ಬರೆ ಎಳೆಯುವ ಪ್ರಕ್ರಿಯೆ ನಡೆಯುತ್ತಲೇ ಬಂದಿದೆ. ಯಾವ ಮಹಾತ್ಮರ, ದಾರ್ಶನಿಕರ, ವಿಚಾರವಾದಿಗಳ..... ವಿಚಾರಗಳು ಈ ಜನರ ಕಿವಿ ಮುಟ್ಟುತ್ತಿಲ್ಲ. ಅಸ್ತಿತ್ವದಲ್ಲಿರುವ 'ಕಲ್ಯಾಣರಾಜ್ಯ'ದಲ್ಲಿ ಆಧುನಿಕ ಸರ್ಕಾರಿ ವ್ಯವಸ್ಥೆ, ಅದನ್ನು ಆಳುವ ಬ್ಯೂರೋಕ್ರಸಿ, ಸಾಮಾನ್ಯ ಜನರನ್ನು ಬೆಂಕಿಯಿಂದ ಬಾಣಲೆಗೆ ತಳ್ಳುತ್ತಿದ್ದಾರೆ.

ಬಡವರ, ದೀನದಲಿತರ, ಮಧ್ಯಮವರ್ಗದವರ ಕನಸಾಗಿದ್ದ, ಅವರ ಬದುಕನ್ನು ಕೊಂಚವಾದರೂ ಹಸನು ಮಾಡಿ, ಹಸಿವಿನ ದಾಹಕ್ಕೆ ಕೈಗೆಟುಕುವ ಬೆಲೆಯಲ್ಲಿ ದಿನನಿತ್ಯದ ಆಹಾರ ವಸ್ತುಗಳನ್ನು ದೊರಕಿಸಿಕೊಡುತ್ತಿದ್ದ ಸಾರ್ವಜನಿಕ ಪಡಿತರ ವ್ಯವಸ್ಥೆಯ ಮೇಲೆ ಈಗ ಸರ್ಕಾರದ ಕಣ್ಣುಬಿದ್ದಿದೆ. ಆಹಾರ ಧಾನ್ಯಗಳಿಗೆ ಕೊಡಲಾಗುತ್ತಿದ್ದ ಸಬ್ಸಿಡಿಯನ್ನು ಜಾಗತಿಕ ದೊರೆಗಳ ಅಪ್ಪಣೆಯ ಮೇರೆಗೆ ಕಸಿದುಕೊಳ್ಳಲಾಗುತ್ತಿದೆ. ಕೇಂದ್ರದಲ್ಲಿರುವ ವ್ಯಾಪಾರಿಗಳ ಸರ್ಕಾರ ಎಲ್ಲವನ್ನೂ ಖಾಸಗೀಕರಣಗೊಳಿಸಲು, ಮುಕ್ತ ಮಾರುಕಟ್ಟೆ ಮಾಡಲು ಹೊರಟಿದೆ. ಈಗಾಗಲೆ ಒಂದೊಂದಾಗಿ ಪಡಿತರ ಧಾನ್ಯಗಳ ಮೇಲಿನ ಸಬ್ಸಿಡಿಯನ್ನು ಕಸಿದುಕೊಳ್ಳಲಾಗುತ್ತಿದೆ. ಈ ಹಿನ್ನೆಲೆಯಲ್ಲಿ ಬರಲಿರುವ ದಿನಗಳಲ್ಲಿ ಬಡವರ, ದಲಿತರ, ಮಧ್ಯಮವರ್ಗದವರ ಬದುಕು ಅಸಹನೀಯಗೊಳ್ಳಲಿದೆ. ಈ ನಿಟ್ಟಿನಲ್ಲಿ ಬಡವರ ಉದ್ಧಾರಕ್ಕಾಗಿ ಸರ್ಕಾರವೇ ಜಾರಿಗೊಳಿಸಿದ, ಅಪಾರ ಜನಪ್ರಿಯತೆ ಗಳಿಸಿದ ಸಾರ್ವಜನಿಕ ಪಡಿತರ ವ್ಯವಸ್ಥೆ ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುತ್ತಿದೆ. ಶ್ರೀಸಾಮಾನ್ಯನಿಗಾಗಿ ರೂಪಿಸಲ್ಪಟ್ಟ ಈ ಯೋಜನೆಗೆ ಈಗ ಲಕ್ವ ಹೊಡೆದಿದೆ. ಬಡವರ ಹೆಸರಿನಲ್ಲಿ ಉಳ್ಳವರು ತೂರಿಕೊಂಡು ಲಾಭ ಪಡೆಯುತ್ತಿದ್ದಾರೆ. ಭ್ರಷ್ಟ ವ್ಯವಸ್ಥೆ ಕಣ್ಣುಮುಚ್ಚಿ ಕೂತಿದೆ. ಇತ್ತೀಚೆಗೆ ಕೇಂದ್ರ ಸರ್ಕಾರ ಈ ಯೋಜನೆಯನ್ನು ಸಮಗ್ರವಾಗಿ ಬದಲಾವಣೆ ಮಾಡಲು ಉದ್ದೇಶಿಸಿದೆ. ಸಿಕ್ಕವರಿಗೆ ಸೀರುಂಡೆಯಾಗುತ್ತಿರುವ ಸಾರ್ವಜನಿಕ ಪಡಿತರ ವ್ಯವಸ್ಥೆಯನ್ನು ಹೇಗೆ ಕಾಯಕಲ್ಪಕ್ಕೆ ಒಳಪಡಿಸಬಹುದು, ಯಾವ ಮಾರ್ಗ ಉತ್ತಮ, ಎಂಬ ವಿಚಾರ ಈಗ ಆದ್ಯತೆ ಪಡೆಯಬೇಕು.

'ಸಾರ್ವಜನಿಕ ಪಡಿತರ ವ್ಯವಸ್ಥೆ' ಎಂಬ ಪರಿಕಲ್ಪನೆ ಹುಟ್ಟಿಕೊಂಡಿದ್ದು, ಅದಕ್ಕೊಂದು ಮೂರ್ತ ಕಲ್ಪನೆ ಭಾರತದಲ್ಲಿ ಬಂದಿದ್ದು ಎಪ್ಪತ್ತರ ದಶಕದಲ್ಲಿ. ದೇಶಕ್ಕೆ ಬರಗಾಲ ಬಂದಾಗ ಸೊಸೈಟಿಗಳ ಮೂಲಕ ಆಹಾರ ಧಾನ್ಯಗಳನ್ನು ವಿತರಿಸಲಾಯಿತಾದರೂ, ಕೈಗೆಟುಕುವ ದರದಲ್ಲಿ , ಸರ್ಕಾರದ ಸಹಾಯಧನದ ನೆರವಿನಲ್ಲಿ, ಜನಸಾಮಾನ್ಯರಿಗೆ 'ಪಡಿತರ ಚೀಟಿ'ಯ ಮೂಲಕ ಆಹಾರ ಧಾನ್ಯ ವಿತರಿಸುವ ಪದ್ಧತಿ ಜನಪ್ರಿಯವಾದದ್ದು ಕೇಂದ್ರ ಮತ್ತು ರಾಜ್ಯದಲ್ಲಿ 'ಜನತಾ ಪಕ್ಷ'ದ ಸರ್ಕಾರವಿದ್ದಾಗ !

ಇಂದಿರಾ ಗಾಂಧಿಯವರ ದೂರದೃಷ್ಟಿಯ ಯೋಜನೆ ಜನಸಾಮಾನ್ಯರಿಗೆ ತಲುಪಿದ್ದು, ಕೇಂದ್ರದಲ್ಲಿ ಮೊರಾರ್ಜಿ ದೇಸಾಯಿಯವರು ಪ್ರಧಾನಿಯಾಗಿದ್ದಾಗ ಅದಕ್ಕೆ ಹೆಚ್ಚು ಚಾಲನೆ ದೊರಕಿತು. ನಮ್ಮ ರಾಜ್ಯದಲ್ಲಿ ಅದೇ ಸುಮಾರಿನಲ್ಲಿ 'ಹಸಿರು ಕಾರ್ಡ್'ಗಳೆಂಬ ಪಡಿತರ ಚೀಟಿಯನ್ನು ವಿತರಿಸುವ ಮೂಲಕ ಹೆಚ್ಚು ವ್ಯಾಪಕಗೊಳಿಸಲಾಯಿತು.

**ಸಾರ್ವಜನಿಕ ಪಡಿತರ ವ್ಯವಸ್ಥೆ ಎಂದರೇನು ?**

ಶ್ರೀಸಾಮಾನ್ಯನಿಗೆ ಅಗತ್ಯವಾದ ದಿನನಿತ್ಯದ ಆಹಾರಧಾನ್ಯ, ಎಣ್ಣೆ ಕಾಳು, ಧೋತಿ ವಸ್ತ್ರಗಳನ್ನು ಆತನ ಕೈಗೆಟುಕುವ ದರದಲ್ಲಿ ಸರ್ಕಾರವೇ ಅಂಗಡಿಗಳ ಮೂಲಕ (ನ್ಯಾಯಬೆಲೆ ಅಂಗಡಿ, ಸೊಸೈಟಿ, ವ್ಯವಸಾಯ ಸೇವಾ ಸಹಕಾರ ಸಂಘ, ಜನತಾ ಬಜಾರ್) ವಿತರಿಸುವುದು ಎಂದರ್ಥ. ಕಾಳಸಂತೆಕೋರರ, ಪಟ್ಟಭದ್ರರ ಹಿಡಿತದಿಂದ ಕೃತಕ ಅಭಾವ ಮಾರುಕಟ್ಟೆಯನ್ನು ಸೃಷ್ಟಿಸುವುದನ್ನು ತಪ್ಪಿಸಲು, ಶ್ರೀಸಾಮಾನ್ಯನ ಬದುಕನ್ನು ಹಸನುಗೊಳಿಸಲು ಜಾರಿಗೆ ಬಂದದ್ದೇ ಈ ಪಬ್ಲಿಕ್ ಡಿಸ್ಟ್ರಿಬ್ಯೂಷನ್ ಸಿಸ್ಟಮ್ !

ಈ ಯೋಜನೆ ಜಾರಿಗೆ ಬಂದಾಗ ಮೊಟ್ಟಮೊದಲು ಕಾರ್ಯರೂಪಕ್ಕೆ ತರುವ ಹೊಣೆಯನ್ನು ಗ್ರಾಮಾಂತರ ಪ್ರದೇಶಗಳಲ್ಲಿ 'ಸೊಸೈಟಿ'ಗಳೆಂದು ಕರೆಯಲ್ಪಡುವ ವ್ಯವಸಾಯ ಸೇವಾ ಸಹಕಾರ ಸಂಘಗಳಿಗೆ ನೀಡಲಾಯಿತು. ನಗರ ಪ್ರದೇಶಗಳಲ್ಲಿ 'ಜನತಾ ಬಜಾರ್'ಗಳಿಗೆ ಅವಕಾಶ ನೀಡಲಾಯಿತು. ೧೯೮೫ರಲ್ಲಿ ರಾಜ್ಯದಲ್ಲಿ ಇವುಗಳ ಕಾರ್ಯವನ್ನು ಸರ್ಕಾರಿ ನ್ಯಾಯಬೆಲೆ ಅಂಗಡಿಗಳಿಗೆ ನೀಡಲಾಯಿತು.

ಹಸಿರು ಕಾರ್ಡ್‌ಗಳನ್ನು ಪಡೆದವರಿಗೆ ರೂ. ೨.೧೦ರ ದರದಲ್ಲಿ ಒಂದು ಕೆ.ಜಿ. ಅಕ್ಕಿಯನ್ನು, ರೂ. ೧.೪೫ ಪೈಸೆ ದರದಲ್ಲಿ ಕಿಲೋ ಗೋಧಿಯನ್ನು, ರೂ. ೨.೭೦ ಪೈಸೆಗೆ ಒಂದು ಕಿಲೋ ಸಕ್ಕರೆಯನ್ನು, ರೂ. ೧೨ಕ್ಕೆ ಒಂದು ಲೀಟರ್ ಪಾಮ್ ಎಣ್ಣೆಯನ್ನು, ರೂ. ೨೪ಕ್ಕೆ ಜೊತೆ ಪಂಚೆ ಧೋತಿ, ಸೀರೆ ಹಾಗೂ ರೂ. ೧.೬೦ ಪೈಸೆಗೆ ಒಂದು ಲೀಟರ್ ಸೀಮೆಎಣ್ಣೆಯನ್ನು ಕೊಡುವ ವ್ಯವಸ್ಥೆಯನ್ನು ಜಾರಿಗೊಳಿಸಲಾಯಿತು. ರಾಜ್ಯಾದ್ಯಂತ ಮನೆ ಮಾತಾದ ಈ ವ್ಯವಸ್ಥೆ ನೆನೆಗುದಿಗೆ ಬಿದ್ದಿದ್ದ ಸಾರ್ವಜನಿಕ ಪಡಿತರ ವ್ಯವಸ್ಥೆಗೆ ಹೊಸ ಕಾಯಕಲ್ಪ ನೀಡಿ ಜನಸಾಮಾನ್ಯರೂ ಸೊಸೈಟಿ ಬಳಿಗೆ ಬರುವಂತಾದರು ಉಳ್ಳವರಿಗೆ ಕೇಸರಿ ಕಾರ್ಡನ್ನು ನೀಡಿ ಅವರನ್ನು ಪಡಿತರ ಚೀಟಿ ವ್ಯವಸ್ಥೆಗೆ ತಂದು ಸಾರ್ವಜನಿಕ ಪಡಿತರ ವ್ಯವಸ್ಥೆಯನ್ನು ಸಮಗ್ರೀಕರಣಗೊಳಿಸಲಾಯಿತು.

ಆದರೆ ಈ ದೇಶದ ದುರಂತವೆಂದರೆ ಇಂತಹ ಒಳ್ಳೆಯ ಯೋಜನೆಯಲ್ಲೂ ಸರ್ಕಾರ ಬದಲಾದಂತೆ ಅದರ ರೂಪು-ರೇಷೆಯೂ ಬದಲಾಗಿಬಿಡುವುದು. ನಮ್ಮ ರಾಜ್ಯದಲ್ಲಿ ಜನತಾ ಸರ್ಕಾರದ ಪತನದ ನಂತರ ಅಧಿಕಾರಕ್ಕೆ ಬಂದ ಸರ್ಕಾರ ಇದನ್ನು ಬದಲು ಮಾಡಲು ಹೋಯಿತು. ಗಾಂಧೀಜಿಯವರ ಭಾವಚಿತ್ರವಿದ್ದ ಹಸಿರು ಕಾರ್ಡ್‌ಗೆ ಇಂದಿರಾ ಗಾಂಧಿ ಫೋಟೋ ಹಾಕಲು ಮನಸ್ಸು ಮಾಡಿದ ಕಾಂಗ್ರೆಸ್ ಸರ್ಕಾರ ವ್ಯವಸ್ಥೆಯ ಬದಲೀಕರಣಕ್ಕೆ ಆರಂಭಿಸಿತು. ಹೀಗಾಗಿ ಉಳ್ಳವರೂ, ರಾಜಕೀಯ ಪ್ರಭಾವ ಇರುವವರೂ ಹಸಿರು ಕಾರ್ಡ್‌ದಾರರಾಗಿಹೋದರು.

೧೯೯೧ರಲ್ಲಿ ಕೇಂದ್ರದಲ್ಲಿ ಅಧಿಕಾರಕ್ಕೆ ಬಂದ ಕಾಂಗ್ರೆಸ್ ಸರ್ಕಾರ ವಿಶ್ವ ವಾಣಿಜ್ಯ ಒಪ್ಪಂದ, ಡಂಕಲ್, ಗ್ಯಾಟ್ ಪ್ರಸ್ತಾವಗಳಿಗೆ ಸಹಿ ಮಾಡಿದ ಮೇಲೆ ಅದರ ಪ್ರಭಾವ ಸಾರ್ವಜನಿಕ ಪಡಿತರ ವ್ಯವಸ್ಥೆಯ ಮೇಲೆ ಆಗತೊಡಗಿತು. ಮಧ್ಯಮ ವರ್ಗದವರ ಆಶಾಕಿರಣವಾದ ಪಡಿತರ ವ್ಯವಸ್ಥೆಯ ಮೇಲಿನ ಸಬ್ಸಿಡಿ ಖೋತಾ ಒಂದೆಡೆ ಮಾಡಿದರೆ, ಇನ್ನೊಂದೆಡೆ ರೈತರಿಗೆ ಡಿಪೋಗಳಿಂದ ಒದಗಿಸಲಾಗುತ್ತಿದ್ದ ರಾಸಾಯನಿಕ ಗೊಬ್ಬರಗಳ ಮೇಲಿನ ಸಬ್ಸಿಡಿಯನ್ನು ತೆಗೆದುಹಾಕಲು ಆರಂಭಿಸಲಾಯಿತು. ಹೀಗಾಗಿ ಮಾರುಕಟ್ಟೆಯಲ್ಲಿ ಆಹಾರ ಧಾನ್ಯಗಳ ಮೇಲಿನ ಬೆಲೆ ನಿಯಂತ್ರಣ ಕುಸಿಯಿತು. ಜಾಗತೀಕರಣದ ಪ್ರಭಾವ ರೈತರ, ಬಡವರ, ಮಧ್ಯಮ ವರ್ಗದ ಜನರ ಪಾಲಿಗೆ ಉರುಳಾಯಿತು.

ಇವೆಲ್ಲದರ ಪರಿಣಾಮವಾಗಿ ಸಾರ್ವಜನಿಕ ಪಡಿತರ ವ್ಯವಸ್ಥೆಯ ಮೂಲಕ ವಿತರಿಸಲಾಗುತ್ತಿದ್ದ ಆಹಾರ ಧಾನ್ಯಗಳ ಬೆಲೆ ಗಗನಕ್ಕೆ ಏರಿತು. ಮುಕ್ತ ಮಾರುಕಟ್ಟೆಯಲ್ಲಿ ದೊರೆಯುವ ಆಹಾರ ಧಾನ್ಯಗಳಿಗೂ - ನ್ಯಾಯಬೆಲೆ ಅಂಗಡಿ ಮೂಲಕ ವಿತರಿಸಲಾಗುವ ಆಹಾರ ಧಾನ್ಯಗಳ ಬೆಲೆಗೂ ಅಂತರ ಒಂದೆರಡು ರೂಪಾಯಿಗಳಾದವು ! ಸಹಜವಾಗಿಯೇ ಜನರಿಗೆ ದಿಗಿಲಾಯಿತು. ಕೇವಲ ರೂ. ೪೮ ನೀಡಿ ೮ ಕೆ.ಜಿ. ಅಕ್ಕಿ, ೨ ಕೆ.ಜಿ. ಗೋಧಿ, ಒಂದು ಕೆ.ಜಿ. ಸಕ್ಕರೆ ಪಡೆದುಕೊಳ್ಳುತ್ತಿದ್ದವರು ಈಗ ಅಷ್ಟೇ ಪ್ರಮಾಣದ ಪಡಿತರ ಪಡೆಯಲು ರೂ. ೧೨೦ ತೆತ್ತಬೇಕಾದ್ದು ಕಂಡು ಬೆಚ್ಚಿಬಿದ್ದರು. ರೂ. ೧೦ ನೀಡಿ ಮೂರು ಲೀಟರ್ ಸೀಮೆಎಣ್ಣೆ ಪಡೆಯುತ್ತಿದ್ದವ ಈಗ ಇಪ್ಪತ್ತೆಂಟು ರೂಪಾಯಿ ನೀಡಬೇಕಾಗಿದೆ. ಸೀಮೆ ಎಣ್ಣೆಯ ದರ ಒಂದೇ ಬಾರಿಗೆ ಶೇ. ೩೦೦ರಷ್ಟು ಹೆಚ್ಚಾಗಿಹೋಯಿತು !

ಈ ಎಲ್ಲಾ ಅಂಶಗಳು ಸಾರ್ವಜನಿಕ ಪಡಿತರ ವ್ಯವಸ್ಥೆ ಮೇಲಿನ ವಿಶ್ವಾಸವನ್ನೇ ಕುಗ್ಗಿಸಿಬಿಟ್ಟಿವೆ. ಸರ್ಕಾರ ಕೇಂದ್ರ ಸರ್ಕಾರದ ಯೋಜನೆಗಳಂತೆ ಸಮಗ್ರೀಕರಣ, ಪಾರದರ್ಶಕತನವನ್ನು ಇಲ್ಲಿಯೂ ತರಲು ಯೋಜಿಸಿದೆ. ಪ್ರಾಮಾಣಿಕವಾಗಿ ನಿಜವಾದ ಬಡವರನ್ನು ಗುರುತಿಸಿ ಕಾರ್ಡ್ ವಿತರಿಸಿದ್ದೇ ಆದಲ್ಲಿ ಸರ್ಕಾರ ಈ ಹಿಂದಿನ ಬೆಲೆಯಂತೆ ಪಡಿತರವನ್ನು ವಿತರಿಸಬಹುದು. ಅದನ್ನು ಹೇಗೆ ಮಾಡಿದರೆ ಚೆನ್ನ ಎಂಬ ಬಗ್ಗೆ ಈ ಆಲೋಚನೆ :

**ಉಳ್ಳವರ ಸ್ವತ್ತಾಗಿರುವ ಪಿ.ಡಿ.ಎಸ್.**

ಈಗಿನ ವಿತರಣಾ ವ್ಯವಸ್ಥೆ ಹೇಗಿದೆ ಎಂದರೆ, 'ಉಂಡವನಿಗೆ ಮತ್ತಷ್ಟು ಉಣ್ಣು!' ಎಂಬಂತೆ. ಒಪ್ಪತ್ತಿನ ಗಂಜಿಗೂ ಪರದಾಡುವವನಿಗೆ ಇದರ ಲಾಭ ದಕ್ಕುತ್ತಲೇ ಇಲ್ಲ. ಮಣ್ಣಲ್ಲಿ ದುಡಿಯುವ ರೈತಾಪಿ ವರ್ಗದವರಿಗೆ, ಕೂಲಿಕಾರ್ಮಿಕರಿಗೆ ನ್ಯಾಯಯುತವಾಗಿ ಸಿಗುತ್ತಿಲ್ಲ.

ಹೀಗೇಕಾಯಿತು ? ಬಲವುಳ್ಳವರ ಪ್ರಭಾವ ಹೆಚ್ಚಾಗಿರುವುದು ಕಂಡುಬರುತ್ತದೆ. ಮುಖ್ಯವಾಗಿ ಪಡಿತರ ಚೀಟಿ ವಿತರಿಸಲು ನಡೆಸಲಾಗಿರುವ ಸರ್ವೆಯೇ ಕ್ರಮಬದ್ಧವಾಗಿಲ್ಲ. ವ್ಯವಸ್ಥೆ ಕುಸಿಯಲು ಕೆಲವು ಕಾರಣಗಳಿವು :

* ನ್ಯಾಯಬೆಲೆ ಅಂಗಡಿ ಮಾಲಿಕತ್ವವನ್ನ ಅಧಿಕಾರದಲ್ಲಿದ್ದ ಪಕ್ಷದ ಅಥವಾ ಶಾಸಕನ ಏಜೆಂಟರಿಗೆ ನೀಡಿರುವುದು.
* ಎಲ್ಲಿಯೋ ಕುಳಿತು, ಯಾರದೋ ಮರ್ಜಿಗೆ ಒಳಗಾಗಿ ಕಾರ್ಡ್ ವಿತರಣೆಯ ಕಾರ್ಯದ ಸರ್ವೆಯನ್ನು ಮಾಡಿರುವುದು.
* ಸರ್ಕಾರದ ನೀತಿ - ನಿರ್ಧಾರಗಳನ್ನು ರೂಪಿಸುವ ದೊಡ್ಡ ಅಧಿಕಾರಿಗಳಿಗೆ, ಅವರ ಪ್ರತಿರೂಪವಾದ ರಾಜಕಾರಣಿಗಳಿಗೆ, ಜನರ ಸ್ಥಿತಿಗತಿಯ ಪರಿಚಯವೇ ಆಗದಿರುವುದು.

ಈ ರೀತಿಯ ಕಾರ್ಯಾಚರಣೆಯಿಂದ ಸುಳ್ಳು ಪಡಿತರ ಕಾರ್ಡ್‌ಗಳ ಸಂಖ್ಯೆ ಹೆಚ್ಚಾಗಿದೆ. ಮೊನ್ನೆ-ಮೊನ್ನೆಯ ಸಮೀಕ್ಷೆಯಲ್ಲಿ ಇಂತಹ ಸುಮಾರು ಎಂಟು ಲಕ್ಷಕ್ಕೂ ಅಧಿಕ ಕಾರ್ಡ್‌ಗಳು ಪತ್ತೆಯಾಗಿವೆ. ಯಾವುದೋ ಲಾಬಿ, ಒತ್ತಡಗಳಿಗೆ ಒಳಗಾಗಿ ನೀಡಲ್ಪಟ್ಟ ಬಹುತೇಕ ಪಡಿತರ ಚೀಟಿಗಳಿಂದ ನಿಜವಾಗಿಯೂ ಯಾರ ತಂಟೆಗೂ ಹೋಗದೆ ತನ್ನನ್ನ ಎಲ್ಲಿಯೂ ಗುರುತಿಸಿಕೊಳ್ಳದ ಮನುಷ್ಯನಿಗೆ ಅಪಾರ ಹಾನಿಯುಂಟಾಗಿದೆ.

ಈ ದಿಸೆಯಲ್ಲಿ ಪಡಿತರ ಚೀಟಿಯನ್ನು ವಿತರಿಸುವಾಗ ಸಾರ್ವಜನಿಕ ಪಡಿತರ ಚೀಟಿಯನ್ನು ಮತ್ತಷ್ಟು ಕಾಯಕಲ್ಪಕ್ಕೆ ಒಳಗಾಗಿಸಲು ಪಾರದರ್ಶಕತೆಯನ್ನು ತರಲು ಈ ಕೆಳಕಂಡ ಅಂಶಗಳನ್ನು ಯೋಜನೆಯಲ್ಲಿ ಅಳವಡಿಸಿಕೊಂಡರೆ ಉತ್ತಮವಾಗಬಹುದೆಂಬುದು ನನ್ನ ಅಭಿಮತ. ಅವು ಹೀಗಿವೆ :

* ಪಡಿತರ ಚೀಟಿ ವಿತರಿಸುವ ಮುನ್ನ ಗ್ರಾಮಪಂಚಾಯ್ತಿ ಕಾರ್ಯದರ್ಶಿ ಇಲ್ಲಾ ಗ್ರಾಮ ಲೆಕ್ಕಿಗರಿಂದ ಆರ್ಥಿಕ ಸಮೀಕ್ಷೆ ನಡೆಸಬೇಕು. ಇಲ್ಲಿ ಜಾತಿ - ಧರ್ಮವನ್ನು ತರದೆ ನಿಜವಾದ ಬಡವರು ಎಷ್ಟಿದ್ದಾರೆ ಎಂಬುದನ್ನು ಕಂಡುಕೊಳ್ಳಬೇಕು.
* ಕಾರ್ಡ್ ವಿತರಣೆಯಲ್ಲಿ ಮೀಸಲಾತಿ ನಿಯಮಗಳನ್ನು ಅನ್ವಯಿಸದೆ, ಎಲ್ಲರೂ ಅನ್ನವನ್ನೇ ತಿನ್ನುವುದರಿಂದ, ಎಲ್ಲಾ ಜಾತಿಯ ನಿಜವಾದ ಬಡವರಿಗೆ ಸೌಲಭ್ಯ ದಕ್ಕಬೇಕು.
* ಗ್ರಾಮ ಪಂಚಾಯಿತ್ತಿಯು ವಿತರಣೆಯ ಜವಾಬ್ದಾರಿ ವಹಿಸಿಕೊಳ್ಳಬೇಕು. ಈ ಕಾರ್ಯವನ್ನು ರಾಜಕೀಯದಿಂದ ಮುಕ್ತವಾದ ಒಂದು ಸಮಿತಿಗೆ ವಹಿಸಬೇಕು. ಅದರಲ್ಲಿ ಕೋಮುವಾರು ಮುಖಂಡರು, ಗ್ರಾಮ ಪಂಚಾಯ್ತಿ ಸದಸ್ಯರು, ಆಯ್ದ ಶಿಕ್ಷಕರು, ಆರೋಗ್ಯ ಸಹಾಯಕರು, ಕೃಷಿ ಸಹಾಯಕರು, ಗ್ರಾಮ ಲೆಕ್ಕಿಗರು ಹಾಗೂ ಗ್ರಾಮ ಪಂಚಾಯಿತಿ ಕಾರ್ಯದರ್ಶಿ ಇರಬೇಕು. ಈ ಸಮಿತಿಯು 'ತನಿಖಾ ಸಮಿತಿ'ಯಾಗಿಯೂ ಕಾರ್ಯನಿರ್ವಹಿಸಿ ತೂಕ, ಅಳತೆ, ದಾಸ್ತಾನು ಹಾಗೂ ಸಾರ್ವಜನಿಕ ದೂರುಗಳ ಬಗ್ಗೆ ಪರಿಶೀಲಿಸಬೇಕು.
* ಗ್ರಾಮದಲ್ಲಿ ವಾಸ ಮಾಡುವ ಪ್ರತಿಯೊಬ್ಬರಿಗೂ ಕಾರ್ಡ್ ನೀಡಬೇಕು. ಕಡುಬಡವರಿಗೆ ನೀಡಲ್ಪಡುವ ಹಸಿರು/ಹಳದಿ ಕಾರ್ಡ್‌ಗಳ ಆಯ್ಕೆ ಹೆಚ್ಚು ಪಾರದರ್ಶಕವಾಗಿರಬೇಕು.
* ಪಡಿತರ ವಿತರಣೆ ಕುಟುಂಬದ ಸದಸ್ಯರ ಸಂಖ್ಯೆಯನ್ನು ಅವಲಂಬಿಸಿರಬೇಕು. ಕುಟುಂಬದಲ್ಲಿ ಸದಸ್ಯರ ಸಂಖ್ಯೆ ಹೆಚ್ಚಿದಷ್ಟೂ ನೀಡಲ್ಪಡುವ ಪಡಿತರ ಪ್ರಮಾಣ ಕೂಡ ಹೆಚ್ಚಿರಬೇಕು.
* ಪಡಿತರ ಧಾನ್ಯಗಳ ಬೆಲೆ ಕಡಿಮೆಯಿರಬೇಕು; ಜೊತೆಗೆ ಅದರ ಗುಣಮಟ್ಟವು ಉತ್ತಮವಾಗಿರಬೇಕು.
* ಸ್ಥಳೀಯ ಪರಿಸರದಲ್ಲಿ ದೊರೆಯುವ ಆಹಾರ ಸಾಮಗ್ರಿಗಳನ್ನು ಕೊಂಡು, ಅದನ್ನು ಮಾರಾಟ ಮಾಡುವ ವ್ಯವಸ್ಥೆಯಾಗಬೇಕು. ಇದರಿಂದ ರೈತರಿಗೆ ಬೆಂಬಲ ಬೆಲೆಯ ಭರವಸೆ ಸಿಕ್ಕಂತಾಗುತ್ತದೆ.
* ಪಡಿತರವನ್ನು ಕಾಯ್ದಿರಿಸುವ ವ್ಯವಸ್ಥೆಯಾಗಬೇಕು. ತಿಂಗಳ ಇಂತಹ ದಿನಾಂಕದೊಳಗೆ ಕಾರ್ಡ್‌ದಾರ ಪಡೆಯುವಂತಿರಬೇಕು. ಹಸಿರು ಕಾರ್ಡ್/ಹಳದಿ ಕಾರ್ಡ್‌ದಾರರಿಗೆ ಸಮಯದ ನಿರ್ಬಂಧವಿರಬಾರದು.
* ನ್ಯಾಯಬೆಲೆ ಅಂಗಡಿಗಳಲ್ಲಿ ಸಮಯ - ದಿನ, ಕರ್ತವ್ಯ ನಿರ್ವಹಣೆಯ ವಿವರವಿರಬೇಕು. ಪಡಿತರ ಬಂದ ಕೂಡಲೆ ಮಾರಿ ಬೀಗ ಜಡಿದು ಹೋಗುವುದನ್ನು ತಡೆಯಬೇಕು. ಅದಕ್ಕಾಗಿ ನ್ಯಾಯಬೆಲೆ ಅಂಗಡಿಯ ಮಾಲಿಕನಿಗೆ ಗೌರವಧನ ಅಥವಾ ಸಂಬಳ ನೀಡುವಂತಾಗಬೇಕು. ಧಾನ್ಯದ ಅಪವ್ಯಯವಾದಾಗ ಅವನಿಗೆ ಕಠಿಣ ಶಿಕ್ಷೆ ನೀಡಬೇಕು.
* ಪ್ರತಿ ಅಂಗಡಿಯ ಮುಂದೆ ಲಭ್ಯವಿರುವ ಆಹಾರ ಸಾಮಗ್ರಿಗಳ ದಾಸ್ತಾನು, ವಿತರಣೆಗೆ ಇರುವ ಕೊನೆಯ ದಿನಾಂಕ ಇತ್ಯಾದಿಗಳನ್ನು ಬರೆದಿರಬೇಕು.
* ಗ್ರಾಹಕರಿಗೆ ಮೋಸ ಮಾಡುವ ಅಂಗಡಿಯ ಲೈಸೆನ್ಸನ್ನು ರದ್ದುಗೊಳಿಸಬೇಕು.

ಇಂತಹ ಆಲೋಚನೆಗಳನ್ನು ಸರ್ಕಾರ ಈ ಯೋಜನೆಯಲ್ಲಿ ಅಳವಡಿಸಿಕೊಂಡು ಜಾರಿಗೊಳಿಸಲು ಇಚ್ಛಾಶಕ್ತಿಯನ್ನು ಪ್ರಕಟಿಸಿದ್ದೇ ಆದಲ್ಲಿ ಈ ಯೋಜನೆಗೆ ಮತ್ತೆ ಹೊಸ ಕಳೆ ಬರಬಹುದು. ಕಾಯಕಲ್ಪದಿಂದ ಮತ್ತೆ ಬಡ-ಬಗ್ಗರು ನ್ಯಾಯಬೆಲೆ ಅಂಗಡಿ ಬಾಗಿಲಿಗೆ ಬರುವಂತಾಗುತ್ತದೆ.

ಇಲ್ಲದಿದ್ದರೆ 'ಸಾರ್ವಜನಿಕ ಪಡಿತರ ಪದ್ಧತಿ' ಎಂಬ ಹೆಸರೇ ಹಾಸ್ಯಾಸ್ಪದವಾಗಿರುತ್ತದೆ.

ಬಲ್ಲೇನಹಳ್ಳಿ ಎ. ಮಂಜುನಾಥ್
ಕೆ. ಆರ್. ಪೇಟೆ, ಬಲ್ಲೇನಹಳ್ಳಿ ಅಂಚೆ, ಬೂಕನಕೆರೆ ಮಾರ್ಗ
ಮಂಡ್ಯ ಜಿಲ್ಲೆ - ೫೭೧ ೮೧೧

## ಬಾ ಒಳಗೆ....

ಕರೆ ಗಂಟೆ ಸದ್ದು :
ಬಂದವರು ಯಾರು ?
ಘಂಟೆ ಹನ್ನೆರಡು
ಕೆಲಸದಾಕೆ ಇರಬೇಕು. ಆದರೆ

ಬಂದಿದ್ದು.... ಮೀನಾ
ತೆರೆದಿದೆ ಬಾಗಿಲು
ಬಾ ಒಳಗೆ
ಹೇಗಿದ್ದೀಯಾ....?



ಯಾರು ತಿಳಿಸಿದರು ವಿಳಾಸ !
ಮನೆಯಲ್ಲಿ ನಾನೀಗ ಒಂಟಿ.
ಚೊಚ್ಚಲ ಹೆರಿಗೆಗೆ
ನೆನ್ನೆ ಸಂಜೆ ತಾನೇ
ತೌರಿಗೆ ಹೋದಳು ಮಡದಿ
ಫ್ಯಾನ್ ಹಾಕಲೆ ? ಗಾಳಿ
ಬೀಸಲಿ.
ಮೊದಲು ಸ್ವಲ್ಪ ನಿಂಬೆ
ರಸ ಕುಡಿ.
ನಂತರ ಮಾತನಾಡೋಣ
ಕುಳಿತು ಮಂಚದಲಿ.

ನಲ್ಲೂರು ಚಲಪತಿ
ಸಹಶಿಕ್ಷಕರು, ಸರ್ಕಾರಿ ಪ್ರೌಢಶಾಲೆ
ಮುದುವಾಡಿ ಪೋಸ್ಟ್, ಕೋಲಾರ.



# ಹುಣ್ಣಿಮೆಯಿಂದ ಹುಣ್ಣಿಮೆಯವರೆಗೆ

**ನ**ವೆಂಬರ್‌ನ ಅವಧಿಯೇ ಹೀಗಿದೆ. ಹುಣ್ಣಿಮೆಯಿಂದ ಹುಣ್ಣಿಮೆಯವರೆಗೆ. ಹೀಗೆ ಒಂದೇ ಕ್ಯಾಲೆಂಡರ್ ತಿಂಗಳಲ್ಲಿ (ಜನವರಿ, ಫೆಬ್ರವರಿ ಮುಂತಾದವು) ಎರಡು ಹುಣ್ಣಿಮೆಗಳು ಬಂದರೆ, ಎರಡನೆಯ ಹುಣ್ಣಿಮೆಯ ಚಂದ್ರನಿಗೆ ನೀಲಿಚಂದ್ರ (Blue Moon) ಎಂಬ ಅಡ್ಡ ಹೆಸರಿದೆ. ಅಂದರೆ ಇದು ಅಪೂರ್ವವಾದುದು ಎಂದರ್ಥ ಅಷ್ಟೇ.

ಚಾಂದ್ರಮಾನ ಮಾಸದ ಹೆಸರುಗಳಿಗೂ, ನಕ್ಷತ್ರಗಳ ಹೆಸರುಗಳಿಗೂ ಇರುವ ನಂಟು ತಿಳಿದದ್ದೇ ಆಗಿದೆ. ಕಳೆದೆರಡು ಮೂರು ತಿಂಗಳಲ್ಲಿ ಸ್ವಲ್ಪ ತಪ್ಪಿದಂತಾಗಿದ್ದ ಲೆಕ್ಕ ಅಧಿಕಮಾಸದ ಸೇರ್ಪಡೆಯ ಕಾರಣ ಮತ್ತೆ ಸರಿಹೊಂದಿದೆ. ನವೆಂಬರ್ ೧ರಂದು ರಾತ್ರಿ ೯ ಗಂಟೆ ೧೧ ನಿಮಿಷಕ್ಕೆ ಹುಣ್ಣಿಮೆ. (ಹುಣ್ಣಿಮೆ ಎಂಬುದು ಒಂದು ಘಟನೆ; ದಿನವಲ್ಲ). ಅಂದು ಚಂದ್ರನ ಸ್ಥಾನವನ್ನು ಗಮನಿಸಿ. ಸುಲಭವಾಗಿ ಗುರುತಿಸಬಹುದಾದ ಕೃತ್ತಿಕಾ ಪುಂಜಕ್ಕೂ ಪೆಗಸಸ್ (ನಕುಲ) ಪುಂಜಕ್ಕೂ ನಡುವೆ ಕಂಡುಬರುತ್ತದೆ. ಇದರ ಸಮೀಪ ಇರುವ ಕ್ಷೀಣ ತ್ರಿಕೋಣವೇ ಮೇಷ; ಅದರಲ್ಲಿಯ ಪ್ರಮುಖ ನಕ್ಷತ್ರವೇ ಅಶ್ವಿನಿ. ಹಾಗಾಗಿ ಇದು ಆಶ್ವಯುಜ ಮಾಸದ ಹುಣ್ಣಿಮೆ. ತಿಂಗಳ ಪೂರ್ತಿ ಚಂದ್ರನ ಓಟವನ್ನು ಗಮನಿಸುತ್ತಾ ಬನ್ನಿ. ಪುನಃ ೩೦ಕ್ಕೆ ಹುಣ್ಣಿಮೆ. ಅಂದು ಚಂದ್ರನ ಸ್ಥಾನ ಕೃತ್ತಿಕಾ ಪುಂಜದ ಸಮೀಪ. ಅದು ಕಾರ್ತೀಕ ಮಾಸದ ಹುಣ್ಣಿಮೆ.

ಹುಣ್ಣಿಮೆ ಎಂಬುದೊಂದು ಘಟನೆ ಎಂದೆನಲ್ಲವೇ ? ೩೦ರ ಹುಣ್ಣಿಮೆಯ ಸಮಯ ರಾತ್ರಿ ೨ ಗಂಟೆ ೧೯ ನಿಮಿಷಕ್ಕೆ. ಅಂದರೆ ಆ ತಾರೀಖು ಡಿಸೆಂಬರ್ ೧ ಆಯಿತಲ್ಲವೇ ? ಹಾಗಾದರೆ ನಾವಿದನ್ನು 'ನೀಲಿಚಂದ್ರ' ಎಂದು ಕರೆಯಬಹುದೇ ? ಹೀಗೊಂದು ಪ್ರಶ್ನೆ ಏಳುತ್ತದೆ. ಆದರೆ ಲೋಕಾರೂಢಿಯಂತೆ ೩೦ನ್ನು ಹುಣ್ಣಿಮೆ ಎಂದು ಕರೆಯುವುದರಿಂದ, ಮತ್ತು ನೀಲಿಚಂದ್ರ ಎಂಬ ಪದಕ್ಕೆ ಖಗೋಳ ವೈಜ್ಞಾನಿಕವಾದ ಯಾವುದೇ ಅರ್ಥವೂ ಇರುವುದಿಲ್ಲವಾದ್ದರಿಂದ ಈ ಪ್ರಯೋಗ ಸಾಧು ಎನ್ನಬಹುದು. ನುಡಿಗಟ್ಟುಗಳಿಗೂ ನಿಖರತೆ ಬೇಕಿರುವವರು ಡಿಸೆಂಬರ್ ೩೦ರ ಚಂದ್ರನನ್ನು ನೀಲಿಚಂದ್ರ ಎಂದು ಕರೆದು ಸಮಾಧಾನ ಮಾಡಿಕೊಳ್ಳಬಹುದು.

ಡಾ|| ಬಿ. ಎಸ್. ಶೈಲಜಾ

ನವೆಂಬರ್ ತಿಂಗಳಲ್ಲಿ ಆಕಾಶ ಸಾಧಾರಣವಾಗಿ ಶುಭ್ರವಾಗಿರುತ್ತದೆ. ಆದ್ದರಿಂದ ಕಳೆದೆರಡು ಮೂರು ತಿಂಗಳುಗಳಲ್ಲಿ ಗುರುತಿಸಲಾಗದೇ ಬಿಟ್ಟಿದ್ದ ಕೆಲವು ನಕ್ಷತ್ರ ಪುಂಜಗಳನ್ನು ಈಗ ನೋಡಬಹುದು. ತಿಂಗಳ ಆರಂಭದಲ್ಲಿ ಸಂಜೆ ಪಶ್ಚಿಮದ ಅಂಚಿನಲ್ಲಿ ವೃಶ್ಚಿಕರಾಶಿಯ ಬಾಲದ ಭಾಗವನ್ನು ಕಾಣಬಹುದು. ತಿಂಗಳ ಕೊನೆಯ ಹೊತ್ತಿಗೆ ಇದು






ಸಾಧ್ಯವಾಗುವುದಿಲ್ಲ. ಆದರ ಪಕ್ಕದ ಧನುರಾಶಿಯನ್ನು (ಟೀಕಪ್ ಎಂದು ಅಡ್ಡಹೆಸರಿರುವ ಭಾಗವನ್ನು) ಕಾಣಬಹುದು. ಉತ್ತರದಲ್ಲಿ– ನಿಖರವಾಗಿ ಹೇಳುವುದಾದರೆ ವಾಯವ್ಯ ದಿಕ್ಕಿನಲ್ಲಿ – ''ಬೇಸಿಗೆಯ ತ್ರಿಕೋಣ''ವನ್ನು ಕಾಣಬಹುದು. ಇದರ ಪ್ರಮುಖ ಮೂರು ನಕ್ಷತ್ರಗಳು ಶ್ರವಣ (ಆಲ್ಟೇರ್, ಆಲ್ಫಾ, ಅಕ್ವಿಲಾ - ಗರುಡ ನಕ್ಷತ್ರ ಪುಂಜದ್ದು), ಹಂಸಾಕ್ಷಿ (ಡೆನೆಬ್, ಆಲ್ಫಾ ಸಿಗ್ನಸ್, ರಾಜಹಂಸ ನಕ್ಷತ್ರಪುಂಜದ್ದು) ಮತ್ತು ಅಭಿಜಿತ್ (ವೇಗಾ, ಆಲ್ಫಾ, ಲೈರಾ, ವೀಣಾ ನಕ್ಷತ್ರಪುಂಜದ್ದು). ಪೂರ್ವದಲ್ಲಿ ಪೆಗಸಸ್ (ನಕುಲ) ಪುಂಜದ ಚೌಕ, ಅದರ ದಕ್ಷಿಣಕ್ಕೆ ಮೀನಾಕ್ಷಿ (ದಕ್ಷಿಣ ಮೀನ ಪುಂಜದ್ದು, ಫಾಮಲ್ ಹೌಟ್) ಇವು ಕಾಣುತ್ತವೆ.

ಕಳೆದೈದಾರು ತಿಂಗಳುಗಳಿಂದ ಎಲ್ಲ ನಕ್ಷತ್ರಗಳನ್ನೂ ಮೀರಿಸುವ ಪ್ರಕಾಶದಿಂದ ಕೋರೈಸುತ್ತಿದ್ದ ಮಂಗಳಗ್ರಹ ಈಗ ಕ್ಷೀಣಿಸಿದೆ. ಅಭಿಜಿತ್ ನಕ್ಷತ್ರಕ್ಕಿಂತ ಮಂಕಾಗಿದೆ. ಆದರೂ ಮಿನುಗದೇ ಇರುವ ಸುಳಿವಿನಿಂದ ಮತ್ತು ತಿಳಿಗೆಂಪು ಬಣ್ಣದ ಕಾರಣ ಸುಲಭವಾಗಿ ಪತ್ತೆಯಾಗುತ್ತದೆ. ಮಕರರಾಶಿಯ ತ್ರಿಕೋಣದ ಒಂದು ಭುಜದಿಂದ ಇನ್ನೊಂದು ಭುಜಕ್ಕೆ ಪಯಣಿಸಲು ಅದಕ್ಕೆ ಈ ತಿಂಗಳ ಪೂರ್ತಿಯ ಅವಧಿಯೇ ಬೇಕು. ಕ್ಷೀಣವಾದ ಮಕರರಾಶಿಯ ನಕ್ಷತ್ರಗಳನ್ನು ಗುರುತು ಮಾಡಿಕೊಳ್ಳಲು ಇದು ಒಳ್ಳೆಯ ಅವಕಾಶ.

ಮಕರರಾಶಿಯಲ್ಲೇ ಕಾಣುವ ಯುರೇನಸ್ ಮತ್ತು ನೆಪ್ಚೂನ್‌ಗಳನ್ನು ಪತ್ತೆ ಮಾಡಲು ಈ ಅವಕಾಶವನ್ನು ಬಳಸಿಕೊಳ್ಳಬಹುದು. ಆದರೆ ಇದಕ್ಕೆ ದುರ್ಬೀನು ಅವಶ್ಯಕ. ೧೮ರಂದು ನೆಪ್ಚೂನಿನಿಂದ ೨½ ಡಿಗ್ರಿ ದಕ್ಷಿಣದಲ್ಲಿ ಮಂಗಳ ಕಾಣುತ್ತದೆ; ೪ರಂದು ಯುರೇನಸ್‌ನಿಂದ ೧ ಡಿಗ್ರಿ ದಕ್ಷಿಣಕ್ಕಿರುತ್ತದೆ. ೨೧ರಂದು ಈ ಭಾಗದಲ್ಲಿ ಚಂದ್ರನೂ ಸೇರಿಕೊಳ್ಳುತ್ತದೆ. ಛಾಯಾಗ್ರಾಹಕರಿಗೆ ಸದವಕಾಶ.

ಎರಡು ಬಾರಿ ಹುಣ್ಣಿಮೆಯಾಗುವ ಈ ತಿಂಗಳಲ್ಲಿ ಇನ್ನೊಂದು ಬಗೆಯ 'ಗ್ರಹಣ'ವೂ ಎರಡು ಬಾರಿ ಆಗಲಿದೆ. ಸೂರ್ಯನ ಬದಲು, ಚಂದ್ರ ಶನಿಗ್ರಹವನ್ನು ಮರೆ ಮಾಡುತ್ತದೆ. ಸೂರ್ಯಾಸ್ತವಾದ ಸುಮಾರು ಒಂದು ಗಂಟೆಯ ನಂತರ ಉದಯಿಸುವ ಶನಿಗ್ರಹ ಈಗ ಸಾಕಷ್ಟು ಪ್ರಕಾಶಮಾನವಾಗಿದೆ. ಸಮೀಪದ ಕೆಂಪು ನಕ್ಷತ್ರ ರೋಹಿಣಿಯೊಡನೆ ಪ್ರಕಾಶದ ಸ್ಪರ್ಧೆ ನಡೆಸಿದೆ. ದುರ್ಬೀನಿನಿಂದ ಉಂಗುರಗಳ ಸುಳಿವು ಸಿಗಬಹುದಷ್ಟೇ. ಸಣ್ಣ ದೂರದರ್ಶಕಗಳು ಉಂಗುರದ ವಿವರಗಳನ್ನೂ ತೋರಿಸಿಕೊಡಬಲ್ಲವು. ಇದು ಈಗ ಹಿನ್ನಡೆಯಲ್ಲಿದೆ. ಆದರೆ ಚಲನೆ ಗುರುತಿಸುವಷ್ಟು ಸ್ಪಷ್ಟವಾಗಿಲ್ಲ. ನವೆಂಬರ್ ೩ರಂದು ಚಂದ್ರ

## ಆಗಸದಲ್ಲಿ ದೀಪಾವಳಿ

*ಎರಡು ವರ್ಷಗಳ ಹಿಂದೆ ಲಿಯೋನಿಡ್ ಉಲ್ಕಾವೃಷ್ಟಿ ಲೆಕ್ಕ ಹಾಕಿದ್ದಕ್ಕಿಂತ ಹನ್ನೆರಡು ಗಂಟೆ ಮುಂಚಿತವಾಗಿಯೇ ಗರಿಷ್ಠ ತಲುಪಿತ್ತು. ಈ ಬಗ್ಗೆ ವಿವರವಾಗಿ ಅಧ್ಯಯನ ನಡೆಸಿದುದರಿಂದ ಗರಿಷ್ಠ ಎರಡು ಬಾರಿ ಉಂಟಾಯಿತು ಎಂಬ ಅಂಶ ತಿಳಿಯಿತು. ಮುನ್ನೂರು ವರ್ಷ ಹಿಂದೆ ಬಿಟ್ಟುಹೋದ ದೂಳು, ಇನ್ನೂರು ವರ್ಷ ಹಿಂದೆ ಬಿಟ್ಟು ಹೋದ ದೂಳು - ಹೀಗೆ ದೂಳಿನ ಬೇರೆ ಬೇರೆ ಗುಂಪುಗಳನ್ನು ಗುರುತಿಸುವುದು ಸಾಧ್ಯವಾಯಿತು. ೧೭೬೬ರಲ್ಲಿ ಬಿಟ್ಟುಹೋದ ದೂಳು ನವೆಂಬರ್ ೧೮ರ ಮಧ್ಯಾಹ್ನ ೩:೩೦ರ ಹೊತ್ತಿಗೆ ಗರಿಷ್ಠ ಸಂಖ್ಯೆಯ ಉಲ್ಕೆಗಳನ್ನು (ಗಂಟೆಗೆ ಸುಮಾರು ೪೦೦೦) ಸುರಿಸುತ್ತದೆ. ೧೮೬೬ರ ದೂಳಿನ ವೃಷ್ಟಿ ಸುಮಾರು ೪ ಗಂಟೆಗೆ ಗರಿಷ್ಠ ಮುಟ್ಟುತ್ತದೆ. ೧೬೯೯ರ ದೂಳಿನ ವೃಷ್ಟಿ ಸಂಜೆ ೬:೩೦ಕ್ಕೆ ಗರಿಷ್ಠ ಮುಟ್ಟುವುದು. ಆದರೆ ಈ ಸಮಯದಲ್ಲಿ ಭಾರತಕ್ಕೆ ದೂಳಿನ ದಿಕ್ಕು ಅನುಕೂಲಕರವಾಗಿಲ್ಲ. ಅತಿ ಹೆಚ್ಚಿನ ಸಂಖ್ಯೆಯ ದೂಳಿನ ಕಣಗಳಿರುವ ೧೬೯೯ರ ಗುಂಪು ಗಂಟೆಗೆ ೧೨,೦೦೦ ಉಲ್ಕೆಗಳನ್ನು ಸೃಷ್ಟಿಸಬಹುದೆಂದು ಅಂದಾಜು. ಇದು ಮಧ್ಯರಾತ್ರಿ ೧.೩೦ರ ಹೊತ್ತಿಗೆ ಗರಿಷ್ಠ ಮುಟ್ಟುತ್ತದೆ. ಜಪಾನ್, ಆಸ್ಟ್ರೇಲಿಯಾ ಈ ಭೂಭಾಗಗಳಲ್ಲಿರುವವರಿಗೆ ಅಂದು ದೀಪಾವಳಿಯ ಸುಗ್ಗಿ. ನಮಗೆ ಗಂಟೆಗೆ ೧೦೦-೨೦೦ ಕಾಣಬಹುದಷ್ಟೇ. ಕಣ್ಣಿಗೆ ಕಾಣದ ಈ ದೂಳಿನ ಕಣಗಳ ಬಗ್ಗೆ ಲೆಕ್ಕ ಹಾಕುವಾಗ ಅನೇಕ ಪರಿಕಲ್ಪನೆಗಳನ್ನು ಅಳವಡಿಸಿಕೊಳ್ಳಬೇಕಾಗುತ್ತದೆ. ಅವುಗಳ ಪರೀಕ್ಷೆ ಮಾಡಬೇಕಾದರೆ ೧೭, ೧೮, ೧೯, ೨೦ - ಈ ರಾತ್ರಿಗಳಲ್ಲಿ ಆಕಾಶವನ್ನು ಗಮನಿಸುವುದು ಒಳ್ಳೆಯದು. ಲೆಕ್ಕದಲ್ಲಿ ವ್ಯತ್ಯಾಸವಾಗಬಹುದು. ದೀಪಾವಳಿಯ ನೋಟ ನಮಗೇ ಸಿಗಬಹುದು.*

ಶನಿಗೆ ಅಡ್ಡಬಂದು ಉಂಟುಮಾಡುವ 'ಗ್ರಹಣ' ಏಷ್ಯಾದ ಉತ್ತರ ಭಾಗಕ್ಕೆ ಕಾಣುತ್ತದೆ. ನಮಗೆ ಅವೆರಡೂ ಅಂಟಿಕೊಂಡಿವೆಯೇನೋ ಎಂಬಂತೆ ಕಾಣುತ್ತದೆ. ನವೆಂಬರ್ ೩೦ರಂದು ಇದೇ ಗ್ರಹಣದ ಪುನರಾವರ್ತನೆ. ಆಗಲೂ ನಮಗೆ ಅವೆರಡರ ಸಾಮೀಪ್ಯ ಮಾತ್ರ ಗೋಚರ. ಉತ್ತರ ಅಮೆರಿಕದವರಿಗೆ ಗ್ರಹಣದ ನೋಟ ಲಭ್ಯ.

ಇನ್ನೊಂದು ಪ್ರಕಾಶಮಾನ ಗ್ರಹ ಗುರು ಮಿಥುನ ರಾಶಿಯಲ್ಲಿದೆ. ರಾತ್ರಿ ಸುಮಾರು ಒಂಬತ್ತು ಗಂಟೆಗೆ ಉದಯಿಸುತ್ತದೆ. ನವೆಂಬರ್ ೫ರಂದು ಚಂದ್ರ ಮತ್ತು ಗುರು ಪರಸ್ಪರ ಸಮೀಪ ಇರುವಂತೆ ಕಾಣುತ್ತವೆ.

ಬೆಳಗಿನ ಜಾವ 'ಜಾಗಿಂಗ್' ಹೋಗುವವರು, ಬುಧ ಮತ್ತು ಶುಕ್ರ ಗ್ರಹಗಳ ಜೂಟಾಟವನ್ನು ನೋಡಬಹುದು. ಇದು ತಿಂಗಳ ಮೊದಲ ವಾರ ಮಾತ್ರ ಸಾಧ್ಯ. ದಿನದಿನಕ್ಕೆ ಇವು ದಿಗಂತದಂಚಿಗೆ ಸರಿಯುತ್ತವೆ. ಈ ಓಟದಲ್ಲಿ ಬುಧ ಮುಂದು. ಎರಡೂ ಗ್ರಹಗಳ ಚಲನೆ, ಪ್ರಕಾಶದ ವ್ಯತ್ಯಾಸ, ಗುರುತಿಸಲು ಇದು ಒಳ್ಳೆಯ ಅವಕಾಶ. ಮುಂದೆ ಓಡುವ ಬುಧ ತಿಂಗಳ ಕೊನೆಗೆ ಸಾಯಂಕಾಲ ಪಶ್ಚಿಮದಂಚಿನಲ್ಲಿ ಕಾಣಿಸಿಕೊಳ್ಳುತ್ತದೆ. ಬೆಳಗಿನ ಜಾವ ಶುಕ್ರವೂ ಸಂಧ್ಯಾಪ್ರಕಾಶದಲ್ಲಿ ಕರಗಿಹೋಗಿ, ಗುರುತಿಸುವುದೇ ಕಷ್ಟವಾಗುತ್ತದೆ.

ನವೆಂಬರ್ ೧೮ರಂದು ಲಿಯೋನಿಡ್ ಉಲ್ಕಾವೃಷ್ಟಿಯ ಗರಿಷ್ಠ. ಸಾಕಷ್ಟು ಪ್ರಚಾರ ಪಡೆದಿರುವ ಇದು ಸ್ವಿಫ್ಟ್-ಟಟಲ್ ಹೆಸರಿನ ಧೂಮಕೇತುವಿನ ಬಾಲದ ತುಣುಕುಗಳು. ಪ್ರತಿಬಾರಿ ಬಂದು ಹೋದಾಗಲೂ ಈ ಧೂಮಕೇತು ಬಿಟ್ಟುಹೋಗಿರುವ ಕಣಗಳ ಗುಂಪನ್ನು ಈಗ ಅಂದಾಜು ಮಾಡಲಾಗಿದೆ.

ಡಾ|| ಬಿ. ಎಸ್. ಶೈಲಜಾ
ಜವಹರಲಾಲ್ ನೆಹರೂ ತಾರಾಲಯ, ಬೆಂಗಳೂರು -೫೬೦ ೦೦೧

## ವಿನೋದ ಗಣಿತ

### ಅಕ್ಟೋಬರ್ ತಿಂಗಳ ಪ್ರಶ್ನೆಗೆ ಉತ್ತರ

ಸಾಲಾಗಿ ಒಂದರ ಪಕ್ಕದಲ್ಲೊಂದು ಇರುವ ಎಂಟು ಮಂದಿರಗಳನ್ನು ಒಂದು ಕೊನೆಯಿಂದ ಆರಂಭಿಸಿ ೧, ೨,....೮ನೆಯ ಮಂದಿರವೆಂದು ಗುರುತಿಸೋಣ. ಯಾವುದೇ ಕ್ಷಣದಲ್ಲಿ ಎಂಟು ಭಕ್ತರು ಈ ಮಂದಿರಗಳಲ್ಲಿ ಸೇರಿಕೊಂಡಿರುತ್ತಾರಷ್ಟೆ (ಆರಂಭದಲ್ಲಿ ಪ್ರತಿಮಂದಿರದಲ್ಲೂ ಒಬ್ಬ ಮಾತ್ರ ಇರುತ್ತಾನೆಂಬುದನ್ನು ನೆನಪಿನಲ್ಲಿಟ್ಟುಕೊಳ್ಳಿ). ಅಂತಹ ಒಂದು ನಿರ್ದಿಷ್ಟ ಸಂದರ್ಭದಲ್ಲಿ ಯಾವ ಯಾವ ಭಕ್ತ ಯಾವ ಮಂದಿರದಲ್ಲಿದ್ದಾನೆಂಬುದನ್ನು ನೊಂದಾಯಿಸಿ, ಅಂತಹ ಪ್ರತಿಯೊಬ್ಬ ಭಕ್ತನಿಗೂ ಅವನು ಪ್ರಸ್ತುತ ಇರುವ ಮಂದಿರದ ಸಂಖ್ಯೆ ಯಾವುದೋ ಅದೇ ಸಂಖ್ಯೆಯಷ್ಟು 'ಅಂಕ'ವನ್ನು ಕೊಡೋಣ. ಹೀಗೆ ಎಂಟು ಭಕ್ತರಿಗೆ ಕೊಟ್ಟ ಅಂಕಗಳ ಒಟ್ಟು ಮೊತ್ತವನ್ನು 'ಜ' ಎನ್ನೋಣ.

ಉದಾಹರಣೆಗೆ : ೧. ಆರಂಭದಲ್ಲಿ ಜನ ಬೆಲೆಯು ೧+೨+೩+......+೮ ಅಂದರೆ ೩೬ ಆಗಿರುತ್ತದೆ. ೨. ನೊಂದಾವಣೆಯ ಒಂದು ಸಂದರ್ಭದಲ್ಲಿ ಭಕ್ತರೆಲ್ಲರೂ ೫ನೆಯ ಮಂದಿರದಲ್ಲಿರುತ್ತಾರೆಂದುಕೊಳ್ಳೋಣ (ಇದು ಸಾಧ್ಯವೇ/ಇಲ್ಲವೇ ಎಂಬ ಪ್ರಶ್ನೆಗೆ ಮತ್ತೆ ಹಿಂದಿರುಗೋಣ). ಆಗ 'ಜ' ನ ಬೆಲೆಯು ೫ X ೮ ಅಂದರೆ ೪೦ ಆಗಿರುತ್ತದೆ.

ಈಗ ಭಕ್ತರು ಒಂದು ಮಂದಿರದಿಂದ ಇನ್ನೊಂದು ಮಂದಿರಕ್ಕೆ ಓಡಾಡುತ್ತಿರುವುದರಿಂದ ನಾವು ಭಕ್ತರಿಗೆ ಕೊಟ್ಟ ಅಂಕಗಳೂ ವ್ಯತ್ಯಾಸಗೊಳ್ಳುತ್ತಿರುತ್ತವೆ. ಹೀಗಾಗಿ ನೊಂದಾವಣೆಯ ಬೇರೆ ಬೇರೆ ಸ್ತರಗಳಲ್ಲಿ 'ಜ'ನ ಬೆಲೆಯೂ ವ್ಯತ್ಯಾಸಗೊಳ್ಳುತ್ತಿರುತ್ತದೆಂಬುದು ಮೊದಲನೆಯ ನೋಟಕ್ಕಾದರೂ ಅನಿಸುತ್ತದಷ್ಟೆ. ಆದರೆ ನಮ್ಮ ಪ್ರಶ್ನೆಯಲ್ಲಿ ವಿಸ್ತರಿಸಿರುವ ನಿಯಮಕ್ಕನುಸಾರವಾಗಿ ವಿಮರ್ಶಿಸಿದರೆ, ನೊಂದಾವಣೆಯ ಪ್ರತಿಸ್ತರದಲ್ಲಿ ಒಬ್ಬ ನಿರ್ದಿಷ್ಟ ಭಕ್ತನಿಗೆ ಕೊಟ್ಟ ಅಂಕ ವ್ಯಕ್ತಿಗತವಾಗಿ ಬದಲಾಯಿಸುತ್ತಿರಬಹುದಾದರೂ, ಎಲ್ಲ ಎಂಟು ಮಂದಿಯ ಅಂಕಗಳ ಒಟ್ಟು ಮೊತ್ತ 'ಜ' ಯಾವುದೇ ರೀತಿಯಲ್ಲಿ ಬದಲಾಗುವುದಿಲ್ಲವೆಂಬುದನ್ನು ಗಮನಿಸಬೇಕು. ಏಕೆಂದರೆ ಒಬ್ಬ ಭಕ್ತನು ಒಂದು ಮಂದಿರದಿಂದ ಇನ್ನೊಂದು ಮಂದಿರಕ್ಕೆ ಹೋದಾಗ ಅವನ ಅಂಕದಲ್ಲಿ ಎಷ್ಟು ವ್ಯತ್ಯಾಸವಾಗಬಹುದೋ (ಕ್ರಮವಾಗಿ 'ಹೆಚ್ಚು' ಅಥವಾ 'ಕಡಿಮೆ') ಅಷ್ಟೇ ವ್ಯತ್ಯಾಸ ಅದರ ವಿರುದ್ಧ ದಿಕ್ಕಿನಲ್ಲಿ (ಕ್ರಮವಾಗಿ 'ಕಡಿಮೆ' ಅಥವಾ 'ಹೆಚ್ಚು') ಇನ್ನೊಬ್ಬ ಭಕ್ತನ ಅಂಕದಲ್ಲಿ ವ್ಯತ್ಯಾಸಗೊಂಡು ಇವರಿಬ್ಬರ ಒಟ್ಟು ಮೊತ್ತದ ಅಂಕ ವ್ಯತ್ಯಾಸ ಹೊಂದುವುದಿಲ್ಲ. ಒಟ್ಟಿನಲ್ಲಿ ಈ ಇಬ್ಬರಿಂದ 'ಜ' ಗೆ ಸಲ್ಲುವ ಮೊತ್ತದಲ್ಲಿ ಏನೂ ವ್ಯತ್ಯಾಸವಿರುವುದಿಲ್ಲ.

ಆರಂಭದಲ್ಲಿ ಜ = ೩೬ ಆಗಿರುವುದನ್ನು ಗಮನಿಸಿದ್ದೇವೆ. ಮುಂದೆಯೂ 'ಜ' ನ ಬೆಲೆ ಅಷ್ಟೇ ಆಗಿ ಉಳಿಯಬೇಕು.

ಈಗ ಒಂದು ವೇಳೆ ಎಂಟು ಮಂದಿಯೂ ಒಂದನೇ ಮಂದಿರವನ್ನು ಸೇರಿದರೆ ಅವರ ಅಂಕಗಳ ಒಟ್ಟು ಮೊತ್ತ ೮. ಹೀಗಾಗಿ ಇದು ಸಾಧ್ಯವಿಲ್ಲ.

ಇದೇ ರೀತಿ ಇನ್ನಾವುದೇ ಮಂದಿರದಲ್ಲಿ ಎಂಟು ಮಂದಿ ಒಟ್ಟುಗೂಡಿದಾಗಲೂ ಅವರ ಅಂಕಗಳ ಮೊತ್ತ ೩೬ಕ್ಕೆ ಸಮನಾಗುವುದಿಲ್ಲ. ಅಂದರೆ ಎಂಟು ಮಂದಿ ಭಕ್ತರೂ ಒಂದೇ ಮಂದಿರದಲ್ಲಿ ಸೇರಿ ವರ ಕೇಳುವ ಸಂದರ್ಭ ಅಸಾಧ್ಯ.

### ಈ ತಿಂಗಳ ಪ್ರಶ್ನೆ

ವಿಶ್ವದಲ್ಲೇ ಅತಿ ದೊಡ್ಡ ಪ್ರಜಾತಂತ್ರವಾದಿ ಎಂದು ಹೆಸರು ಪಡೆದ ಸರ್ವತಂತ್ರ ಸ್ವತಂತ್ರ ರಾಷ್ಟ್ರವೊಂದರಲ್ಲಿ ಹಲವಾರು 'ಸಿಂಗಪೂರ್'ಗೆ ಸಮಾನವೆನಿಸಿದ ಸಂಪದ್ಭರಿತ ಪಟ್ಟಣಗಳಿವೆ. ಭಯಂಕರ ವಾದವನ್ನು ಪ್ರತಿಪಾದಿಸುವ ಉಗ್ರ ವ್ಯಕ್ತಿಯೊಬ್ಬನು ಈ ಪಟ್ಟಣಗಳಲ್ಲಿ ತನ್ನ ಕಾರ್ಯಾಚರಣೆಯನ್ನು ನಡೆಸುತ್ತಿದ್ದಾನೆ. ಆದರೆ ಈ ಉಗ್ರನಿಗೆ ವಿಶ್ವದಲ್ಲೇ ಅತ್ಯಂತ ಶಕ್ತಿಶಾಲಿಯೆನಿಸಿದ ರಾಷ್ಟ್ರವೊಂದರ ಸ್ನೇಹ ಸಹಕಾರವಿದ್ದು ಸರ್ವತಂತ್ರ ಸ್ವತಂತ್ರವೆಂದು ನಾವು ಈ ಹಿಂದೆ ಹೇಳಿದ ರಾಷ್ಟ್ರಕ್ಕೆ ಈ ಭಯಂಕರವಾದಿಯ ಮೇಲೆ ಉಗ್ರಕ್ರಮ ಕೈಗೊಳ್ಳುವ ಧೈರ್ಯವಿಲ್ಲ (ವಿಶ್ವದ ಏಕೈಕ ಶಕ್ತಿಶಾಲಿ ರಾಷ್ಟ್ರದಿಂದ ಆರ್ಥಿಕ ದಿಗ್ಬಂಧನದ ಹೆದರಿಕೆ!). ಆದರೂ ಜನತೆಯ ಗೋಳಿಗೆ ಓಗೊಟ್ಟು ಆ ಉಗ್ರವಾದಿಯನ್ನು ಪ್ರಸ್ತುತ ಅವನಿರುವ ಪಟ್ಟಣ 'ಅ'ನಿಂದ, ಆ ರಾಷ್ಟ್ರದೊಳಗೇ ಇರುವ 'ಅ'ನಿಂದ ಅತ್ಯಂತ ದೂರವಿರುವ 'ಕ' ಎಂಬ ಇನ್ನೊಂದು ಪಟ್ಟಣಕ್ಕೆ ಗಡೀಪಾರು ಮಾಡುವ ಧೈರ್ಯವನ್ನು ಸರ್ಕಾರ ಕೈಗೊಳ್ಳುತ್ತದೆ. ಹಲವು ವರ್ಷಗಳ ನಂತರ 'ಕ' ಪಟ್ಟಣದಿಂದ 'ಅ' ಪಟ್ಟಣವನ್ನು ಹೊರತುಪಡಿಸಿ ಆ ರಾಷ್ಟ್ರದಲ್ಲಿ ಉಳಿದ ಪಟ್ಟಣಗಳಲ್ಲಿ 'ಕ'ಗಿಂತ ಅತ್ಯಂತ ದೂರವಿರುವ ಮಗದೊಂದು ಪಟ್ಟಣಕ್ಕೆ ಉಗ್ರವಾದಿಯ ಗಡೀಪಾರು ನಡೆಯುತ್ತದೆ. ಈ ರೀತಿಯ ಉಚ್ಚಾಟನೆ ಪ್ರಕ್ರಿಯೆ ನಿರಂತರವಾಗಿ ನಡೆಯುತ್ತಿದ್ದರೂ ಯಾವುದೇ ಮುಂದಿನ ಸ್ತರದಲ್ಲಿ ಉಗ್ರಗಾಮಿಯು ಆರಂಭದಲ್ಲಿದ್ದ 'ಅ' ಪಟ್ಟಣಕ್ಕೆ ಪುನಃ ಪ್ರವೇಶ ಮಾಡಿ ಅಲ್ಲಿ ದಾಂಧಲೆ ನಡೆಸಲು ಸಾಧ್ಯವಿಲ್ಲವೆಂದು ತೋರಿಸಿ.

**ಕದವಿಲ್ಲದ ಊರಲ್ಲಿ** (ಕವನಗಳು)

*ಜಿ. ಕೆ. ರವೀಂದ್ರ ಕುಮಾರ್*

**ಪುಟ : 130** **ಬೆಲೆ : ರೂ. 75**

**ಲೋಹಿಯಾ ಪ್ರಕಾಶನ**, 'ಕ್ಷಿತಿಜ', ಕಪ್ಪಗಲ್ಲು ರಸ್ತೆ, ಬಳ್ಳಾರಿ - 583 103

ಈ ಕೃತಿ ಈ ವರ್ಷದ ಕಡೆಂಗೋಡ್ಲು ಕಾವ್ಯ ಪ್ರಶಸ್ತಿ ಗಳಿಸಿದೆ. ಧಾರವಾಡದ ಆಕಾಶವಾಣಿ ಕಾರ್ಯಕ್ರಮಗಳ ನಿರ್ವಾಹಕರಾದ ಕವಿ ಶ್ರೀ ಜಿ. ಕೆ. ರವೀಂದ್ರಕುಮಾರ್ ಹಿಂದೆ ''ಪ್ಯಾಂಜಿಯಾ'', ''ಸಿಕಾಡಾ'' ಕವನ ಸಂಕಲನಗಳಿಂದ ಪರಿಚಿತರು. ಮಾತ್ರವಲ್ಲದೆ ಹಿಂದಿನ ಎರಡು ಕಾವ್ಯ ಸಂಕಲನಗಳಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಗಳಿಸಿದ್ದಾರೆ. ಪ್ರಸ್ತುತ ಸಂಕಲನದಲ್ಲಿ ೫೫ ಕವಿತೆಗಳಿವೆ.

**ಆಡೂವ ಗಿಣಿಯೊಂದ ಕಳಿಸಮ್ಮ** (ಕವಿತೆಗಳು)

*ಕೆ. ವೈ. ನಾರಾಯಣಸ್ವಾಮಿ*

**ಪುಟ : 72** **ಬೆಲೆ : ರೂ. 50**

**ಕನ್ನಡ ಸಂಘ**, ಕ್ರೈಸ್ಟ್ ಕಾಲೇಜ್, ಕುವೆಂಪುನಗರ, ಬೆಂಗಳೂರು-560 029

ಇಪ್ಪತ್ತೇಳು ಕವಿತೆಗಳ ಸಂಕಲನ. ದೀರ್ಘಕಾಲದ ಜೀವನಾನುಭವದ ಹಿನ್ನೆಲೆಯಲ್ಲಿ ಬರೆದಿರುವ ಈ ಕವಿತೆಗಳಲ್ಲಿ ಮನುಷ್ಯ ಮಹತ್ವವಾದದ್ದನ್ನೇನೋ ಕಳೆದುಕೊಂಡು ಮತ್ತೆ ಹುಡುಕಾಟ ನಡೆಸುತ್ತಿರುವಂತಿದೆ. ಇದು ಇಂದಿನ ಬಾಳಿನ ಚಿತ್ರಣವೂ ಹೌದು. ಸಂತೆಯಲ್ಲಿ ತನ್ನ ಸರಕನ್ನು ಮಾರಿ ಕೈ ತೊಳೆದುಕೊಂಡಷ್ಟು ಸಹಜವಾಗಿ ಮನುಷ್ಯ ತನ್ನತನವನ್ನೆಲ್ಲಾ ಬಿಕರಿಯಾಗಿಟ್ಟು ಬದುಕುತ್ತಾನೆ.

**ಸೌಂದರ್ಯ ಮೀಮಾಂಸೆ** (ಲೇಖನಗಳು)

*ಡಾ|| ಜಿ. ಶ್ರೀನಿವಾಸನ್*

**ಪುಟ : [redacted]** **ಬೆಲೆ : ರೂ. 25**

**ಡಿ.ವಿ.ಕೆ. ಮೂರ್ತಿ**, ಪ್ರಕಾಶಕರು, ಮೈಸೂರು - 570 004

ಸೌಂದರ್ಯವು ವಸ್ತುಜನಿತವೇ - ಮನೋಜನಿತವೇ ಎಂಬುದು ಸೌಂದರ್ಯಾರಾಧಕರನ್ನು ಕಾಡುವ ಪ್ರಶ್ನೆ! ಸೌಂದರ್ಯದ ನೆಲೆ ವಸ್ತುವೇ ಆಗಿದ್ದರೂ ಆಸ್ವಾದಿಸುವ ಕಣ್ಣು-ಮನಸ್ಸುಗಳು ಸಹ ಸೌಂದರ್ಯಶಾಸ್ತ್ರದ ಅಳತೆಗೋಲುಗಳೆಂಬುದು ಕೆಲವರ ಅಭಿಮತ. ನಾವು ಏನನ್ನು ಮೆಚ್ಚುಗೆಯಿಂದ ಪರಿಭಾವಿಸುತ್ತೇವೆಯೋ ಅಲ್ಲೆಲ್ಲಾ ಸೌಂದರ್ಯದ ರಸಾನುಭವ ಇರುತ್ತದೆ. ಇಂಥ ಲೌಕಿಕ ಹಾಗೂ ಅಲೌಕಿಕ ಸೌಂದರ್ಯಾರಾಧನೆಯ ಸಂಕ್ಷಿಪ್ತ ಪರಿಚಯ ಮಾಡಿಕೊಡಲಾಗಿದೆ.

**ಧರೆ ಹೊತ್ತಿ ಉರಿದೀತು !** (ಕವಿತೆಗಳು)

*ಎ. ಎಂ. ಸಾಣಕರ*

**ಪುಟ : 53** **ಬೆಲೆ : ರೂ. 25**

**ಬಾಬಾಸಾಹೇಬ ಅಂಬೇಡ್ಕರರ ವಿಚಾರ ವೇದಿಕೆ**, ನಂ.10, ಸಿ.ಎಂ.ಸಿ. ಕಾಲನಿ, ಇಬ್ರಾಹಿಂಪುರ, ವಿಜಾಪುರ-586 102

ತುಳಿತಕ್ಕೊಳಗಾದ ವ್ಯಕ್ತಿಗೆ ತನ್ನನ್ನು ದಮನಿಸುತ್ತಿರುವ ಜನರ ಬಗ್ಗೆ ಎಂದಿಗೂ ಸದಭಿಪ್ರಾಯವಿರುವುದು ಸಾಧ್ಯವಿಲ್ಲ. ಆತ ಬಲಹೀನನಾದಾಗ ತುಳಿತದ ಒತ್ತಡ ಹೆಚ್ಚಿದಾಗ ಅವನಲ್ಲಿ ಹೆಪ್ಪುಗಟ್ಟಿದ ನೋವು ಪ್ರತಿಭಟನೆಯ ರೂಪದಲ್ಲಿ ಸಿಡಿದು ಹೊರಬರುತ್ತದೆ. ಇಂತಹ ಸಿಡಿಯಲು ಅಣಿಯಾದ ಆಸ್ಫೋಟಕದ ಮನೋಭಾವದವರನ್ನು ಕಂಡ ಕವಿಯ ಮನಸ್ಸೊಂದು ಈ ಕವಿತೆಗಳನ್ನು ಹೆಣೆಯುತ್ತ ಆ ಜನರ ನೋವಿಗೆ ದನಿಯಾಗಿದೆ.

**ವಚನವಾಹಿನಿ** (ವಿಮರ್ಶೆಗಳು)

*ಡಾ|| ವಿಜಯಶ್ರೀ ಸಬರದ*

**ಪುಟ : 146** **ಬೆಲೆ : ರೂ. 70**

**ಪಲ್ಲವಿ ಪ್ರಕಾಶನ**, ಸರಸ್ವತಿಪುರ, ವಿಶ್ವವಿದ್ಯಾಲಯ ಅಂಚೆ, ಗುಲಬರ್ಗಾ-585 106

ನಾಡಿನ ಸ್ತ್ರೀವಾದಿ ಬರಹಗಾರ್ತಿ ಶ್ರೀಮತಿ ವಿಜಯಶ್ರೀ ಸಬರದ ಅವರ ವಿಮರ್ಶಾ ಲೇಖನಗಳ ಸಂಗ್ರಹ. ವಚನ ಸಾಹಿತ್ಯವನ್ನು ವಸ್ತುನಿಷ್ಠವಾಗಿ ಅಧ್ಯಯನ ಮಾಡಿ ವಿಚಾರಪೂರ್ಣವಾದ ಫಲಿತಾಂಶವನ್ನು ಹೆಕ್ಕಿ ತೆಗೆದಿದ್ದಾರೆ. ವಚನಕಾರರ ವೈಚಾರಿಕ ಉನ್ನತಿಯನ್ನು ಇನ್ನೊಂದಷ್ಟು ಸಾಣೆ ಹಿಡಿದು ವಚನ ಸಾಹಿತ್ಯದ ಕ್ರಾಂತಿಕಾರೀ ಬದಲಾವಣೆಯನ್ನು ಗುರುತಿಸಿದ್ದಾರೆ. ಭಕ್ತಿ ಪಂಥದ ಜೊತೆ ಜೊತೆಗೇ ಕ್ರಾಂತಿಕಾರೀ ಮನೋಭಾವವನ್ನೂ ವಚನ ಸಾಹಿತ್ಯ ಒದಗಿಸಿದೆ.

**ಹಳೆಯ ಹವಳ ಹೊಸ ಮುತ್ತು** (ಲೇಖನಗಳು)

*ಎನ್ಕೆ ಕುಲಕರ್ಣಿ*

**ಪುಟ : 144** **ಬೆಲೆ : ರೂ. [redacted]**

**ಶ್ರೀ ರಾಘವೇಂದ್ರ ಪ್ರಕಾಶನ**, ಅಂಬಾರಕೊಡ್ಲ, ಅಂಕೋಲಾ-581 314

ಕನ್ನಡ ಸಾಹಿತ್ಯಲೋಕ ಎಂದಿಗೂ ಮರೆಯಲಾರದ ಕೆಲವು ಅಪೂರ್ವ ಪ್ರತಿಭಾಸಂಪನ್ನರನ್ನು ಅವರ ಕೃತಿಗಳ ಕಿರು ಪರಿಚಯದೊಂದಿಗೆ ಈ ಪುಸ್ತಕದಲ್ಲಿ ಸಮೀಕ್ಷೆ ಮಾಡಲಾಗಿದೆ. ನಾಡೋಜ ಪಂಪನಿಂದ - ಇತ್ತೀಚಿನ ಬಾಳಪ್ಪ ಹುಕ್ಕೇರಿವರೆಗೆ ೯ ವ್ಯಕ್ತಿ ಚಿತ್ರಣಗಳಿವೆ. ಜೊತೆಗೆ ಪ್ರಾಚೀನ ಕನ್ನಡ ಮಹಾಭಾರತಗಳ ಸಮೀಕ್ಷೆ ಇದೆ. ನವ್ಯ ಸಾಹಿತ್ಯದ ಬಗ್ಗೆ ಲೇಖನಗಳಿವೆ. ಅಂದಿನ-ಇಂದಿನ ಸಾಹಿತ್ಯದ ತೌಲನಿಕ ವಿಮರ್ಶೆ ಎನ್ಕೆ ಅವರ ಮಹತ್ವದ ಕೊಡುಗೆ.

**ನಾಕು ಬೀದಿ ನಾಟಕಗಳು**

*ಡಾ|| ಬಸವರಾಜ ಸಬರದ*

**ಪುಟ : 75** **ಬೆಲೆ : ರೂ. 30**

**ಪಲ್ಲವಿ ಪ್ರಕಾಶನ**, ಸರಸ್ವತೀಪುರ, ವಿಶ್ವವಿದ್ಯಾಲಯ ಅಂಚೆ, ಗುಲಬರ್ಗಾ-581 106

ಉತ್ತಮ ಸಮಾಜ ನಿರ್ಮಾಣದ ಕಾಳಜಿ ಹೊಂದಿರುವ ಡಾ|| ಬಸವರಾಜ ಸಬರದ ಅವರ ಈ ನಾಲ್ಕು ಬೀದಿ ನಾಟಕಗಳು ಎಲ್ಲ ಬಗೆಯ ಭ್ರಷ್ಟ ವ್ಯವಸ್ಥೆಯ ವಿರುದ್ಧ ಧ್ವನಿ ಎತ್ತರಿಸಿ ಜನರ ಕಣ್ಣು ತೆರೆಸುವಂತೆ ಮಾಡಿವೆ. ಕಾಲಿಟ್ಟ ಕಡೆಯೆಲ್ಲ ಹೋರಾಡಿ ಬದುಕಬೇಕಾದ ಅನಿವಾರ್ಯತೆ ಇಂದಿನ ಜನತೆಯ ದುರದೃಷ್ಟವಾಗಿದೆ. ಇಂದು ಏನಾಗಿದೆ ಎಂಬುದರಿಂದ ಪ್ರಾರಂಭಿಸಿ ಏನಾಗಬೇಕಾಗಿದೆಯೆಂಬುದನ್ನು ಈ ನಾಟಕಗಳು ಹೇಳುತ್ತಿವೆ.

**ಕಣ್ಣ ಮುಂದಿನ ಬೆಳಕು** (ಕವನಗಳು)

*ದಸ್ತಗೀರ್ ಸಾಬ್ ದಿನ್ನಿ*

**ಪುಟ : 68** **ಬೆಲೆ : ರೂ. 35**

**ಲೋಹಿಯಾ ಪ್ರಕಾಶನ**, 'ಕ್ಷಿತಿಜ', ಕಪ್ಪಗಲ್ಲು ರಸ್ತೆ, ಬಳ್ಳಾರಿ-583 103

ವಸ್ತುವಿನ ಆಯ್ಕೆಯಲ್ಲಿ ವೈವಿಧ್ಯತೆ, ತಮ್ಮ ಆಶೋತ್ತರಗಳನ್ನು ತಲುಪುವತ್ತ ಸ್ಪಷ್ಟ ನಡಿಗೆ. ಈ ಕವಿಯ ಇಲ್ಲಿನ 33 ಕವಿತೆಗಳ ವೈಶಿಷ್ಟ್ಯ. ಬಾಲ್ಯದಲ್ಲಿ ತಮ್ಮ ಕಣ್ಣಮುಂದೆ ಕಂಡಂತಹ ತಮ್ಮೂರಿನ ಹಿಡಿಸಿನರ ಅಸಹಾಯಕತೆಯನ್ನು ಕವಿತೆಗಳಲ್ಲಿ ಅಭಿವ್ಯಕ್ತಿಗೊಳಿಸಿದ್ದಾರೆ. ಸಿಸ್ತಾದ ವ್ಯಕ್ತಿಗಳು, ತಮ್ಮ ಆತ್ಮೀಯ ಒಡನಾಡಿಗಳು, ಮರೆಯಲಾರದ ಅನುಭವವನ್ನೊಂದಿಗೆ ಕವಿತೆ ಬರೆಯುವ ದಾರಿಯಲ್ಲಿ ಬೆಳಕಾಗಿ ಕವಿಗೆ ಕಂಡಿದ್ದಾರೆ.

- ಇಂದಿರಾ ಕುಮಾರಿ

# ತಾಯ್ತನವೆಂಬ ವಿಸ್ಮಯ

ಬ್ಯಾಸಗಿ ದಿವಸಕ ಬೇವಿನಮರ ತಂಪ
ಭೀಮರತಿಯೆಂಬ ಹೊಳಿ ತಂಪ
ಹಡದವ್ವ ನೀ ತಂಪ ನನ್ನ ತವರೀಗಿ.

ಇದು ಕನ್ನಡದ ಬಹಳ ಜನಜನಿತ ಜಾನಪದ ತ್ರಿಪದಿಗಳಲ್ಲಿ ಒಂದು. ಪ್ರಕೃತಿಯನ್ನು ಮಾತೆಯಾಗಿಸಿ, ಪ್ರಕೃತಿ ಹಾಗೂ ಹಡೆದ ತಾಯಿ ಇಬ್ಬರನ್ನೂ ಸಮೀಕರಿಸಿ ನಮ್ಮ ಬಾಳಿನ ಸುಖ ಸಂತೋಷಗಳಿಗೆ ಇವರ ಕೊಡುಗೆ ಎಷ್ಟು ಅಪಾರ ಎಂಬುದನ್ನು ಎಷ್ಟು ಚಂದವಾಗಿ ಎಷ್ಟು ಹೃದ್ಯವಾಗಿ ಬಣ್ಣಿಸುತ್ತದೆ ಈ ತ್ರಿಪದಿ !

ಹೌದು, ಬಹಳ ಮೊದಲಿನಿಂದಲೂ ಜೀವ ಕೊಡುವ ಮತ್ತು ಜೀವ ಪೊರೆಯುವ ಪ್ರಕೃತಿ ಹಾಗೂ ತಾಯಿಯನ್ನು ನಾವು ಪವಿತ್ರವಾಗಿಯೇ ಪರಿಗಣಿಸುತ್ತ ಬಂದಿದ್ದೇವೆ. ಈ ಜೀವ ಕೊಡುವ ಮತ್ತು ಜೀವ ಪೊರೆಯುವ ಪ್ರಕ್ರಿಯೆಯೇ ತಾಯ್ತನ. ಹಿಂದಿನವರು ಈ ತಾಯ್ತನದೊಳಗೆ ಅಡಕವಾಗಿರುವ ನೋವು ನಲಿವುಗಳನ್ನು ತಮಗೆ ಗೊತ್ತಿದ್ದ ಜ್ಞಾನದ ಹಿನ್ನಲೆಯಲ್ಲಿ ಅರ್ಥೈಸಿಕೊಂಡು ತಾಯ್ತನವನ್ನು ಉದಾತ್ತೀಕರಿಸಿದರು ಎಂಬುದೇನೋ ನಿಜ. ಈಗ ವಿಜ್ಞಾನ ಅಗಾಧವಾಗಿ ಮುನ್ನಡೆದಿದೆ. ನಿಸರ್ಗದ ಸೂಕ್ಷ್ಮಾತಿ ಸೂಕ್ಷ್ಮ ವಿಷಯಗಳನ್ನೂ ತಿಳಿದುಕೊಳ್ಳುವಲ್ಲಿ ನಾವು ಇಂದು ಯಶಸ್ವಿಯಾಗಿದ್ದೇವೆ. ಸಾಮಾನ್ಯವಾಗಿ ಮೊದಲು ಬಹಳ ಶ್ರೇಷ್ಠವಾಗಿ ತೋರಿದ್ದು ಅದನ್ನು ಕೂಲಂಕಷವಾಗಿ ವಿಶ್ಲೇಷಿಸಿ ನೋಡಿದಾಗ 'ಓ, ಇದು ಇಷ್ಟೇ' ಎಂದೆನಿಸಿ ಸಪ್ಪೆಯಾಗಿಬಿಡುತ್ತದೆ. ಹಾಗಾದರೆ ಸಾವಿರಾರು ವರ್ಷಗಳಿಂದ ಉದಾತ್ತವಾಗಿ ಅದ್ಭುತವಾಗಿ ಕಂಡಿದ್ದ ತಾಯ್ತನವೂ ಇಂದಿನ ವೈದ್ಯಕೀಯ ವಿಜ್ಞಾನದ ಬೆಳಕಿನಲ್ಲಿ ತೀರ ಸರಳ, ಸುಲಭ, ನೀರಸವಾಗಿಬಿಟ್ಟಿದೆಯೇ ? ಸರ್ವಥಾ ಇಲ್ಲ. ಬದಲಿಗೆ, ವೈದ್ಯಕೀಯ ವಿಜ್ಞಾನವು ತಾಯ್ತನವು ಎಂಥ ಮಹಾ ವಿಸ್ಮಯ ಎಂಬುದನ್ನು ಹೆಚ್ಚು ಹೆಚ್ಚು ತೋರಿಸುತ್ತಿದೆ.




ನಿಸರ್ಗ ರೂಪಿಸಿರುವ ಜೀವದ ವಿನ್ಯಾಸ ಚಕ್ರಾಕಾರವಾದದ್ದು. ಅಂದರೆ ಜೀವಜಗತ್ತಿನಲ್ಲಿ ಜನನ ಜೀವನ ಮರಣ ಇವು ಚಕ್ರಾಕಾರವಾಗಿ ಸತತವಾಗಿ ತಲೆಮಾರಿನಿಂದ ತಲೆಮಾರಿಗೆ ನಡೆಯುತ್ತಲೇ ಇರುತ್ತದೆ. ತಾಯ್ತನ ಎಂಬುದು ಗರ್ಭಧಾರಣೆಯಿಂದ ಪ್ರಾರಂಭವಾಗುತ್ತದೆಯೆಂಬುದು ಮೇಲ್ನೋಟಕ್ಕೆ ಸ್ಫುಟವಾದರೂ ಮಹಿಳೆಯ ಶರೀರದಲ್ಲಿ ಗರ್ಭಧಾರಣೆಗೆ ಅವಶ್ಯವಾದಂತಹ ಬದಲಾವಣೆಗಳು ಸಾಕಷ್ಟು ಮೊದಲಿನಿಂದಲೇ ನಡೆದಿರುತ್ತದೆ. ತಾಯ್ತನದೊಳಗೆ ಅಡಕವಾಗಿರುವ ಅಂಶಗಳನ್ನು ತಿಳಿದುಕೊಳ್ಳುತ್ತ ಹೋದಂತೆ ಹೆಜ್ಜೆಹೆಜ್ಜೆಗೂ ನಮಗೆ ಆಶ್ಚರ್ಯವಾಗುತ್ತದೆ. ಉದಾಹರಣೆಗೆ, ತಾಯ್ತನದ ಮೊದಲ ಹಂತವಾದ ಗರ್ಭಧಾರಣೆಯನ್ನೇ ನೋಡಿರಿ. ಸ್ತ್ರೀ-ಪುರುಷರ ಸಮಾಗಮದ ಚರಮ ಕ್ಷಣಗಳಲ್ಲಿ ಸ್ತ್ರೀಯ ಯೋನಿಯಲ್ಲಿ ಪುರುಷನ ವೀರ್ಯವು ಸ್ಖಲಿತಗೊಳ್ಳುತ್ತದೆಯಷ್ಟೆ. ಈ ವೀರ್ಯದಲ್ಲಿ ಒಂದಲ್ಲ, ಎರಡಲ್ಲ, ಸಾವಿರವಿಲ್ಲ, ಕೋಟಿಗಟ್ಟಲೆ ವೀರ್ಯಾಣುಗಳಿರುತ್ತವೆ. ಫಲೀಕರಣಕ್ಕೆ ಅಂದರೆ ಭ್ರೂಣ ಸೃಷ್ಟಿಗೆ ನಿಜಕ್ಕೂ ಅವಶ್ಯವಿರುವುದು ಕೇವಲ ಒಂದು ಅಂಡಾಣು ಹಾಗೂ ಒಂದು ವೀರ್ಯಾಣು ಮಾತ್ರ. ಅಲ್ಲದೆ ಸ್ತ್ರೀಯ ಶರೀರದಲ್ಲಿ ಇಡೀ ಋತುಚಕ್ರದಲ್ಲಿ ಅಂಡಾಶಯದಿಂದ ಬಿಡುಗಡೆಯಾಗುವುದು ಒಂದೇ ಒಂದು ಅಂಡಾಣು ಮಾತ್ರ. ಆದರೆ ಇದಕ್ಕೆ ಪ್ರತಿಯಾಗಿ ಪುರುಷನ ಪ್ರತಿ ವೀರ್ಯಸ್ಖಲನದಲ್ಲಿಯೂ ಕೋಟಿ ಕೋಟಿಗಟ್ಟಲೆ ವೀರ್ಯಾಣುಗಳಿರುತ್ತವೆ ! ಹೇಗಿದೆ ಈ ವಿಚಿತ್ರ !? ಅವಶ್ಯವಿರುವುದು ಒಂದೇ ಒಂದು ವೀರ್ಯಾಣು. ಆದರೆ ಉತ್ಪತ್ತಿಯಾಗುವುದು ಕೋಟಿ ಕೋಟಿಗಟ್ಟಲೆ ವೀರ್ಯಾಣುಗಳು !

ಆಶ್ಚರ್ಯವೆಂದರೆ ಯೋನಿಯಲ್ಲಿ ಕೋಟಿಗಟ್ಟಲೆ ವೀರ್ಯಾಣುಗಳು ಸ್ಖಲಿತಗೊಂಡರೂ ಅವುಗಳಿಗೆ ಮುಂದೆ ಚಲಿಸುವ ಅಥವಾ ಅಂಡಾಣುವಿನ ಜೊತೆ ಮಿಲನಗೊಳ್ಳುವ ಸಾಮರ್ಥ್ಯ ಇರುವುದಿಲ್ಲ. ಗರ್ಭಾಶಯದ ದ್ವಾರದಿಂದ ಒಸರುವ ಒಂದು ವಿಶಿಷ್ಟ ರೀತಿಯ ದ್ರವದೊಂದಿಗೆ ಕೆಲಕಾಲ ಮಿಳಿತವಾದಾಗಲೇ ವೀರ್ಯಾಣುಗಳಿಗೆ ಈ ಚಲನೆಯ ಸಾಮರ್ಥ್ಯ ಬರುತ್ತದೆ. ಗರ್ಭಾಶಯದ ದ್ವಾರದಿಂದ ಒಸರುವ ಈ ದ್ರವದಲ್ಲಿ ವಿಶಿಷ್ಟ ಪ್ರಮಾಣದಲ್ಲಿ ರಾಸಾಯನಿಕಗಳಿದ್ದರೆ ಮಾತ್ರ ವೀರ್ಯಾಣುಗಳ ಸಬಲೀಕರಣ (Capacitation) ಸಾಧ್ಯವಾಗುತ್ತದೆ. ಇಂದು ನಾವು ಸಮಾಜದಲ್ಲಿ ಮಹಿಳೆಯರ ಸಬಲೀಕರಣದ ಬಗ್ಗೆ ಬಹಳಷ್ಟು ಮಾತಾಡುತ್ತೇವೆ. ಆದರೆ ಇಲ್ಲಿ ಇದಕ್ಕೆ ತದ್ವಿರುದ್ಧವಾಗಿ ಪುರುಷನ ವೀರ್ಯಾಣುಗಳ ಸಬಲೀಕರಣ ನಡೆಯುತ್ತದೆ. ಸಬಲೀಕರಣಗೊಂಡ ವೀರ್ಯಾಣುಗಳ ದೊಡ್ಡ ದಂಡೇ ಈಗ ಗರ್ಭಾಶಯದೊಳಗೆ ಪ್ರವೇಶಿಸಿ ಅಂಡಾಣುವಿನತ್ತ ಚಲಿಸಲಾರಂಭಿಸುತ್ತವೆ. ಇನ್ನೊಂದು ಆಶ್ಚರ್ಯವೆಂದರೆ ಫಲೀಕರಣ, ಅಂದರೆ ಅಂಡಾಣು ಮತ್ತು ವೀರ್ಯಾಣುಗಳ ಮಿಲನ, ಗರ್ಭಾಶಯದಲ್ಲಿ ಆಗುವುದಿಲ್ಲ. ಈ ಮಿಲನ ನಡೆಯುವುದು ಅಂಡನಾಳದಲ್ಲಿ. ಋತುಚಕ್ರದ ಮಧ್ಯ ಭಾಗದಲ್ಲಿ, ಅಂದರೆ ೧೪-೧೫ನೇ ದಿನ ಅಂಡಾಶಯದಿಂದ ಅಂಡಾಣು ಬಿಡುಗಡೆಯಾಗುತ್ತಿರುತ್ತದೆಯಷ್ಟೇ. ಈ ಅಂಡಾಣು ಅಂಡನಾಳವನ್ನು ಪ್ರವೇಶಿಸಿ ಗರ್ಭಾಶಯದತ್ತ ಚಲಿಸಲಾರಂಭಿಸುತ್ತದೆ. ಈ ಮಾರ್ಗದಲ್ಲಿಯೇ ಹಲವಾರು ವೀರ್ಯಾಣುಗಳು ಗರ್ಭಾಶಯದೊಳಗಿಂದ ಹಾದು ಬಂದು ಅಂಡಾಣುವನ್ನು ಸಂಧಿಸುತ್ತವೆ. ಆದರೆ ಕೊನೆಗೆ ಅಂಡಾಣುವಿನ ಹೊರಕವಚವನ್ನು ಭೇದಿಸಿ ಒಳಹೊಕ್ಕು ಮಿಲನದಲ್ಲಿ ಯಶಸ್ವಿಯಾಗಿ ಹೊಸ ಭ್ರೂಣದ ಸೃಷ್ಟಿಗೆ ಕಾರಣವಾಗುವುದು ಒಂದೇ ಒಂದು ವೀರ್ಯಾಣು ಮಾತ್ರ.

ಈ ಫಲೀಕರಣಗೊಂಡ ಅಂಡಾಣು ಮುಂದಿನ ಒಂದು ವಾರದ ಅವಧಿಯಲ್ಲಿ ಅಂಡನಾಳದ ಸುರಂಗದಲ್ಲಿ ಹಾದು ಮಾರ್ಗದಲ್ಲಿಯೇ ಒಂದು ಕೋಶವಿದ್ದದ್ದು ಎರಡು ನಾಲ್ಕು ಎಂಟು ಹೀಗೆ ಬಹುಕೋಶದ ಭ್ರೂಣವಾಗಿ ಗರ್ಭಾಶಯವನ್ನು ತಲುಪುತ್ತದೆ. ಅಲ್ಲಿ ಈ ಹೊಸ ಸೃಷ್ಟಿಯ ಪೋಷಣೆಗಾಗಿ ಗರ್ಭಾಶಯದ ಒಳಪದರು ದಪ್ಪನೆಯ ಮೆತ್ತಗಿನ ಹಾಸಿಗೆಯಾಗಿ ತಯಾರಾಗಿರುತ್ತದೆ. ಭ್ರೂಣ ಇಲ್ಲಿ ಬಂದು ತಂಗುತ್ತದೆ - ಬೆಳೆಯುತ್ತದೆ - ಬೇರು ಬಿಟ್ಟು ಮಾಸವನ್ನು ರೂಪಿಸಿಕೊಳ್ಳುತ್ತದೆ ಹಾಗೂ ಸರ್ವ ಸುಂದರಾಂಗ ಶಿಶುವಾಗಿ ಬೆಳೆಯುತ್ತದೆ.

ತಾಯ್ತನದ ಪ್ರಾರಂಭದ ಹಂತವನ್ನು ಅವಲೋಕಿಸಿದ ಬಳಿಕ ಗರ್ಭಾವಸ್ಥೆಯ ಮಧ್ಯಭಾಗದ ಒಂದೆರಡು ವಿಸ್ಮಯಗಳನ್ನು ಈಗ ನೋಡೋಣ. ಆರು ತಿಂಗಳ ಕೊನೆಯಲ್ಲಿ ಗರ್ಭಸ್ಥ ಶಿಶುವಿನ ತೂಕ ಸುಮಾರು ಒಂದು ಕಿಲೋದಷ್ಟಾಗಿರುತ್ತದೆ. ಡಬ್ಬು ಹಾಕಿರುವ, ಕೆಳಗಿನ ಬಾಯಿ ಮುಚ್ಚಿಕೊಂಡಿರುವ, ತುಂಬಿದ ಒಂದು ಕೊಡದಂತಿರುವ ಗರ್ಭಾಶಯದಲ್ಲಿ ಈಗ ಮಗು ಗರ್ಭಜಲದಲ್ಲಿ ಮುಳುಗಿರುತ್ತದೆ. ಹೌದು, ಎಂಟು ವಾರಗಳ ಅವಧಿಯಿಂದ, ಜನಿಸಿ ಹೊರಗೆ ಬರುವವರೆಗೂ ಶಿಶು ಗರ್ಭಜಲದಲ್ಲಿ ಮುಳುಗಿಯೇ ಇರುತ್ತದೆ. ಸುಮಾರು ಅರ್ಧ ಲೀಟರಿನಷ್ಟಿರುವ ಈ ಗರ್ಭಜಲ ನಿಷ್ಕ್ರಿಯ ನಿರುಪಯುಕ್ತ ದ್ರವವಲ್ಲ. ಹೊರಜಗತ್ತಿನ ಯಾವ ಪೆಟ್ಟೂ ಶಿಶುವಿಗೆ ತಾಕದಂತೆ ಅದನ್ನು ಸುರಕ್ಷಿತವಾಗಿ ಕಾಪಾಡುವ ದ್ರವರೂಪದ ಕೋಟೆ ಈ ಗರ್ಭಜಲ. ಆಕಸ್ಮಿಕವಾಗಿ ತಾಯಿಯ ಹೊಟ್ಟೆಗೆ ಏಟು ಬಿದ್ದರೆ, ಪೆಟ್ಟು ತಾಕಿದರೆ, ಈ ಪೆಟ್ಟಿನ ಒತ್ತಡವನ್ನು ಈ ಗರ್ಭಜಲ ತಾನು ಸ್ವೀಕರಿಸಿ ಸುತ್ತಲೂ ಹರಡಿಹೋಗುವಂತೆ ಮಾಡಿ ಶಿಶುವನ್ನು ರಕ್ಷಿಸುತ್ತದೆ. ಎರಡನೆಯದಾಗಿ ಶಿಶುವಿನ ಮೂತ್ರ, ಚರ್ಮದ ತ್ಯಾಜ್ಯ ವಸ್ತುಗಳನ್ನು ದಾಟಿಸುವ ಮಾರ್ಗವೂ ಹೌದು ಈ ಗರ್ಭಜಲ. ಈ ಗರ್ಭಜಲವನ್ನು ಶಿಶು ಕುಡಿಯುತ್ತಿರುತ್ತದೆ, ಅಷ್ಟೇ ಅಲ್ಲ, ಸ್ವಲ್ಪಮಟ್ಟಿಗೆ ಶಿಶು ಈ ಗರ್ಭಜಲವನ್ನೇ ಉಸಿರಾಡಿಸುತ್ತಿರುತ್ತದೆ. ಕೆಲವು ವಿಶಿಷ್ಟ ಅಧ್ಯಯನಗಳ ಮೂಲಕ ಖಚಿತಪಡಿಸಲಾಗಿರುವ ಆಶ್ಚರ್ಯಕರ ಸಂಗತಿಯೆಂದರೆ ಈ ಗರ್ಭಜಲ ಪ್ರತಿ ನಾಲ್ಕರಿಂದ ಆರು ತಾಸುಗಳಿಗೊಮ್ಮೆ

**ಸಂಕುಲಜೀವ**




ಸಂಪೂರ್ಣವಾಗಿ ಬದಲಾಗುತ್ತಿರುತ್ತದೆ. ಅಂದರೆ ಗರ್ಭಾಶಯ ಎಂಬ ಕೊಡವನ್ನು ಪ್ರಕೃತಿಮಾತೆ ಪ್ರತಿ ನಾಲ್ಕಾರು ತಾಸುಗಳಿಗೊಮ್ಮೆ ಖಾಲಿ ಮಾಡಿ ಮತ್ತೆ ತುಂಬುತ್ತಾಳೆ ! ಮುಂದೆ ಹೆರಿಗೆಯ ಸಮಯದಲ್ಲಿ ಈ ಗರ್ಭಜಲವು ಬಹಳ ಒಳ್ಳೆಯ ಲೂಬ್ರಿಕ್ಯಾಂಟ್ ಆಗಿ ಕಾರ್ಯ ನಿರ್ವಹಿಸುವ ಮೂಲಕ ಹೆರಿಗೆಯನ್ನು ಸುಸೂತ್ರ ಮಾಡುತ್ತದೆ. ಸರಿಯಾದ ಪ್ರಮಾಣದಲ್ಲಿ ಗರ್ಭಜಲ ಇಲ್ಲದೆ ಹೋದಲ್ಲಿ ಸುಖರೂಪ ಹೆರಿಗೆ ಆಗುವುದು ಶಕ್ಯವೇ ಇಲ್ಲ.

ಇದು ಗರ್ಭಜಲದ ಸಂಕ್ಷಿಪ್ತ ವಿವರಣೆಯಾದರೆ ಮಾಸದ್ದು ಇನ್ನೊಂದು ಅದ್ಭುತ ಕತೆಯೇ ಸರಿ. ಆಕಳು, ಎಮ್ಮೆ ಆಡುಗಳು, ಮರಿ ಹಾಕುವುದನ್ನು ನೋಡಿರುವವರಿಗೆ ಮಾಸ ಎಂದರೆ ಏನು ಎಂಬುದು ಸ್ಥೂಲವಾಗಿಯಾದರೂ ಗೊತ್ತು. ಮರಿ ಜನಿಸಿದ ಬಳಿಕ ಈ ಮಾಸ ಎಂಬುದು ಸುರಳೀತವಾಗಿ ಬಿದ್ದುಹೋಗಿಬಿಡಬೇಕಾದ ವಸ್ತು ಎಂದೇ ಬಹಳಷ್ಟು ಜನ ಭಾವಿಸಿರುತ್ತಾರೆ. ಆದರೆ ಈ ಮಾಸ (Placenta) ಎಂಬ ಅಂಗದ ರಚನೆ, ಕಾರ್ಯವ್ಯಾಪ್ತಿ ಇವುಗಳನ್ನು ಅರಿತುಕೊಂಡಾಗ ನಾವು ಅದಕ್ಕೆ ನಮ್ರತೆಯಿಂದ ತಲೆಬಾಗದೆ ಇರುವುದಿಲ್ಲ. ಈ ಮಾಸ ಎಂಬುದು ಒಂದು ಸ್ಪಾಂಜಿನಂತೆ ಅಥವಾ ಇನ್ನೂ ಹೆಚ್ಚು ಸರಿಯಾಗಿ ಹೇಳಬೇಕೆಂದರೆ ಒಂದು ಕುಳ್ಳಿನಂತೆ (ಬೆರಣಿ) ಗರ್ಭಾಶಯದ ಒಳಗೋಡೆಗೆ ಅಂಟಿಕೊಂಡಿರುತ್ತದೆ. ಕುಳ್ಳು ಅಥವಾ ಕೇಕ್‌ನಂತಹ ಈ ಮಾಸ ಕೇವಲ ೧೦ ಸೆಂ. ಮೀ. ವ್ಯಾಸದ್ದಾಗಿರುತ್ತದೆಯಾದರೂ ಇದರ ಕೆಲಸ ಬಹಳ ಅದ್ಭುತ. ಗರ್ಭದ ಪೋಷಣೆಗೆ ಬೇಕಾದ ಅನೇಕ ಬಲು ಮಹತ್ವದ ರಾಸಾಯನಿಕ ವಸ್ತುಗಳನ್ನು ಉತ್ಪಾದಿಸುವ ಈ ಮಾಸವು ಒಂದು ಪುಟ್ಟ ಕಾರ್ಖಾನೆಯೇ ಸರಿ. ಅಲ್ಲದೆ ಇದು ತಾಯಿಯಿಂದ ಬರುವ ಪೋಷಕಾಂಶಗಳನ್ನು ಶಿಶುವಿಗೆ ತಲುಪಿಸುತ್ತದೆ ಹಾಗೂ ಶಿಶುವಿನ ಶರೀರದ ತ್ಯಾಜ್ಯ ವಸ್ತುಗಳನ್ನು ತಾಯಿಯ ರಕ್ತಸಂಚಲನಾ ವಿಭಾಗಕ್ಕೆ ತಲುಪಿಸಿ ಆ ಮೂಲಕ ಹೊರಹಾಕಲು ಅನುಕೂಲ ಮಾಡಿಕೊಡುತ್ತದೆ. ಬಹಳ ಆಶ್ಚರ್ಯದ ಸಂಗತಿಯೆಂದರೆ ಒಂಬತ್ತು ತಿಂಗಳುಗಳ ಕಾಲ ಶಿಶು ತಾಯಿಯ ಹೊಟ್ಟೆಯಲ್ಲಿ ಇದ್ದರೂ ಕೂಡ, ತಾಯಿಯೇ ಶಿಶುವಿನ ಸಂಪೂರ್ಣ ಪೋಷಣೆ ಮಾಡುತ್ತಿರುವಾಗ ಕೂಡ, ಒಂದು ಕ್ಷಣ ಸಹಿತ ತಾಯಿಯ ಹಾಗೂ ಶಿಶುವಿನ ರಕ್ತಗಳು ಕೂಡುವುದಿಲ್ಲ, ಮಿಳಿತಗೊಳ್ಳುವುದಿಲ್ಲ. ಹೌದು, ತಾಯಿಯ ವಿಭಾಗವೇ ಬೇರೆ ಶಿಶುವಿನ ವಿಭಾಗವೇ ಬೇರೆ ! ಹಾಗಾದರೆ ತಾಯಿ ನೀಡುವ ಪೋಷಕಾಂಶಗಳು ಶಿಶುವನ್ನು ಹೇಗೆ ತಲುಪುತ್ತವೆ? ಬಹಳ ಸರಳವಾಗಿ ಹೇಳುವುದಾದರೆ ತಾಯಿಯ ವಿಭಾಗ ಹಾಗೂ ಶಿಶುವಿನ ವಿಭಾಗ ಇವೆರಡರ ನಡುವೆ ಒಂದು ಸೂಕ್ಷ್ಮಾತಿಸೂಕ್ಷ್ಮ ಪರದೆಯಿರುತ್ತದೆ. ಬಹಳ ಸಂಕೀರ್ಣವಾದ ರೀತಿಯಲ್ಲಿ ಈ ಪರದೆಯ ಆ ಕಡೆ ಮತ್ತು ಈ ಕಡೆಯಿಂದ ಪೋಷಕಾಂಶಗಳ ಮತ್ತು ತ್ಯಾಜ್ಯವಸ್ತುಗಳ ವಿನಿಮಯ ನಡೆಯುತ್ತದೆ. ಇಷ್ಟು ಸಾಲದು ಎಂಬಂತೆ ಒಂದು ವಿಶಿಷ್ಟ ಗಾತ್ರಕ್ಕಿಂತಲೂ ದೊಡ್ಡದಾದ ಯಾವುದೇ ಪ್ರೋಟೀನ್ ಕಣ ಅಥವಾ ರೋಗಾಣುವಿಗೆ ಈ ಮಾಸವು ಒಳಗೆ ಪ್ರವೇಶ ನೀಡದೆ ಶಿಶುವನ್ನು ಅನೇಕ ರೋಗಗಳಿಂದ ರಕ್ಷಿಸುತ್ತದೆ. ದಿನ ತುಂಬಿದ ಬಳಿಕ ರಾಸಾಯನಿಕ ವಸ್ತುಗಳ ಮೂಲಕ ಸೂಕ್ತ ಸಂಕೇತಗಳನ್ನು ಕಳಿಸಿ ಹೆರಿಗೆಯ ಪ್ರಕ್ರಿಯೆ ಪ್ರಾರಂಭವಾಗು ವುದರಲ್ಲಿಯೂ ಮಾಸವು ಬಹಳ ಮಹತ್ವದ ಪಾತ್ರ ವಹಿಸುತ್ತದೆ ಹಾಗೂ ಕೊನೆಗೆ ಶಿಶು ಜನಿಸಿ ಹೊರಗೆ ಬಂದ ಬಳಿಕ ಈ ಮಾಸವು ತನ್ನ ಕೆಲಸ ಮುಗಿಯಿತು ಎಂಬ ಕೃತಾರ್ಥಭಾವದಲ್ಲಿ – ವನಸುಮದಂತೆ – ಗರ್ಭಾಶಯಕ್ಕೆ ಯಾವ ಧಕ್ಕೆಯೂ ಆಗದಂತೆ ಉಚ್ಚಿಕೊಂಡು, ಹೊರಗೆ ಬಂದುಬಿಡುತ್ತದೆ !

ಗರ್ಭಾವಸ್ಥೆಯ ಕೊನೆಯ ಹಂತವೇ ಹೆರಿಗೆ. ಗರ್ಭಾಶಯದ ಬಾಯಿ ಪೂರ್ತಿ ತೆರೆದುಕೊಂಡು ಕೂಸು ತಾಯಿಯ ಜನನ ಮಾರ್ಗದಲ್ಲಿ ಹಾದು ಹೊರಗೆ ಬರುವ ಪ್ರಕ್ರಿಯೆಯೇ ಹೆರಿಗೆ. ಒಂಬತ್ತು ತಿಂಗಳ ಕಾಲ ಶಿಶುವನ್ನು ಹೊತ್ತುಕೊಂಡು ಶಾಂತವಾಗಿದ್ದ ಗರ್ಭಾಶಯಕ್ಕೆ ಸಂಕುಚನ-ಪ್ರಸರಣಗೊಳ್ಳಲು ಆದೇಶ ಎಲ್ಲಿಂದ ಬರುತ್ತದೆ ? ಗರ್ಭಾಶಯದ ಸ್ನಾಯು ಸುವ್ಯವಸ್ಥಿತವಾದ ರೀತಿಯಲ್ಲಿ ಸಂಕುಚನಗೊಳ್ಳುತ್ತಾ ಗರ್ಭಾಶಯದ ದ್ವಾರ ನಿಧಾನವಾಗಿ ತೆರೆದುಕೊಳ್ಳುತ್ತಾ ಜನನ ಮಾರ್ಗದಲ್ಲಿ ಕೂಸು ಇಳಿಯುತ್ತ ಬರಬೇಕು. ಹೆರಿಗೆ ನೋವು ಅಂದರೆ ಇದೇ. ಗರ್ಭಾಶಯದ ಸಂಕುಚನಗಳು ಹೇಗೆ ಶುರುವಾಗುತ್ತವೆ? ತಾಯಿಯ ಮೆದುಳು, ಮಾಸ ಹಾಗೂ ಶಿಶುವಿನ ಮೆದುಳು ಈ ಮೂರು ಕೇಂದ್ರಗಳಿಂದ ಸರಿಯಾದ ರೀತಿಯಲ್ಲಿ ಸಂಕೇತಗಳು ಬಂದದ್ದೇ ಹೆರಿಗೆಯ ನೋವು ಕಾಣಿಸಿಕೊಳ್ಳುತ್ತದೆ. ನಿಸರ್ಗದ ವಿನ್ಯಾಸ ಎಷ್ಟು ಸುಂದರವಾಗಿದೆಯೆಂದರೆ ಹೆರಿಗೆಯ ನೋವು ಒಮ್ಮೆಲೆ ಬಹಳ ಜೋರಾಗಿ ಪ್ರಕಟಗೊಳ್ಳುವುದಿಲ್ಲ. ಒಂಬತ್ತು ತಿಂಗಳ ಉದ್ದಕ್ಕೂ ಗರ್ಭಾಶಯ ಆಗಾಗ ಆಕುಂಚನಗೊಳ್ಳುತ್ತಲೇ ಇರುತ್ತದೆ. ಆದರೆ ಆಗ ನೋವು ಇರುವುದಿಲ್ಲ. ಹೆರಿಗೆಯ ಪ್ರಕ್ರಿಯೆ ಶುರುವಾದ ಬಳಿಕವೇ ಆಕುಂಚನಗಳು ನೋವುಂಟು ಮಾಡುತ್ತವೆ. ಆಕುಂಚನದ ಈ ನೋವು ನಿಧಾನವಾಗಿ ಹೆಚ್ಚುತ್ತ ಹೋಗುತ್ತದೆ ಹಾಗೂ ಹೆಚ್ಚು ಹೆಚ್ಚು ಶೀಘ್ರವಾಗಿ ಬರಲಾರಂಭಿಸುತ್ತದೆ.

ಕಟಿಬಂಧದ ಅಂದರೆ ಸೊಂಟದ ಎಲುಬುಗಳು, ಸ್ನಾಯುಗಳು ಇತ್ಯಾದಿಗಳಿಂದಾದ ತಾಯಿಯ ಜನನ ಮಾರ್ಗ ಕೇವಲ ಹತ್ತು ಸೆಂ. ಮೀ. ಉದ್ದವಾಗಿರುತ್ತದೆ. ಆದರೆ ಈ ಕೇವಲ ಹತ್ತು ಸೆಂ. ಮೀ. ಉದ್ದದ ಮಾರ್ಗವನ್ನು ಕ್ರಮಿಸುವ ಪಯಣವೇ ಬಾಳಿನ ಅತ್ಯಂತ ಮಹತ್ವದ ಪಯಣ. ಮುಂದಿನ ನೂರು ವರ್ಷಗಳ ಸುದೀರ್ಘ ಜೀವನ ಸುಖಕರವಾಗಿ ಕಳೆಯಬೇಕಾದರೆ ಈ ಹತ್ತು ತಾಸುಗಳ ಹತ್ತು ಸೆ.ಮೀ. ಉದ್ದದ ಪಯಣ ಸುಖಕರ ವಾಗಬೇಕು. ಹೆರಿಗೆ ಅನ್ನುವುದು ಒಂದು ಸುಂದರ ಆರ್ಕೆಸ್ಟ್ರಾ ಇದ್ದ ಹಾಗೆ. ಒಂದು ಅದ್ಭುತ (ಸಾಂಘಿಕ ಪ್ರಯತ್ನ) ತಂಡದಲ್ಲಿ ಯಾರೋ ಒಬ್ಬಿಬ್ಬರು ಮಾತ್ರ ಚೆನ್ನಾಗಿ ವಾದ್ಯ ನುಡಿಸಿದರೆ ಸರಿಯಾದ ಸಂಗೀತ ಹೊರಹೊಮ್ಮುವುದಿಲ್ಲ. ಎಲ್ಲರೂ ತಮ್ಮ ತಮ್ಮ ಪಾತ್ರ ಸರಿಯಾಗಿ ನಿರ್ವಹಿಸಬೇಕು. ಕಟಿಬಂಧದ ಎಲುಬುಗಳು ಸ್ನಾಯುಗಳು ಸರಿಯಾಗಿ ಸಡಿಲಗೊಂಡಿರಬೇಕು. ಮೂರೂ ಕೇಂದ್ರಗಳಿಂದ ಸಂದೇಶಗಳು ಸರಿಯಾಗಿ ಬರಬೇಕು. ಅದಕ್ಕೆ ಉತ್ತರವಾಗಿ ಗರ್ಭಾಶಯದ ಮೇಲ್ಭಾಗದ ಆಕುಂಚನ ಪ್ರಸರಣಗೊಳ್ಳುತ್ತ ಕೂಸನ್ನು ಕೆಳಗೆ ದಬ್ಬಬೇಕು. ಮೇಲ್ಭಾಗ ಆಕುಂಚನಗೊಂಡಾಗ ಕೆಳಭಾಗ ಹಿಗ್ಗಿ ಕೂಸಿಗೆ ಕೆಳಗೆ ಸರಿಯಲು ಅನುವು ಮಾಡಿಕೊಡಬೇಕು. ಇದೇ ವೇಳೆಗೆ ಗರ್ಭಾಶಯದ ಬಾಯಿ ನಿಧಾನವಾಗಿ ತೆರೆದುಕೊಳ್ಳುತ್ತ ಹೋಗಬೇಕು. ಇತ್ತ ಗರ್ಭಾಶಯದ ಆಕುಂಚನಗಳು

೪೪ನೇ ಪುಟಕ್ಕೆ



ಅಮೇರಿಕಾದಿಂದ ಪತ್ರ

# ಎರಡು ಪ್ರಕರಣಗಳು ಪ್ರವಾಸಗಳು

**ಹೆ**ತ್ತ ತಾಯಿಂದಲೇ ತನ್ನ ಐದು ಮಕ್ಕಳ ಕೊಲೆ, ವಾಷಿಂಗ್ಟನ್‌ನಲ್ಲಿ ತರುಣಿಯೊಬ್ಬಳ ಕಣ್ಮರೆ. ಇತ್ತೀಚೆಗೆ ಸಂಭವಿಸಿದ ಈ ಎರಡು ಘಟನೆಗಳು ಅಮೆರಿಕದ ನಾಗರಿಕರನ್ನು, ಮುಖ್ಯವಾಗಿ ಮಹಿಳೆಯರನ್ನು, ದಿಗ್ಭ್ರಮೆಗೊಳಿಸಿವೆ. ತಾಯಿಯೇ ತನ್ನ ಹಸುಳೆಗಳನ್ನು ಹತ್ಯೆಗೈದಿರುವ ಸುದ್ದಿ ವಿರಳ, ಆದರೂ ಅಪರೂಪವೇನಲ್ಲ. ಬಡತನ, ಸಾಂಸಾರಿಕ ವಿರಸ ಹಾಗೂ ಬೇರೆ ಇತರ ಕಾರಣಗಳಿಗೆ ಮಕ್ಕಳು ಬಲಿಯಾಗುವ ವರದಿಗಳು ಆಗಾಗ್ಗೆ ಪ್ರಕಟವಾಗುತ್ತಿರುತ್ತವೆ. ಅಮೆರಿಕದಲ್ಲಿ ಪ್ರತಿ ವರುಷ ಸುಮಾರು ೨೦೦ ಮಕ್ಕಳು ಹೆತ್ತ ತಾಯಿಯ ಕೈಯಿಂದಲೇ ಕೊಲೆಯಾಗುವರೆಂದು ಅಂದಾಜು. ಇದು ಸರಕಾರದ ವರದಿಯ ಪ್ರಕಾರ. ಆದರೆ ಒಟ್ಟಿಗೇ ಐದು ಮಕ್ಕಳ ಹತ್ಯೆ ಗಾಬರಿ ಹುಟ್ಟಿಸುವಂಥದ್ದು. ಈ ಹತ್ಯೆ ಜರುಗಿದ್ದು ಹೂಸ್ಟನ್ ನಗರದಲ್ಲಿ. ಒಂದಾದಮೇಲೊಂದರಂತೆ ಆರು ತಿಂಗಳ ಮಗುವಿನಿಂದ ಹಿಡಿದು ಏಳು ವಯಸ್ಸಿನ ಬಾಲಕನನ್ನು ಸ್ನಾನದ ತೊಟ್ಟಿಯಲ್ಲಿ ಮುಳುಗಿಸಿ ಕೊಂದಾಕೆ ಆಂಡ್ರಿಯಾ ಯೇಟ್ಸ್ ಎಂಬ ಮಹಿಳೆ. ತನ್ನ ಭಯಂಕರ ಕೃತ್ಯವನ್ನು ತಾನೇ ಪೊಲೀಸರಿಗೂ, ಪತಿಗೂ ದೂರವಾಣಿ ಮೂಲಕ ತಿಳಿಸಿ ಪೊಲೀಸರಿಗೆ ಶರಣಾದಳು. ಆಂಡ್ರಿಯಾ ವಿವಾಹಕ್ಕೆ ಮುನ್ನ ಕ್ಯಾನ್ಸರ್ ಆಸ್ಪತ್ರೆಯೊಂದರಲ್ಲಿ ದಾದಿಯಾಗಿ ಸೇವೆ ಸಲ್ಲಿಸಿದ್ದಳು. ಪತಿ ನಾಸಾ ಸಂಸ್ಥೆಯಲ್ಲಿ ಉದ್ಯೋಗಿ. ಆರ್ಥಿಕವಾಗಿ ಯಾವ ತೊಂದರೆಯೂ ಇರಲಿಲ್ಲ ಕುಟುಂಬಕ್ಕೆ. ಹಾಗಾಗಿ ಮಕ್ಕಳ ಪಾಲನೆ ಪೋಷಣೆಗಾಗಿಯೇ ಆಕೆ ತನ್ನ ಉದ್ಯೋಗ ತ್ಯಜಿಸಿದ್ದಳು. ಆದರೂ ಆಕೆ ಹೀಗೇಕೆ ಮಾಡಿದಳು ಎಂಬುದೇ ಚರ್ಚೆ ಪತ್ರಿಕೆಗಳಲ್ಲಿ, ಮಾಧ್ಯಮಗಳಲ್ಲಿ. ಬಂಧನದಲ್ಲಿರುವ ಆಕೆಯ ವಿಚಾರಣೆ ನಡೆದು ದಂಡನೆಯಾಗುವುದು ಬೇರೆ ವಿಷಯ. ಏಕಾಂಗಿತನದಿಂದ ಐದು ಮಕ್ಕಳನ್ನು ನೋಡಿಕೊಳ್ಳುವ ಹೊಣೆಯ ಒತ್ತಡದಿಂದ ಆಕೆ ಮಾನಸಿಕವಾಗಿ ಅಸ್ವಸ್ಥಳಾಗಿದ್ದಳು ಎನ್ನುವುದು ಒಂದು ವಾದ. ಇದನ್ನು ಮನಶ್ಶಾಸ್ತ್ರಜ್ಞರು ಸಮರ್ಥಿಸುತ್ತಾರೆ. ಅಮೆರಿಕದ ಕುಟುಂಬ ವ್ಯವಸ್ಥೆಯಲ್ಲಿ ಈ ಬಗೆಯ ಏಕಾಂಗಿತನ ಮತ್ತು ಮಾನಸಿಕ ಒತ್ತಡ ಎದ್ದುಕಾಣುತ್ತದೆ. ಈ ಪ್ರಕರಣದಲ್ಲಿ ಆಕೆ ಅಂಥ ಒತ್ತಡಕ್ಕೀಡಾಗಿದ್ದಳು ಎನ್ನುವುದು ನಿಜ. ಆಕೆ ಹೆರಿಗೆಯ ನಂತರ ಕೆಲವು ಸ್ತ್ರೀಯರಿಗೆ ಬರುವ ಖಿನ್ನತೆಯ ಕಾಯಿಲೆ ಅನುಭವಿಸಿದ್ದಳು. ಇದು ಆಕೆಯ ಪತಿ ಹಾಗೂ ಕುಟುಂಬದವರಿಗೆ ತಿಳಿದಿತ್ತು. ಆದರೂ ಮುಂಜಾಗ್ರತೆ ಏಕೆ ವಹಿಸಲಿಲ್ಲ ಎನ್ನುವ ಪ್ರಶ್ನೆ ಮುಖ್ಯವಾಗಿ ಕಾಣುತ್ತಿದೆ.

ನಡೆದಿರುವ ಚರ್ಚೆಯಲ್ಲಿ ಆಕೆಯ ಬಗ್ಗೆ ಅನುಕಂಪ ಇರುವವರೂ, ಖಂಡಿಸುವವರೂ ಇದ್ದಾರೆ. ಐದು ಮಕ್ಕಳ ಪಾಲನೆ, ಪೋಷಣೆ ಏಕಾಂಗಿಯಾಗಿ ನಿರ್ವಹಿಸುವುದು ಕಷ್ಟ ಅಮೆರಿಕದ ಕುಟುಂಬ ವ್ಯವಸ್ಥೆಯಲ್ಲಿ. ಆದರೆ ಅದು ಅನಿವಾರ್ಯ. ಏಕೆಂದರೆ ಇಲ್ಲಿ ಸಹಾಯ ದುರ್ಲಭ. ಬಂಧು ಬಳಗದವರಿಂದ ನೆರವು ಅಪರೂಪ. ಹೊರಗಿನಿಂದ ಯಾರನ್ನಾದರೂ ನೇಮಕ ಮಾಡಿಕೊಳ್ಳುವುದು ದುಬಾರಿ. ಸಾಧಾರಣ ಮಧ್ಯಮ ವರ್ಗದವರಿಗೆ ಎಟುಕದ್ದು. ಹಾಗಾಗಿ ಗೃಹಿಣಿಯ ಮೇಲೆ ಹೆಚ್ಚು ಹೊರೆ. ದುಡಿಯುವ ಮಹಿಳೆಯರಿಗೆ ಇನ್ನೂ ಹೆಚ್ಚು ಕಷ್ಟ. ಮಕ್ಕಳನ್ನು ಬಿಟ್ಟು ಹೋಗಲು ಶಿಶುಗೃಹಗಳು ಇವೆ. ಅವೂ ಸಾಕಷ್ಟು ಖರ್ಚಿನದ್ದು. ಸಾಧಾರಣವಾಗಿ ಒಂದು ಮಗುವಿಗೆ ತಿಂಗಳಿಗೆ ಸುಮಾರು ೫೦೦ ಡಾಲರ್‌ಗಳಾದರೂ ಬೇಕಾಗುತ್ತದೆ. ಇವೆಲ್ಲ ಗಮನಿಸಿದಾಗ ಗೃಹಿಣಿಯರು ಮಾನಸಿಕ ಒತ್ತಡಕ್ಕೀಡಾಗುವುದು ಆಶ್ಚರ್ಯವೇನಲ್ಲ. ಸಂಭವಿಸಿದ ಈ ದುರಂತ ಪ್ರಕರಣದಿಂದ ಇಲ್ಲಿನ ಗೃಹಿಣಿಯರ ಪರಿಸ್ಥಿತಿ ಬಗ್ಗೆ ಸಾಕಷ್ಟು ಚರ್ಚೆಯಾಗುತ್ತಿದೆ.

* * *

ವಾರಾಂತ್ಯದಲ್ಲಿ ಹೊರಗೆ ಸುತ್ತಾಡಿಬರುವುದು ಇಲ್ಲಿನ ರೂಢಿ. ಅಮೆರಿಕನ್ನರಿಗೆ ಅದೊಂದು ಅಗತ್ಯವೆನಿಸಿರುವ ಕ್ರಮ. ವಿಹಾರಕ್ಕಾಗಿಯೇ ಪ್ರತಿ ನಗರಗಳ ಸುತ್ತಮುತ್ತ ಉದ್ಯಾನಗಳು, ಇತರ ಮನರಂಜನಾ ಸ್ಥಳಗಳೂ ಇರುತ್ತವೆ. ಇವಲ್ಲದೆ ಬೇಕಾದಷ್ಟು ಪ್ರವಾಸ ಸ್ಥಳಗಳೂ ಇವೆ. ಎಲ್ಲವೂ ರಮಣೀಯ, ಅಚ್ಚುಕಟ್ಟು. ಆದರೆ ಅಷ್ಟೇ ದುಬಾರಿ ಕೂಡ. ಖಾಸಗೀ ಒಡೆತನದಲ್ಲಿರುವವೇ ಹೆಚ್ಚು. ಯಾವುದಕ್ಕೂ ಪ್ರವೇಶ ದರ ನಿಗದಿಯಾಗಿರುತ್ತದೆ. ಕಳೆದ ಹತ್ತು ವರುಷಗಳಲ್ಲಿ ಪ್ರವೇಶ ದರ ದ್ವಿಗುಣಗೊಂಡಿದೆ. ಬಡಜನರಿಗೆ ಕೈಗೆಟುಕದಂಥದ್ದು.

ಮನರಂಜನಾ ಕೇಂದ್ರಗಳಲ್ಲಿ ಅತಿಶಯವೆನಿಸುವುದು ಏನೂ ಇಲ್ಲದಿದ್ದರೂ ಸಾಧಾರಣವಾದ್ದನ್ನೂ ವೈಭವೀಕರಿಸುವ ಕಲೆ ಅಮೆರಿಕನ್ನರಿಗೆ ಸಿದ್ಧಿಸಿದ್ದು. ಪ್ರಚಾರದ ಅಬ್ಬರದಿಂದಲೇ ಜನರನ್ನು ಆಕರ್ಷಿಸುತ್ತಾರೆ. ಡೆಟ್ರಾಯಿಟ್‌ಗೆ ಸುಮಾರು ೫೦ ಮೈಲಿ ದೂರದಲ್ಲಿರುವ ಮಿಸ್ಟ್ರಿ ಹಿಲ್ಸ್ ಅಂಥ ಒಂದು ಸ್ಥಳ. ಸುತ್ತಲೂ ಹಸಿರು ಹರಡಿದ್ದು ಏರು ತಗ್ಗುಗಳಿಂದ ಕೂಡಿರುವ ಪ್ರದೇಶದಲ್ಲಿ ಅದು ಇದೆ. ಈ ಪ್ರದೇಶವನ್ನು ಐರಿಶ್ ವಿಲೇಜ್ ಎಂದು ಕರೆಯುತ್ತಾರೆ. ಪ್ರಾಯಶಃ ಐರಿಶ್ ಜನ ಇಲ್ಲಿ ಹೆಚ್ಚಾಗಿ ನೆಲೆಸಿದ್ದಾರೆಂದು ಕಾಣುತ್ತದೆ.

ಮಿಸ್ಟ್ರಿ ಹಿಲ್ಸ್ (ವಿಸ್ಮಯ ಗುಡ್ಡ) ನಿಜಕ್ಕೂ ವಿಸ್ಮಯವೇ. ಏಕೆಂದರೆ ಅಲ್ಲಿನ ವಿಸ್ಮಯಕ್ಕೆ ಸಮರ್ಪಕ ವಿವರಣೆ ದೊರಕುವುದಿಲ್ಲ. ಈ ಗುಡ್ಡದ ವಿಸ್ತಾರ ಸುಮಾರು ೪೦ ಚದರ ಮೀಟರಿನಷ್ಟು. ನೋಡಿ ಬರಲು ಹತ್ತು ಹದಿನೈದು ನಿಮಿಷ ಸಾಕು. ಅಷ್ಟಕ್ಕೇ ಪ್ರವೇಶ ದರ ೫ ಡಾಲರು. ಇಲ್ಲಿ ಮರದ ಗೋಡೆ ಕಟ್ಟಣೆ ಇರುವ ನಾಲ್ಕು ತೆರೆದ ಕೋಣೆಗಳಿವೆ. ಒಳಗೆ ಪ್ರವೇಶಿಸಿದಾಗ ನಮ್ಮ ದೇಹ ಗೋಡೆಯ ಕಡೆಗೆ ವಾಲುತ್ತದೆ. ಗೋಡೆಯ ಅಂಚಿನ ಕಟ್ಟೆಯ ಮೇಲೆ ಕುರ್ಚಿ ಎರಡು ಕಾಲುಗಳ ಮೇಲೆ ನಿಲ್ಲುತ್ತದೆ. ಅದರ ಮೇಲೆ ನಾವು ಕುಳಿತುಕೊಳ್ಳಬಹುದು. ಹಾಗೆ ಇತರ ಕೋಣೆಗಳಲ್ಲೂ. ಲೋಲಕ ತಳ್ಳಿದಾಗ ಗಾಲಿಯಲ್ಲೇ ನಿಲ್ಲುತ್ತದೆ, ಚೆಂಡು ಎಸೆದರೆ ಹಾಗೇ ನಿಲ್ಲುತ್ತದೆ. ಈ ವಿಶೇಷಕ್ಕೆ ವ್ಯವಸ್ಥಾಪಕರು ನೀಡುವ ಸಮಜಾಯಿಷಿ ಅಧಿಕ ಪ್ರಮಾಣದ ಗುರುತ್ವಾಕರ್ಷಣೆ ಎಂದು. ಇದಕ್ಕೆ ಗುಡ್ಡದ ಅಡಿಯಲ್ಲಿರುವ ಖನಿಜ ನಿಕ್ಷೇಪದಲ್ಲಿ ಹೆಚ್ಚು ಯುರೇನಿಯಂ ಇರುವುದೇ ಕಾರಣ ಎಂದು ಒಂದು ವಿವರಣೆ. ವೈಜ್ಞಾನಿಕವಾಗಿ ಇದು ಸಾಬೀತಾಗಿಲ್ಲ. ಆದರೆ ಇದನ್ನು ನಡೆಸುತ್ತಿರುವ ಖಾಸಗೀ ಉದ್ಯಮಿಗೆ ಸಾಕಷ್ಟು ಲಾಭ ತರುತ್ತಿದೆ.

ಈ ಗುಡ್ಡದಿಂದ ಸ್ವಲ್ಪ ದೂರದಲ್ಲಿ ಒಂದು ವಿಶಾಲವಾದ ಜಾಗದಲ್ಲಿ ಇನ್ನೊಂದು ಸ್ಥಳ. ಇಲ್ಲಿ ಎಲ್ಲ ಹಳೆಯ ವಸ್ತುಗಳನ್ನೂ ಸಂಗ್ರಹಿಸಿ ಇರಿಸಿದ್ದಾರೆ. ಹಳೆಯ ಅಚ್ಚುಕೂಟ, ಕಮ್ಮರಸಾಲೆ, ವಾಹನಗಳು ಮೊದಲಾದವುಗಳನ್ನು ಜೋಡಿಸಿದ್ದಾರೆ. ಎಲ್ಲವೂ ನೂರು ನೂರಾಐವತ್ತು ವರುಷ ಹಿಂದಿನವು. ಜನರನ್ನು ಆಕರ್ಷಿಸಲು ಮ್ಯಾಜಿಕ್ ಷೋ, ವೈಲ್ಡ್ ವೆಸ್ಟ್ ಮಾದರಿಯ ಅಣಕ, ಗುಂಡು ಕಾಳಗ ಇತ್ಯಾದಿ ಇರುತ್ತದೆ. ಇಷ್ಟಕ್ಕೇ ಪ್ರವೇಶ ದರ ೧೨ ಡಾಲರು. ಇದನ್ನು ನೋಡಿದಾಗ ಈ ದೇಶದಲ್ಲಿ ಪ್ರಚಾರದಿಂದ ಏನು ಬೇಕಾದರೂ ಮಾರಾಟ ಮಾಡಬಹುದು ಎನಿಸುತ್ತದೆ.

ಡೆಟ್ರಾಯಿಟ್‌ನಿಂದ ಕಾರಿನಲ್ಲಿ ೫ ಗಂಟೆ ಪ್ರಯಾಣ ಮಾಡಿದರೆ ಕೆಂಟುಕಿ ರಾಜ್ಯ. ಈ ರಾಜ್ಯದಲ್ಲಿರುವ ಮ್ಯಾಮತ್ ಕೇವ್ಸ್ (ಅಗಾಧ ಗುಹೆಗಳು) ಪ್ರಕೃತಿಯ ವಿಸ್ಮಯಗಳಲ್ಲೊಂದು. ಇವನ್ನು ನೋಡಲು ಸಹಸ್ರಾರು ಜನ ಪ್ರವಾಸಿಗರು ಬರುತ್ತಾರೆ. ಪ್ರವಾಸಿಗಳಿಗೆ ಅಗತ್ಯವಾದ ಎಲ್ಲ ಸೌಕರ್ಯಗಳೂ ಇಲ್ಲಿ ಲಭ್ಯ. ಪ್ರವಾಸೋದ್ಯಮ ಪ್ರಮುಖ ಆದಾಯ ತರುವ ಬಾಬತ್ತು. ಇಲ್ಲಿನ ಪ್ರವಾಸಿ ಕೇಂದ್ರ ಒದಗಿಸುವ ಮಾಹಿತಿ ಮೆಚ್ಚುವಂಥದ್ದು. ಸಾಮಾನ್ಯವಾಗಿ ಬೇಸಿಗೆಯಲ್ಲಿ ಇಲ್ಲಿಗೆ ಪ್ರವಾಸಿಗಳು ಅಧಿಕ ಸಂಖ್ಯೆಯಲ್ಲಿ ಬರುತ್ತಾರೆ. ಆದರೆ ಈ ಬೇಸಿಗೆಯಲ್ಲಿ ಆರ್ಥಿಕ ಹಿಂಜರಿತದಿಂದಾಗಿ ಪ್ರವಾಸಿಗಳು ಕಡಿಮೆ. ಹೋಟೆಲುಗಳಲ್ಲಿ ಕೋಣೆಗಳು ಖಾಲಿ ಬಿದ್ದಿರುವುದಲ್ಲದೆ ಇತರೆ ವ್ಯಾಪಾರವೂ ಕುಂಠಿತವಾಗಿದ್ದು ಇಲ್ಲಿ ಕಳವಳ ಉಂಟುಮಾಡಿದೆ.

ಮ್ಯಾಮತ್ ಕೇವ್ಸ್ ಪ್ರಕೃತಿದತ್ತವಾದುದು. ಸಾವಿರಾರು ವರುಷಗಳ ಹಿಂದೆ ಗುಪ್ತಗಾಮಿನಿ ನದಿಯೊಂದು ಬತ್ತಿಹೋಗಿ ರೂಪುಗೊಂಡಿರುವ ಗುಹೆಗಳ ಸಂಕೀರ್ಣ. ಪ್ರಪಂಚದಲ್ಲೇ ಅತಿ ಉದ್ದವಾದ ಗುಹೆ ಪ್ರದೇಶ. ಸುಮಾರು ಒಂದು ಸಾವಿರ ಮೈಲಿ ಉದ್ದವಿದೆ ಎಂದು ಅಂದಾಜು. ಈವರೆಗೆ ೩೫೦ ಮೈಲಿಗಳಷ್ಟನ್ನು ಪತ್ತೆ ಮಾಡಲಾಗಿದೆ. ನಾಲ್ಕು ಸಾವಿರ ವರುಷಗಳ ಹಿಂದೆಯೇ ಅಮೆರಿಕದ ಮೂಲ ನಿವಾಸಿಗಳು ಇದನ್ನು ಪತ್ತೆ ಮಾಡಿದ್ದರು ಎಂದು ಹೇಳುತ್ತಾರೆ. ಆದರೆ ಇದರ ಪುನರನ್ವೇಷಣೆಯಾದ್ದು ೧೭೯೮ರಲ್ಲಿ. ಅಲ್ಲಿಂದೀಚೆಗೆ ಭೂಗರ್ಭ ಶಾಸ್ತ್ರಜ್ಞರು ಹೆಚ್ಚು ಶೋಧನೆ ಮಾಡಿದ್ದಾರೆ ಅಮೆರಿಕದ ಸ್ವಾತಂತ್ರ್ಯ ಸಮರದ ಕಾಲದಲ್ಲಿ ಈ ಗುಹೆಗಳ

ಸೀಯಾರ್ಕೆ

ಪಾತ್ರ ಮಹತ್ವದ್ದು. ಫಿರಂಗಿಗಳಿಗೆ ಬೇಕಾದ ಆಸ್ಫೋಟಗಳ ತಯಾರಿಕೆಗೆ ಅಗತ್ಯವಾಗಿದ್ದ ಪೆಟ್ಲುಪ್ಪು ಈ ಗುಹೆಯಲ್ಲಿ ದೊರಕಿತು. ಸಹಸ್ರಾರು ಮಂದಿ ಗುಲಾಮರು ಈ ಕಾರ್ಯದಲ್ಲಿ ತೊಡಗಿದ್ದರು. ಅವರ ಪೈಕಿ ಸಾವಿಗೀಡಾದವರು ಎಷ್ಟೋ ಮಂದಿ. ಈಗಲೂ ಗುಹೆಗಳಲ್ಲಿ ಅನೇಕ ಬಗೆಯ ಲವಣಗಳ ನಿಕ್ಷೇಪವಿದೆ. ಆದರೆ ಅದನ್ನು ಸಂರಕ್ಷಿಸಿದ್ದಾರೆ. ಈ ಗುಹೆಗಳ ಸುತ್ತಮುತ್ತ ೫೩,೦೦೦ ಎಕರೆಗಳ ಅರಣ್ಯ ಪ್ರದೇಶವಿದೆ. ೧೯೯೦ರಿಂದ ಅದನ್ನು ರಾಷ್ಟ್ರೀಯ ಜೀವಿ ಸಂರಕ್ಷಣಾ ಪ್ರದೇಶವಾಗಿ ಘೋಷಿಸಿದ್ದಾರೆ. ವಿಶ್ವಸಂಸ್ಥೆ ಈ ಗುಹೆಗಳನ್ನು ಜಾಗತಿಕ ಸ್ಮಾರಕ ಎಂದು ಮಾನ್ಯ ಮಾಡಿದೆ.

ಈ ಗುಹೆಯೊಳಗೆ ಪ್ರವಾಸಿಗರನ್ನು ಕರೆದೊಯ್ಯಲು ಅತ್ಯಂತ ಅಚ್ಚುಕಟ್ಟಾದ ವ್ಯವಸ್ಥೆ ಇದೆ. ಪ್ರವೇಶ ದರಕ್ಕೆ ತಕ್ಕಂತೆ ಬೇರೆ ಬೇರೆ ದೂರಗಳಿಗೆ ಕರೆದೊಯ್ಯುತ್ತಾರೆ. ೩೦-೪೦ ಜನರ ತಂಡಕ್ಕೆ ಇಬ್ಬರು ಗೈಡುಗಳಿರುತ್ತಾರೆ. ಒಳಗೆ ತುಂಬಾ ಕತ್ತಲು, ದಾರಿ ಕಾಣುವಷ್ಟು ಮಾತ್ರ ಬೆಳಕಿನ ವ್ಯವಸ್ಥೆ ಇದೆ. ಅಧಿಕ ಸಂಖ್ಯೆಯಲ್ಲಿ ಜನ ಬಂದು ಹೋಗುತ್ತಾರಾದರೂ ಗುಹೆಗಳಲ್ಲಿ ಸ್ವಲ್ಪವೂ ಗಲೀಜಿರದು. ಚೊಕ್ಕಟವಾಗಿರಿಸಲು ಜನ ಸಹಕರಿಸುವುದು ಮೆಚ್ಚಬೇಕಾದದ್ದು. ಇತರ ಕಡೆಗಳಲ್ಲೂ ಹಾಗೆ ಸ್ವಚ್ಛತೆ ಗಮನಿಸಬಹುದು. ಗುಹೆಗಳಲ್ಲಿ ಸುತ್ತಾಡಿ ಬರಲು ನಾಲ್ಕು ಗಂಟೆ ಬೇಕು. ಎರಡು ಕಂತುಗಳಲ್ಲಿ ಹೋಗಿ ಬರಬೇಕಾಗುತ್ತದೆ. ಒಳಗೆ ಇಕ್ಕಟ್ಟಾದ ಕಡೆಗಳಲ್ಲಿ ಬಾಗಿಕೊಂಡು ಹೋಗುವುದು ಸ್ವಲ್ಪ ಪ್ರಯಾಸವೇ.

ಈ ಗುಹೆಗಳು ನಗರ ಪ್ರದೇಶದಿಂದ ೬೦-೭೦ ಮೈಲಿಗಳ ದೂರದಲ್ಲಿವೆ. ಆದರೂ ಪ್ರವಾಸಿಗಳಿಗೆ ಯಾವ ತೊಂದರೆಯೂ ಆಗದಂಥ ವ್ಯವಸ್ಥೆ ಮಾಡಿದ್ದಾರೆ. ಊಟ ತಿಂಡಿಗಳಿಗೆ ಹೋಟೆಲುಗಳಿವೆ, ವಿಶ್ರಾಂತಿಗೆ ಬೇಕಾದ ವ್ಯವಸ್ಥೆ ಇದೆ. ಅಮೆರಿಕನ್ನರಿಗೆ ಈ ಗುಹೆಗಳ ಬಗ್ಗೆ ಅಭಿಮಾನ ಮತ್ತು ಇತಿಹಾಸ ಪ್ರಸಿದ್ಧವೆಂದು ಹೆಮ್ಮೆ.

ಕೆಂಟುಕಿಯಿಂದ ಮತ್ತೆ ದಕ್ಷಿಣಕ್ಕೆ ಐದು ಆರು ಗಂಟೆ ಪ್ರಯಾಣ ಮಾಡಿದರೆ ಟೆನ್ನೆಸಿ ರಾಜ್ಯ. ಇದೊಂದು ಬೆಟ್ಟಗುಡ್ಡಗಳ ಪ್ರದೇಶ. ಇಲ್ಲಿನ ಬೆಟ್ಟ ಸಾಲಿಗೆ ಸ್ಮೋಕಿ ಮೌಂಟೆನ್ಸ್ ಎನ್ನುತ್ತಾರೆ. ಬೆಟ್ಟದ ಮೇಲೆ ದಟ್ಟವಾದ ಇಬ್ಬನಿ ಕವಿದಿರುವುದರಿಂದ ಆ ಹೆಸರು. ಈ ಬೆಟ್ಟ ಸಾಲನ್ನು ನಮ್ಮ ಪಶ್ಚಿಮ ಘಟ್ಟಗಳಿಗೆ ಹೋಲಿಸಬಹುದು. ಆದರೆ ಇವು ಪಶ್ಚಿಮ ಘಟ್ಟಗಳಷ್ಟು ಎತ್ತರವಾಗಲೀ ಕಡಿದಾಗಲೀ ಇಲ್ಲ. ಈ ಬೆಟ್ಟಗಳ ಎತ್ತರ ೪೫೦೦ರಿಂದ ೬೦೦೦ ಅಡಿಗಳು. ಸುತ್ತಲೂ ಹಸಿರು ಗಿಡಗಳು ಹರಡಿಕೊಂಡಿವೆ. ಅತ್ಯಂತ ರಮಣೀಯವಾದ್ದು. ಈ ಬೆಟ್ಟಗಳ ತಪ್ಪಲಿನಲ್ಲಿರುವ ಸಣ್ಣ ನಗರ ಗ್ಯಾಟಲಿನ್‌ಬರ್ಗ್. ಇಲ್ಲಿಂದ ಬೆಟ್ಟದ ಮೇಲಕ್ಕೆ ಹೋಗಲು ವ್ಯವಸ್ಥೆ ಇದೆ. ಸ್ಕೀಯಿಂಗ್ ಮಾಡುವವರಿಗೆ ಬೇಕಾದ ಅನುಕೂಲ ಇದೆ. ಪ್ರವಾಸಿಗಳನ್ನು ಬೆಟ್ಟದ ಮೇಲಕ್ಕೆ ಕೊಂಡೊಯ್ಯಲು ರೋಪ್ ವೇ ಇದೆ. ಅದನ್ನು ಟ್ರಾಂ ಸರ್ವೀಸ್ ಎಂದು ಕರೆಯುತ್ತಾರೆ. ಒಂದು ಸಲಕ್ಕೆ ೩೦-೪೦ ಜನರನ್ನು ೪ ಸಾವಿರ ಅಡಿ ಎತ್ತರಕ್ಕೆ ೨೦ ನಿಮಿಷದಲ್ಲಿ ಕರೆದೊಯ್ಯುತ್ತದೆ. ಅಲ್ಲಿ ವಿಶಾಲವಾದ ಪ್ರದೇಶವಿದೆ. ಬೇಕಾದಷ್ಟು ಅಂಗಡಿಗಳು, ಹೋಟೆಲುಗಳು, ಮನರಂಜನೆಗೆ ಬೇಕಾದ ಇತರ ವ್ಯವಸ್ಥೆಗಳೂ ಇವೆ. ಇಲ್ಲಿ ದಿನವಿಡೀ ಕಳೆಯಬಹುದು. ಇಲ್ಲಿಂದ ಬೆಟ್ಟದ ತುದಿಗೆ ಹೋಗಬಯಸುವವರಿಗೆ ಬೇರೆ ಏರ್ಪಾಟಿದೆ. ಇಬ್ಬಿಬ್ಬರನ್ನು ಕರೆದೊಯ್ಯುವ ರೋಪ್ ವೇ ಇದೆ. ಶಿಖರದ ಮೇಲಿಂದ ನೋಟ ತುಂಬಾ ಅಮೋಘವಾದ್ದು.

ಈ ಪ್ರವಾಸಿ ಕೇಂದ್ರಗಳಲ್ಲಿ ಎಲ್ಲ ಏರ್ಪಾಡು ಖಾಸಗಿಯವರಿಂದಲೇ. ಜನಗಳನ್ನು ಆಕರ್ಷಿಸಲು ಒಳ್ಳೆಯ ಪ್ರಚಾರ ನಡೆಸುತ್ತಾರೆ. ಅಷ್ಟೇ ಅನುಕೂಲವನ್ನೂ ಕಲ್ಪಿಸಿರುತ್ತಾರೆ. ನಮ್ಮಲ್ಲಿ ಇಲ್ಲಿಗಿಂತ ಹೆಚ್ಚು ಸುಂದರವಾದ ಸ್ಥಳಗಳಿವೆ. ಸ್ವಲ್ಪ ಆಸ್ಥೆ ವಹಿಸಿ ಪ್ರವಾಸಿಗರಿಗೆ ಅಗತ್ಯವಾದ ಸೌಕರ್ಯ ಒದಗಿಸಬೇಕು, ಅಷ್ಟೆ. ▢▢

## ಪ್ರಳಯ



ವಿಮಾನಗಳ ಬೆಂಕಿ ಡಿಕ್ಕಿ
ವಿಶ್ವವಾಣಿಜ್ಯ ಕೇಂದ್ರದ ಕಟ್ಟಡಕ್ಕೆ
ಹೌದೆ ? ಪದರ ಪದರವಾಗಿ ಮೇಲೇರಿ
ಮುಗಿಲಿಗೆ ಮುತ್ತಿಕ್ಕಿದ ನಾಗರಿಕತೆಯ ಶೃಂಗಕ್ಕೆ !
ರೆಕ್ಕೆಗಳಿಂದಲೇ ಸೊಕ್ಕಿದ ರೆಕ್ಕೆ ಗರಿ ಕತ್ತ
ರಿಸಿದ ವಿಪರ್ಯಾಸ !
ಭೋಗ ಭೂಮಿಗೆ, ಅಲ್ಲ, ಸ್ವರ್ಗಕ್ಕೇರಿದ
ತಂತ್ರ ವಜ್ರಾಘಾತ !
ಬೆಳೆದರೆ ಸಾಕೇ ಸೃಷ್ಟಿ,
ಬೆಳೆಯದೆ ದೃಷ್ಟಿ ?

ಪರಮಾಣು ಬಾಂಬಿನ ಕರ್ಮ ಫಲಿಸಿ,
ಪುಟ್ಟ ಜ್ವಲಂತ ಪ್ರಳಯ ಸಂಭವಿಸಿ,
ಮಡಿಯಬಾರದಿತ್ತು ಜನ;
ಮುರಿಯಬಾರದಿತ್ತು ಮನ,
ಹರಿಯಬಾರದಿತ್ತು ಕಪ್ಪು ಹೊಗೆ ಮೋಡಕ್ಕೆ
ಕಂಬನಿಯ ಹೊಳೆ !

ವಿಸ್ತರಿಸದಿರಲಿ ಬಾನಗಲ ಭಸ್ಮಾಸುರಹಸ್ತ ;
ಮನುಕುಲದ ಯಾತ್ರೆಯಾಗಲಿ ಭಯದಿಂದ
ನಿರ್ಭಯದತ್ತ !

ಸಿ.ಪಿ.ಕೆ.
೨೨೬೫, 'ಭಾರತಿ', ೬ನೇ ಅಡ್ಡರಸ್ತೆ, ವಿನಾಯಕನಗರ, ಮೈಸೂರು

*೪೧ನೇ ಪುಟದಿಂದ*

ಶುರುವಾದ ಕೂಡಲೇ ಕೂಸು ತನ್ನ ಗೋಣನ್ನು ಹೆಚ್ಚು ಹೆಚ್ಚು ಮಡಿಚುತ್ತ ಅಡ್ಡಸ್ಥಾನದಲ್ಲಿರುವ ತಲೆಯನ್ನು ಮುಖ ಹಿಂದೆ ಬರುವಂತೆ ತಿರುಗಿಸುತ್ತ ಕೆಳಗೆ ಸರಿಯಬೇಕು. ಈ ಕೆಳಮುಖೀ ಚಲನೆಗೆ ಅನುಕೂಲವಾಗುವಂತೆ ಗರ್ಭ ದ್ವಾರದಿಂದ ಒಸರುವ ದ್ರವ ಹಾಗೂ ಗರ್ಭಜಲ ಲೂಬ್ರಿಕ್ಯಾಂಟ್ ಆಗಿ ಕೆಲಸ ಮಾಡಬೇಕು. ಈ ಎಂಟು ಹತ್ತು ತಾಸುಗಳ ಬೇನೆಯನ್ನು ತಡೆದುಕೊಳ್ಳುವ ದೈಹಿಕ ಮಾನಸಿಕ ಸಾಮರ್ಥ್ಯ ತಾಯಿಗಿರಬೇಕು ಹಾಗೂ ಈ ಹಿಚುಕುವಿಕೆ, ದಬ್ಬುವಿಕೆ, ತಿರುಗುವಿಕೆ, ಕೆಳಗೆ ಸರಿಯುವಿಕೆ ಇದನ್ನೆಲ್ಲ ತಡೆದುಕೊಳ್ಳುವ ಸಾಮರ್ಥ್ಯ ಶಿಶುವಿಗಿರಬೇಕು. ಈ ಎಲ್ಲ ಅಂಶಗಳೂ ಸುರಳೀತವಾಗಿ ಆದಾಗ ತಲೆ ಮೊದಲಾಗಿ ಕೂಸು ಹೊರಗೆ ಬರುತ್ತದೆ. ಅಬ್ಬಾ, ಅಂತೂ ಹೆರಿಗೆ ಆಯಿತು, ಕೂಸು ಹುಟ್ಟಿತು ! ಇದೆಲ್ಲವೂ ಇಷ್ಟೊಂದು ಸಂಕೀರ್ಣವಾಗಿರುವಾಗಲೂ ನೂರಕ್ಕೆ ತೊಂಬತ್ತರಷ್ಟು ಸಂದರ್ಭಗಳಲ್ಲಿ ಎಲ್ಲವೂ ಸರಿಯಾಗಿ ನಡೆದು ಸುಖರೂಪ ಹೆರಿಗೆ ಆಗಿ ಸಂತುಷ್ಟ ತಾಯಿಗೆ ಸುಂದರ ಸದೃಢ ಕೂಸು ಹುಟ್ಟುತ್ತದೆಯಲ್ಲ, ಇದು ನಿಜಕ್ಕೂ ಮಹಾ ವಿಸ್ಮಯ.

ನಿಜ ಹೇಳಬೇಕೆಂದರೆ ನೈಜ ಹೆರಿಗೆಯ ಎದುರು ವರ್ಣನೆ ತೀರ ನೀರಸ. ಒಬ್ಬ ಗರ್ಭಿಣಿಗೆ ಬೇನೆ ಶುರು ಆದಾಗಿನಿಂದ ಹೆರಿಗೆ ಆಗುವವರೆಗೂ ಅವಳ ಜೊತೆ ಇದ್ದು ಹೆರಿಗೆಯನ್ನು ಸಂಪೂರ್ಣವಾಗಿ ವೀಕ್ಷಿಸುವುದು ನಿಜಕ್ಕೂ ಒಂದು ಮನಮುಟ್ಟುವ ಅವಿಸ್ಮರಣೀಯ ಅನುಭವ. ಸೃಷ್ಟಿ ಕ್ರಿಯೆಯ ವಿಸ್ಮಯ, ಅದರೊಳಗಿನ ನೋವು ನಲಿವು ಎಲ್ಲ ನೋಡಬೇಕು. ಇದು ಅನೇಕರಿಗೆ ವಿಚಿತ್ರ ಅನಿಸಬಹುದು; ಛೆ, ಗಂಡಸರು ಹೆರಿಗೆಯನ್ನು ನೋಡಬಹುದೇ ಎಂದು ತಿರಸ್ಕಾರದಿಂದ ಕೇಳಬಹುದು. ಆದರೆ ಸ್ವಲ್ಪ ತಾಳ್ಮೆಯಿಂದ ವಿಶ್ಲೇಷಿಸಿದಾಗ ನಾವು ಸರಿಯಾದ ನಿರ್ಣಯಕ್ಕೆ ಬರಬಹುದು. ಮನುಷ್ಯರು ನಾವು ಎಮ್ಮೆ ಆಕಳು ಮರಿ ಹಾಕುವುದನ್ನು ನೋಡಬಹುದಾದರೆ ನಮ್ಮ ಮಗುವೆ ಹುಟ್ಟುವುದನ್ನು ಯಾಕೆ ನೋಡಬಾರದು ? ಮದುವೆಯ ಸಂದರ್ಭದಲ್ಲಿ ನಾವೆಲ್ಲರೂ ಅಗ್ನಿಸಾಕ್ಷಿಯಾಗಿ ಶಪಥ ಮಾಡಿರುತ್ತೇವೆ - ಬಾಳಿನ ಪ್ರತಿ ಹೆಜ್ಜೆಯಲ್ಲಿಯೂ ನಾವು ಪರಸ್ಪರರ ಸುಖ-ದುಃಖ ಹಂಚಿಕೊಳ್ಳೋಣ ಎಂದು. ಮಹಿಳೆಗೆ ಜೀವನದಲ್ಲಿ ಹೆರಿಗೆಗಿಂತ ಕಠಿಣವಾದ ಬೇರೆ ಸನ್ನಿವೇಶ ಇನ್ನಾವುದೂ ಇಲ್ಲ. ಹಾಗಾದರೆ ಗಂಡ ಆದವನು ಈ ಸಂದರ್ಭದಲ್ಲಿ ಅವಳ ಜೊತೆ ಇರಬೇಕು ಅಲ್ಲವೆ ? ಅವಳ ನೋವನ್ನಂತೂ ನಾವು ಪಡೆಯುವುದು ಸಾಧ್ಯವಿಲ್ಲ, ಆದರೆ ಕನಿಷ್ಠ ಅವಳ ಜೊತೆ ಇದ್ದು ಅವಳಿಗೆ ಸಮಾಧಾನ ಧೈರ್ಯ ಹೇಳಬಹುದಲ್ಲ ? ಇದರಲ್ಲಿ ಅಸಹ್ಯವಾದದ್ದು ಅಶ್ಲೀಲವಾದದ್ದು ಏನಿದೆ ? ಸಮಾಗಮದ ಸುಖ ಹಂಚಿಕೊಂಡವರು ಶಿಶು ಜನನದ, ಸೃಷ್ಟಿ ಕ್ರಿಯೆಯ ನೋವನ್ನೂ ಹಂಚಿಕೊಳ್ಳಬೇಕಲ್ಲವೆ ? ಹೆರಿಗೆಯೆಂಬ ಈ ಸಂಕಷ್ಟಮಯ ಸಂದರ್ಭದಲ್ಲಿ ಹೆಂಡತಿಯ ಜೊತೆ ಗಂಡ ಇದ್ದು ತಮ್ಮ ಮಗುವಿನ ಜನನಕ್ಕೆ ಸಾಕ್ಷಿಯಾದರೆ ಆಗ ದಾಂಪತ್ಯ ಪ್ರೇಮಕ್ಕೆ ನೈಜ ಆಳ. ಆಳವಾದ ಅರ್ಥ ಬರುತ್ತದೆ. ತಾಯ್ತನ ಎಂಬುದು ಎಂಥ ಮಹಾ ವಿಸ್ಮಯ ಎಂಬುದು ಅರಿವಾಗುತ್ತದೆ.

ಸಂಕುಲಜೀವ
'ಮಲ್ಲಿಗೆ', ೧೯/೨, ಮಹಿಷಿ ರಸ್ತೆ
ಮಾಳಮಡ್ಡಿ, ಧಾರವಾಡ - ೫೮೦ ೦೦೭

# ಸಮಗ್ರ ಅಭಿವೃದ್ಧಿಗೆ ಸರಳ ಹಾದಿ ; ಜಲಾನಯನ ಆಧಾರಿತ ಯೋಜನೆಗಳು

*ನಮ್ಮ ನೆರೆ ರಾಜ್ಯ ಕೇರಳದ ಕಾಸರಗೋಡು ಜಿಲ್ಲೆಯ ಮೀಂಜ ಪಂಚಾಯತಿನಲ್ಲಿ ಪ್ರಪ್ರಥಮಬಾರಿ ಜಲಾನಯನ ಆಧಾರಿತ ಅಭಿವೃದ್ಧಿ ಯೋಜನೆಗಳು ಕಾರ್ಯರೂಪಕ್ಕೆ ಬರುವ ನಿಟ್ಟಿನಲ್ಲಿ ಅಲ್ಲಿಯ ಸ್ಥಳೀಯ ಜಿಲ್ಲಾಧಿಕಾರಿಗಳು ಮತ್ತು ಜನತಾ ಪ್ರತಿನಿಧಿಗಳು ಮಾಹಿತಿ ಸಂಗ್ರಹಣಾ ಕಾರ್ಯಕ್ರಮವನ್ನು ಹಮ್ಮಿಕೊಂಡಿದ್ದಾರೆ. ಸರ್ವತೋಮುಖ ಗ್ರಾಮೀಣ ಅಭಿವೃದ್ಧಿಯತ್ತ ಹೆಜ್ಜೆ ಹಾಕುತ್ತಿರುವ ಮೀಂಜ ಗೆಳೆಯರ ಪ್ರಯತ್ನ ಹೊಚ್ಚ ಹೊಸದಾಗಿದೆ.*

ರಾಜ್ಯ ಯೋಜನಾ ಆಯೋಗದ ನಿರ್ದೇಶನದಂತೆ ಇನ್ನು ಮುಂದೆ ಜಲಾನಯನ ಆಧಾರಿತ ಅಭಿವೃದ್ಧಿ ಯೋಜನೆಗಳು ಕಾರ್ಯಗತಗೊಳ್ಳಲಿವೆ. ಹೊಸ ಸಹಸ್ರ ಮಾನದ ಆರಂಭದಲ್ಲಿ ಗ್ರಾಮೀಣ ತಳಹದಿಯ ಸರ್ವತೋಮುಖ ಅಭಿವೃದ್ಧಿ ಯೋಜನೆಗಳನ್ನು ಜಲಾನಯನ ಆಧಾರಿತ ಮಾಹಿತಿಗಳ ಆಧಾರದ ಮೇಲೆ ಜಾರಿಗೊಳಿಸುವ ನಿಟ್ಟಿನಲ್ಲಿ ರಾಜ್ಯದಲ್ಲಿ ಸಿದ್ಧತೆಗಳು ನಡೆಯುತ್ತಿವೆ. ಆಯಾಯ ಪ್ರದೇಶದ ಭೂಸಂಪನ್ಮೂಲ, ಜನಜೀವನ, ಜೀವವೈವಿಧ್ಯತೆಗಳು ಮತ್ತು ಮೂಲಭೂತ ಸೌಕರ್ಯಗಳ ಮಾಹಿತಿಯನ್ನು ಸಂಗ್ರಹಿಸುವ ಮೂಲಕ ಸಮಸ್ಯೆಗಳಿಗೆ ಪರಿಹಾರಗಳನ್ನು ಕಂಡುಹಿಡಿದು, ಹೊಸ ಯೋಜನೆಗಳಿಗೆ ರೂಪುರೇಷೆಗಳನ್ನು ನೀಡಲು ಪ್ರಮುಖ ಆಧಾರವಾಗಿ ಇವುಗಳು ಪಾತ್ರವಹಿಸಲಿವೆ.

ಕೇರಳ ಸರಕಾರದ ಹೊಸ ಪಂಚಾಯತಿಗಳ ಮುಂದಿನ ಯೋಜನೆಗಳು ಇದೇ ರೀತಿಯ ಜಲಾನಯನ ಮಾಹಿತಿಗಳ ತಳಹದಿಯಲ್ಲಿಯೇ ಜಾರಿಗೊಳ್ಳಲಿವೆ. ಈಗಾಗಲೇ ಕಾಸರಗೋಡು ಜಿಲ್ಲೆಯ ಮೀಂಜ ಗ್ರಾಮ ಪಂಚಾಯತಿನಲ್ಲಿ ಮೊತ್ತಮೊದಲಾಗಿ ಎಂಬಂತೆ ಜಲಾನಯನ ಆಧಾರಿತ ಮಾಹಿತಿ ಸಂಗ್ರಹ ಕಾರ್ಯ ನಡೆದಿದ್ದು, 'ಸಮೃದ್ಧಿ'ಯ ಡಾ॥ ಚಂದ್ರಶೇಖರ ಚೌಟ ಹಾಗೂ ಕಾಸರಗೋಡು ಸಿಪಿಸಿಆರ್‌ಐನ ವಿಜ್ಞಾನಿ ಶ್ರೀ ಬಿ. ನಾರಾಯಣಸ್ವಾಮಿಯವರ ಈ ಉತ್ಸಾಹಿತ ಕಾರ್ಯ ಅಭಿನಂದನೀಯ. ಮೂಲತಃ ಕನ್ನಡಿಗರಾದ ಇವರು ತಮ್ಮ ಅನುಭವೀ ತತ್ತ್ವಗಳಡಿಯಲ್ಲಿ ಸಂಗ್ರಹಿಸಿದ ಮಾಹಿತಿಗಳು ಇಡೀ ರಾಜ್ಯಕ್ಕೆ ಮಾದರಿಯಾಗಲಿವೆ. ಕಳೆದ ಡಿಸೆಂಬರ್ ತಿಂಗಳ ಆದಿಭಾಗದಲ್ಲಿ ನಡೆದ ಮಾಹಿತಿ ಸಂಗ್ರಹಣಾ ಪರ್ಯಟನೆ ಬಹುತೇಕ ಇಡೀ ಪಂಚಾಯತಿನ ಸಮಗ್ರ ಅಭಿವೃದ್ಧಿಯ ಕುರಿತು ಸ್ಥೂಲ ನೋಟ ನೀಡುವಲ್ಲಿ ಸಹಕಾರಿಯಾದುದು. ಮುಂದೆ ಬಹುಶಃ ದೇಶದೆಲ್ಲೆಡೆ ಜಾರಿಗೆ ಬರಲಿರುವ ಜಲಾನಯನ ಆಧಾರಿತ ಅಭಿವೃದ್ಧಿ ಯೋಜನೆಗಳಿಗೆ ಕೇರಳ ರಾಜ್ಯವೇ ಮೊದಲಿಗೆ ಚಾಲನೆ ನೀಡಲಿದೆ ಎನ್ನಬಹುದು.

ಜಲಾನಯನ ಆಧಾರಿತ ಮಾಹಿತಿ ಕಾರ್ಯಕ್ರಮ ಜನರ ಸಹಭಾಗಿತ್ವದ ವಿಶಿಷ್ಟ ಕಾರ್ಯಕ್ರಮ. ಮೊದಲಿಗೆ ಮನೆಮನೆಗಳಿಗೆ ತೆರಳಿ ಈ ಯೋಜನೆಗಳ ಬಗ್ಗೆ ಅರಿವು ನೀಡಲಾಗುತ್ತದೆ ಮತ್ತು ಅಲ್ಲಿಂದಲೇ ಅಗತ್ಯವಿರುವ ಮಾಹಿತಿಯನ್ನು ಸಂಗ್ರಹಿಸಲಾಗುತ್ತದೆ. ಆಯಾ ಪ್ರದೇಶದ ಜನರು ತಮಗೆ ಬೇಕಾದ ಯೋಜನೆಗಳನ್ನು ಈ ಮಾಹಿತಿಯ ಆಧಾರದಲ್ಲಿ ರೂಪಿಸಿಕೊಂಡರೆ ಅದು ಹೆಚ್ಚು ಫಲಪ್ರದವಾಗುತ್ತದೆ. ನೆಲ, ಜಲ, ಭೂ ಪ್ರಕೃತಿ ಸಂಬಂಧಿತ ಮಾಹಿತಿಗಳನ್ನು ಸಂಗ್ರಹಿಸುವುದರ ಜೊತೆಗೆ ಸಾರ್ವಜನಿಕ ಮೂಲಭೂತ ಸೌಕರ್ಯಗಳಾದ ರಸ್ತೆ ಸಂಪರ್ಕ, ಸೇವಾ ಸೌಲಭ್ಯಗಳು, ಸಾಮಾಜಿಕ ಅಭಿವೃದ್ಧಿಗೆ ಬೇಕಾದ ಪರಿಕರಗಳನ್ನೊದಗಿಸುವುದು – ಹೀಗೆ ಹಳ್ಳಿಗಳ ಸಮಗ್ರ ಅಭಿವೃದ್ಧಿಗೆ ಬೇಕಾದ ಎಲ್ಲಾ ಮಾಹಿತಿಗಳ ದಾಖಲಾತಿ ಮತ್ತು ನೈಸರ್ಗಿಕ ಸಂಪತ್ತಿನ ಸದ್ವಿನಿಯೋಗಕ್ಕೆ ಬೇಕಾದ ವ್ಯವಸ್ಥೆಯನ್ನು ಮಾಡಲು ಇದು ಆಧಾರವಾಗುತ್ತದೆ. ಈ ಎಲ್ಲ ಮಾಹಿತಿಗಳನ್ನು ಪರ್ಯಟನಾ ವಿಧಾನದಿಂದ ಸಂಗ್ರಹಿಸಿ ದಾಖಲಿಸಲಾಗುವುದು.

ಈ ಮಾಹಿತಿ ಸಂಗ್ರಹದಲ್ಲಿ ಮೊದಲೇ ತಿಳಿಸಿದಂತೆ ಪ್ರದೇಶದ ಕೃಷಿ, ತೋಟಗಾರಿಕಾ ಬೆಳೆಗಳು, ಅವುಗಳ ಸಮಸ್ಯೆಗಳು, ಕೃಷಿ ಅವಲಂಬಿತ ಕೃಷಿ ಕಾರ್ಮಿಕ ಸಮಸ್ಯೆಗಳು ದಾಖಲಿಸುವುದಾಗಿದೆ. ಸಣ್ಣ ಹಿಡುವಳಿಗಾರರ ಮನೋ ಆಧಾರಿತ ತೋಟಗಾರಿಕಾ ಬೆಳೆಗಳ ಕೃಷಿಯನ್ನು ಗುರುತಿಸುವುದು ಹೊಸ ಸಂಶೋಧನೆಗೆ ಸಹಕಾರಿ. ಜನಪ್ರಕೃತಿ, ವಸತಿ ಸೌಕರ್ಯ, ಆರ್ಥಿಕ ಸಮಸ್ಯೆಗಳು, ಪರಿಸರ ನೈರ್ಮಲ್ಯ, ಆರೋಗ್ಯ, ವಿದ್ಯಾಸಂಸ್ಥೆಗಳು, ಸಾರಿಗೆ ಸಂಪರ್ಕ, ಸಾಮಾಜಿಕ ಸಂಘಟನೆಗಳ ವಿವರಗಳನ್ನು ಸಂಗ್ರಹಿಸಲಾಗುತ್ತದೆ. ಜೊತೆಗೆ ಹೈನುಗಾರಿಕೆ, ಕೋಳಿಸಾಕಣೆ ಮೊದಲಾದ ಕೃಷಿಯ ಉಪಸೌಕರ್ಯಗಳ ಮಾಹಿತಿ, ಸಮಸ್ಯೆಗಳನ್ನು ಗುರುತಿಸಲಾಗುವುದು. ಬಹುಮುಖ್ಯವಾಗಿ ಎಂಬಂತೆ ಭೂಪ್ರಕೃತಿ, ಭೂವಿನಿಯೋಗ, ಜಲ ಮೂಲಗಳು, ಜಲಸಂರಕ್ಷಣೆ, ನೀರಾವರಿ ಸೌಲಭ್ಯ ಮತ್ತು ಕೊರತೆಗಳು, ಮಣ್ಣಿನ ಸವಕಳಿ ಮತ್ತಿತರ ಸಮಸ್ಯೆಗಳಿಗೆ ಹೆಚ್ಚಿನ ಒತ್ತು ನೀಡಿ, ಆ ಮೂಲಕ ಸಮಗ್ರ ಅಭಿವೃದ್ಧಿಗೆ ಮೂಲಾಧಾರವಾಗುವ ಜಲಸಂಪತ್ತಿನ ಅವಶ್ಯಕತೆಯನ್ನು ಎತ್ತಿ ತೋರಿಸಲಾಗುತ್ತದೆ. ರಾಜ್ಯದ ಅಥವಾ ದೇಶದ ರಾಜಧಾನಿಗಳಲ್ಲಿ ಕುಳಿತು ಮಾಡುವ ಯೋಜನೆಗಳು ಹಲವು ನ್ಯೂನತೆಗಳನ್ನೊಳಗೊಂಡಿದ್ದು ಊರಜನರ ಸಹಭಾಗಿತ್ವದಲ್ಲಿ ಸಂಗ್ರಹಿಸುವ ಸಮಗ್ರ ಮಾಹಿತಿ ವಾಸ್ತವಿಕ ಸಮಸ್ಯೆಗಳನ್ನು ಬಿಂಬಿಸಲು ಸಹಕಾರಿಯಾಗಬಲ್ಲದು. ಈ ಮಾಹಿತಿಗಳ ಆಧಾರದಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಗ್ರಾಮಸಭೆಗಳಲ್ಲಿ ಚರ್ಚಿಸಿ, ಯೋಜನೆಗಳನ್ನು ಕಾರ್ಯರೂಪಕ್ಕೆ ತರಬಹುದಾಗಿದೆ.

ಪರ್ಯಟನಾ ವಿಧಾನದಿಂದ ಸಂಗ್ರಹಿತ ಮಾಹಿತಿಗಳನ್ನು ಈಗಾಗಲೇ ವಿವಿಧ ಮೂಲಗಳಿಂದ ಲಭ್ಯವಿರುವ ಭೂಪಟಗಳ (ಭೂ ಪ್ರಕೃತಿ ನಕ್ಷೆ, ನೀರಬಿಳಹರಿವಿನ ನಕ್ಷೆ) ಸಹಾಯದಿಂದ ಆಯಾ ಪಂಚಾಯತಿಯ ವ್ಯಾಪ್ತಿಯಲ್ಲಿ ಬರುವ ಎಲ್ಲಾ ಜಲಾನಯನ ಪ್ರದೇಶಗಳ ವಿಸ್ತೀರ್ಣವನ್ನು ಪ್ರತ್ಯೇಕವಾಗಿ ನಿರ್ಧರಿಸಲಾಗುತ್ತದೆ. ನಂತರ ಈ ಎಲ್ಲಾ ಮಾಹಿತಿಗಳನ್ನು ಜಲಾನಯನ ಆಧಾರಿತ ಭೂಪಟದಲ್ಲಿ ಗುರುತಿಸಲಾಗುವುದು.

ಜಲಾನಯನ ಆಧಾರಿತ ಮಾಹಿತಿಗಳು ಗ್ರಾಮೀಣ ಸ್ತರದ ಸಮಗ್ರ ಅಭಿವೃದ್ಧಿಗೆ ಕೈಪಿಡಿಯಾಗಲಿದ್ದು ಈ ಕೈಪಿಡಿಯನ್ನು ರೂಪೀಕರಿಸಲು ಪಂಚಾಯತಿಗಳ ಸಾನ್ನಿಧ್ಯದಲ್ಲಿ ಜಲಾನಯನ ಆಧಾರಿತ ಸಮಿತಿಯನ್ನು ಆಡಳಿತ ವ್ಯವಸ್ಥೆಗಳ ಮತ್ತು ಸೇವಾ ಸಂಘಟನೆಗಳ ಸಹಭಾಗಿತ್ವದಲ್ಲಿ ರೂಪಿಸಲಾಗುತ್ತದೆ.

ಹೊಸ ಸಹಸ್ರಮಾನದ ಆರಂಭಕ್ಕೆ ಹೊಸ ಶೋಧನೆಯತ್ತ ಮುಖ ಮಾಡಿರುವ ಚಿಂತಕ ಮತ್ತು ಸಂಶೋಧಕ ವರ್ಗಗಳ ಹೊಸ ಯೋಜನೆಗಳು ದೇಶದ ಸಮಗ್ರ ಅಭಿವೃದ್ಧಿಗೆ ಹೊಸ ಹಾದಿಯನ್ನು ನೀಡುವಂತಾಗಬೇಕು. ಈ ಹೊಸ ತತ್ವಾಧಾರಿತ ಕಲ್ಪನೆಗಳು ಸಾಕಾರಗೊಳ್ಳುವುದರ ಮೂಲಕ ಇಂದಿನ ಇಂಟರ್‌ನೆಟ್ ಯುಗಕ್ಕೆ ಗ್ರಾಮೀಣ ಸ್ತರದ ಅಭಿವೃದ್ಧಿಗಳು ಸ್ಪಂದಿಸಿ ಸಮಾಜ ಕಲ್ಯಾಣಕ್ಕೆ ನೆರವಾಗಲೆಂದು ಹಾರೈಸೋಣ.




ಹರ್ಷಾದ್ ವರ್ಕಾಡಿ
ಹಲಸಿನ ಕಟ್ಟೆ, ಅಂಚೆ: ವರ್ಕಾಡಿ- ೬೭೧೩೨೩ ಕೇರಳ ರಾಜ್ಯ



'ಬೋವಿ (ಮೋಯ) ಜಾನಪದ - ಒಂದು ಅಧ್ಯಯನ' ಈ ಗ್ರಂಥ ಡಾ. ವಾಣಿ ನಾರಾಯಣ ಉಚ್ಚಿಲ್ಕರ್ ಅವರ ಸಂಶೋಧನ ಮಹಾ ಪ್ರಬಂಧ. ದಕ್ಷಿಣ ಕನ್ನಡ ಹಾಗೂ ಕಾಸರಗೋಡು ಜಿಲ್ಲೆಗಳಲ್ಲಿ ನೆಲೆನಿಂತು ಹೆಸರು ಮಾಡಿದ ಬೋವಿ(ಮೋಯ) ಜನಾಂಗದ ಬದುಕಿನ ಶ್ರೀಮಂತಿಕೆಯ ಬಹುಮುಖಗಳನ್ನು ಹಾಗೂ ಅನನ್ಯತೆಯನ್ನು ಈ ಕೃತಿ ಅಧಿಕೃತವಾಗಿ ಆತ್ಮೀಯವಾಗಿ ಸೆರೆಹಿಡಿದಿದೆ. ಹೊರ ಪ್ರಪಂಚಕ್ಕೆ ಪೂರ್ತಿಯಾಗಿ ಸುಟ್ಟುಕೊಳ್ಳದ, ಸಪಾಟಾಗದೇ ಇರುವ ತನ್ನ ಸಾಂಸ್ಕೃತಿಕ ಅಸ್ಮಿತೆಯನ್ನು ಉಳಿಸಿಕೊಂಡಿರುವ ಇಂಥ ಒಂದು ಜನಾಂಗದ ಅಧ್ಯಯನವೆಂದರೆ ಸೃಜನಶೀಲ ಮನಸ್ಸೊಂದು ಹಿಂದಕ್ಕೆ ಹೋಗಿ ನಮ್ಮನ್ನು ನಾವು ಕಂಡುಕೊಳ್ಳುವ ಉಳಿಸಿಕೊಳ್ಳುವ ಪ್ರಾಮಾಣಿಕ ಪ್ರಯತ್ನ.

ಬೋವಿಗಳು ಮೂಲತಃ ತಮಿಳುನಾಡಿನ ಮೋಯರ್ ನದಿ ತೀರದವರು. ಬಹಳ ಕಾಲ ಕೊಡಗಿನಲ್ಲಿ ಬದುಕಿ ಬಾಳಿ ಅನಂತರ ಅನೇಕ ಕಾರಣಗಳಿಂದ ಕೇರಳ ಹಾಗೂ ಕರ್ನಾಟಕದ ಭಾಗಗಳಿಗೆ ವಲಸೆಹೋದವರು. ಈ ಬೋವಿಗಳ ನಿಜವಾದ ಹೆಸರು ಮೋಯರ್. ಇವರು ಮಾತೃಮೂಲದವರು. ಭಾಷಾವಾರು ಪ್ರಾಂತ್ಯ ರಚನೆಯಿಂದಾಗಿ ತುಳುನಾಡಿನಲ್ಲಿದ್ದ ಇವರ ೧೧ ಸ್ಥಾನಗಳಲ್ಲಿ ಕೇವಲ ೨ ಸ್ಥಾನಗಳು ಕರ್ನಾಟಕದಲ್ಲಿದ್ದು ಉಳಿದ ೯ ಸ್ಥಾನಗಳು ಕೇರಳದಲ್ಲಿವೆ. ಭಗವತಿ ಇವರ ಆರಾಧ್ಯದೈವ. ಬೋವತನ (ಪಲ್ಲಕ್ಕಿ ಹೊರುವವರ ಹಿರಿಯ)ವು ಈ ಜನಾಂಗದಲ್ಲಿ ಈಗ ಅಸ್ತಿತ್ವದಲ್ಲಿಲ್ಲ. ಇವರಲ್ಲಿ ವಿಶಿಷ್ಟ ರೂಪದ ನ್ಯಾಯ ವ್ಯವಸ್ಥೆಯಿದೆ. ತಮ್ಮ ಸಮಸ್ಯೆಗಳನ್ನು ತಮ್ಮ ತಮ್ಮ ತರವಾಡುಗಳಲ್ಲಿ ತಾವೇ ಬಗೆಹರಿಸಿಕೊಳ್ಳುತ್ತಾರೆ. ಆರ್ಥಿಕವಾಗಿ ಶೈಕ್ಷಣಿಕವಾಗಿ ಇವರು ಸಾಕಷ್ಟು ಮುಂದುವರಿದಿದ್ದಾರೆ. ಒಟ್ಟಾರೆ, ಸಂಶೋಧಕಿ "ಇವರ ಬದುಕಿನ ರೀತಿನೀತಿಗಳು, ಸಾಮಾಜಿಕ, ಧಾರ್ಮಿಕ ಸ್ಥಾನಮಾನಗಳು, ಸಂಸ್ಕಾರ ಸಂಪ್ರದಾಯಗಳು, ಹಬ್ಬ ಹರಿದಿನಗಳ ಆಚರಣೆಯ ವಿಧಿವಿಧಾನಗಳು, ಆರಾಧನ ವೈಶಿಷ್ಟ್ಯ, ಆರಾಧನ ಕೇಂದ್ರಗಳು ಹಾಗೂ ದೈವಗಳು ಇವುಗಳನ್ನೆಲ್ಲ ಪರಿಶೀಲಿಸಿದರೆ ಇದು ಒಂದು ಕಾಲಕ್ಕೆ ಸಮೃದ್ಧಿಯ ಬಾಳನ್ನು ಬಾಳಿದ ಸಮುದಾಯವೆಂದು ಹೇಳಬಹುದು," ಎಂಬ ತೀರ್ಮಾನಕ್ಕೆ ಬಂದಿದ್ದಾರೆ.

ಈ ಕೃತಿಯಲ್ಲಿ ಎಂಟು ಪ್ರಮುಖ ಅಧ್ಯಾಯಗಳಿದ್ದು





*ಪುಟ : ೨೬೭* *ಬೆಲೆ : ರೂ. ೩೦೦*

*ಪ್ರಕಾಶನ :*

**ಯಂಗ್ ಮೆನ್ಸ್ ಬೋವಿ ಅಸೋಸಿಯೇಷನ್, ಮುಂಬಯಿ**

ಅನೇಕ ಉಪ ಅಧ್ಯಾಯಗಳೂ ಇವೆ. ಬೋವಿಗಳ ಸಾಮಾಜಿಕ ಹಿನ್ನೆಲೆ, ಭಾಷೆಯ ಸ್ವರೂಪ, ಕುಟುಂಬ ಪದ್ಧತಿ, ನಂಬಿಕೆ, ಮನೋರಂಜನೆ, ಜೀವನಾವರ್ತನದ ಆಚರಣೆಗಳು, ವಾರ್ಷಿಕ ಆವರ್ತನದ ಆಚರಣೆಗಳು, ಆರಾಧನೆ, ಅರ್ಥವ್ಯವಸ್ಥೆ, ಶಿಕ್ಷಣ, ಸಾಂಘಿಕ ಚಟುವಟಿಕೆ, ಇಂದಿನ ಪರಿಸ್ಥಿತಿ, ಮುಂಬಯಿಯಲ್ಲಿ ಬೋವಿಗಳ ನೆಲಸು ಹಾಗೂ ಸಮಾಪನ ಹೀಗೆ ಬೋವಿ ಜಾನಪದವನ್ನು ಸಮಗ್ರವಾಗಿ ವಿಶ್ಲೇಷಿಸಲಾಗಿದೆ.

ಬೋವಿಗಳು ದ್ರಾವಿಡ ಬುಡಕಟ್ಟಿಗೆ ಸೇರಿದ ಸಂಚಾರಿ ಜನಾಂಗ. ಇವರ ಭಾಷೆಯ ಮೇಲೆ ತಮಿಳು, ಮಲೆಯಾಳಂ, ತುಳು, ಕನ್ನಡ ಮೊದಲಾದ ಭಾಷೆಗಳ ಪ್ರಭಾವ ದಟ್ಟವಾಗಿದೆ. ಇಂದು ಬೋವಿ ಜನಾಂಗದ ಮಾತೃಭಾಷೆಯನ್ನು ಮಲೆಯಾಳದ ಒಂದು ಉಪಭಾಷೆ ಎಂದು ಗುರುತಿಸಲಾಗಿದೆ. ಇದನ್ನು 'ಬೋವಿ ಮಲಾಮ' ಎಂಬುದಾಗಿ ಲೇಖಕರು ಹೆಸರಿಸಿದ್ದಾರೆ. ಬೋವಿ ಭಾಷೆ ಎಷ್ಟೇ ಭಾಷೆಗಳ ಪ್ರಭಾವಕ್ಕೆ ಒಳಗಾದರೂ ಅದು ತನ್ನ ಸ್ವತಂತ್ರವಾದ ಅಸ್ತಿತ್ವವನ್ನು ಕಳೆದುಕೊಂಡಿಲ್ಲ ಎಂಬುದನ್ನು ತೌಲನಿಕವಾಗಿ ಚರ್ಚಿಸಲಾಗಿದೆ.

ಬೋವಿಗಳ ಮದುವೆ ವಿಶಿಷ್ಟಪೂರ್ಣವಾದುದು. ಈ ಶುಭ ಕಾರ್ಯದಲ್ಲಿ ಯಾವ ಗುರುಗಳಾಗಲಿ ಯಾವ ಪುರೋಹಿತರಾಗಲಿ ಭಾಗವಹಿಸುವುದಿಲ್ಲ. ಬೋವಿಗಳು ತಮ್ಮ ಹಿರಿಯರ ಸಮ್ಮುಖದಲ್ಲಿ ತಮ್ಮ ಆರಾಧ್ಯ ದೈವ ಭಗವತಿಯ ಸಾಕ್ಷಿಯಾಗಿ ಸಾಂಕೇತಿಕ ರೂಪಗಳನ್ನಿಟ್ಟು ವಿವಾಹ ನಡೆಸುವುದು ವಿಶೇಷವಾದ್ದು. ಬ್ರಾಹ್ಮಣರಲ್ಲಿರುವ ಗೋತ್ರ (ಬಳಿ) ಪದ್ಧತಿಯೂ ಬೋವಿಗಳಲ್ಲಿರುವುದು ಒಂದು ವೈಶಿಷ್ಟ್ಯ. ಬ್ರಿಟಿಷ್ ನ್ಯಾಯಾಲಯವು ಕ್ರಿ.ಶ. ೧೮೯೨ರಲ್ಲಿ ಬೋವಿಗಳ ನ್ಯಾಯ ಪದ್ಧತಿಯನ್ನು ಗುರುತಿಸಿ ಮನ್ನಣೆ ನೀಡಿತ್ತು.

ಬೋವಿಗಳ ಮನೆಗಳಿಗೆ ಮುಖ್ಯವಾಗಿ ಎರಡು ಪ್ರವೇಶ ದ್ವಾರಗಳಿರುತ್ತವೆ. ಒಂದು ಗಂಡಸರು ಪ್ರವೇಶ ಮಾಡುವ ದ್ವಾರ, ಎರಡನೆಯದು ಅಡುಗೆ ಮನೆಯಿಂದ ಹೆಂಗಸರಿಗೆ ಹೊರಗೆ ಹೋಗುವುದಕ್ಕಾಗಿ. ಇಲ್ಲಿ ಮಾತೃ ಪ್ರಧಾನ ವ್ಯವಸ್ಥೆ ಇದ್ದೂ ಪುರುಷ ಪ್ರಧಾನ ವ್ಯವಸ್ಥೆಯ ಕೈ ಮೇಲಾದುದನ್ನು ಕಾಣಬಹುದು.

ಬೋವಿಗಳಲ್ಲಿ ಹೆಣವನ್ನು ಹೂಳುವ ಶೈವ ಪರಂಪರೆ ರೂಢಿಯಲ್ಲಿದೆ.

ವಿಶಿಷ್ಟ ಸಂಪ್ರದಾಯಗಳಿಂದ ಕೂಡಿದ ಬೋವಿಗಳು ಭಗವತಿಯ ಆರಾಧಕರು; ಅಂದರೆ ಈ ಬೋವಿಗಳು ಶಕ್ತಿಯ ಆರಾಧಕರು. ಶಾಕ್ತೇಯರು. ಶಕ್ತಿಯ ಬೇರೆಬೇರೆ ರೂಪಗಳನ್ನು ಇವರು ಭಗವತಿಯ ಹೆಸರಿನಲ್ಲಿ ಪೂಜಿಸುತ್ತಾರೆ. ದಫನ ಮಾಡುವ ಶೈವ ಸಂಪ್ರದಾಯವೂ ಇಲ್ಲಿದೆ. ತಿರುಪತಿ ತಿಮ್ಮಪ್ಪನ ಮುಡಿಪೂ ಇವರ ಮನೆಯಲ್ಲಿದ್ದು ಆರಾಧನೆಗೊಳ್ಳುತ್ತದೆ. ಇವರು ಪಂಜುರ್ಲಿ, ಕಲ್ಲುರ್ಟಿ, ಗುಳಿಗ, ಕೊರ್ತಿ, ಇವೇ ಮೊದಲಾದ ಭೂತಗಳ ಆರಾಧನೆಯನ್ನು ಮಾಡುತ್ತಾರೆ (ಪುಟ ೧೧೧).

ಅಂತಾರಾಷ್ಟ್ರೀಯ ಮಟ್ಟದಲ್ಲಿ ಭಾಗವಹಿಸಿದ ಕ್ರೀಡಾಪಟುಗಳು, ಯಕ್ಷಗಾನ ಕಲಾವಿದರು, ಉದ್ದಿಮೆಪತಿಗಳು, ಸಾಹಿತ್ಯ ಕ್ಷೇತ್ರದಲ್ಲಿ ದುಡಿದ ಹಿರಿಕಿರಿ ವಿದ್ವಾಂಸರಿಂದ ಕೂಡಿದ ಅಲ್ಪಸಂಖ್ಯಾತ ಬೋವಿ ಸಮಾಜ ವ್ಯವಸ್ಥೆ ಕುತೂಹಲಕಾರಿಯಾಗಿದೆ.

ಹೀಗೆ ವ್ಯಾಪಕವಾದ ಕ್ಷೇತ್ರಕಾರ್ಯದ ಹಿನ್ನೆಲೆಯಲ್ಲಿ ಬೋವಿ ಜಾನಪದ ಜಗತ್ತಿನ ಒಳಹೆಣಿಗೆಗಳ ಸೂಕ್ಷ್ಮ ಗ್ರಹಿಕೆಗಳನ್ನು ಸಶಕ್ತವಾಗಿ ವೈಜ್ಞಾನಿಕವಾಗಿ ಅರ್ಥೈಸಿದ ಹಿರಿಮೆಗೆ ಡಾ. ವಾಣಿ ಅವರ ಈ ಮಹಾಪ್ರಬಂಧ ಪಾತ್ರವಾಗಿದೆ. ನಮ್ಮ ಜಾನಪದ ಲೋಕದ ಮೇಲು ನೋಟದ ಅನಿಸಿಕೆಗಳಿಂದ ಆಚೆ ಹೋಗಿ ಸಮಾಜದ ರಚನೆಗಳನ್ನು ಸಮಗ್ರವಾಗಿ ಅಧ್ಯಯನ ಮಾಡಲು, ಆ ಮೂಲಕ ಜಾನಪದ ವಲಯದ ಸತ್ಯವನ್ನು ಅಧಿಕೃತವಾಗಿ ತೆರೆದಿಡುವ ವಸ್ತುನಿಷ್ಠ ಮಹತ್ವಾಕಾಂಕ್ಷೆ ಇಲ್ಲಿ ಚೆನ್ನಾಗಿ ನೆರವೇರಿದೆ. ಬೋವಿ ಜನಾಂಗದ ಹಿನ್ನೆಲೆ, ಕಾಲಾಂತರದಲ್ಲಿ ಅದು ಪಡೆದ ಮಾರ್ಪಾಡು, ಪ್ರತ್ಯೇಕತೆಯನ್ನು ಉಳಿಸಿಕೊಳ್ಳಲು ನಡೆಸಿದ ಸಂಘರ್ಷ- ಹೀಗೆ ಒಟ್ಟಾರೆ ಬೋವಿ ಜನಾಂಗದ ಜೀವನ ಕ್ರಮವನ್ನು ಈ ಗ್ರಂಥ ಕಟ್ಟಿಕೊಟ್ಟಿದೆ. ಇತಿಹಾಸ ಬರೇ ರಾಜಮಹಾರಾಜರ ಕತೆಯಲ್ಲ, ಆಗಲೂಬಾರದು. ಅಲ್ಲಿ ಜನಸಮುದಾಯಗಳ ಸಾಧನೆಯೂ ದಾಖಲಾಗಬೇಕು. ಈ ದೃಷ್ಟಿಯಿಂದ ಬೋವಿಗಳ ಬದುಕಿನ ಹಲವು ಮಜಲುಗಳನ್ನು ಇಲ್ಲಿ ಮೊದಲ ಬಾರಿಗೆ ದಾಖಲಿಸಿ ಡಾ|| ವಾಣಿ ಉಚ್ಚಿಲ್ಕರ್ ಜಾನಪದ ಅಧ್ಯಯನದಲ್ಲಿ ಘಟ್ಟವಾದ ಕೃತಿಯನ್ನು ನಮ್ಮ ಮುಂದಿಟ್ಟಿದ್ದಾರೆ. ಡಾ|| ವಾಣಿ ನಾರಾಯಣ ಉಚ್ಚಿಲ್ಕರ್ ಅವರನ್ನು, ಈ ಕೃತಿಯನ್ನು ಅಚ್ಚುಹಾಕಿಸಿದ ಯಂಗ್ ಮೆನ್ಸ್ ಬೋವಿ ಎಸೋಸಿಯೇಶನ್‌ದ ಮಿತ್ರರನ್ನು ಹಾರ್ದಿಕವಾಗಿ ಅಭಿನಂದಿಸುತ್ತೇನೆ.


**ಜಿ. ಎನ್. ಉಪಾಧ್ಯ**

ಉಪನ್ಯಾಸಕರು, ಕನ್ನಡ ವಿಭಾಗ

ಮುಂಬಯಿ ವಿಶ್ವವಿದ್ಯಾಲಯ

ವಿದ್ಯಾನಗರಿ, ಮುಂಬಯಿ - ೪೦೦ ೦೯೮.

# ಕುದುರೆಮುಖದ ಎರಡು ಮುಖ

ವಿ. ಚಂದ್ರಶೇಖರ ನಂಗಲಿ

**ಅಂಕಿ**-ಅಂಶಗಳ ಹೇಳಿಕೆಗೂ ಅನುಭವಗಳೇ ಮನಗಾಣಿಸುವ ಕಾಣ್ಕೆಗೂ ಅಂತರ ಅಪಾರ ! ಸಹ್ಯಾದ್ರಿಯ ಪರಿಸರದಲ್ಲಿ ಸಹಜವಾಗಿ ಅರಳಿಕೊಂಡ ಇಬ್ಬಗೆಯ 'ಮನುಷ್ಯಾವಾಸ'ಗಳ ಪ್ರತ್ಯಕ್ಷ ದರ್ಶನ ಇಲ್ಲಿದೆ :

೧. **ನಸೆಹಳ್ಳದ ಸುತ್ತಮುತ್ತ** : ಕುದುರೆಮುಖ ಶಿಖರಕ್ಕೆ ಕಾಲ್ನಡಿಗೆಯಲ್ಲಿ ಚಾರಣ ಕೈಗೊಳ್ಳುವವರಿಗೆ ಸಂಸೆ >ಬಾಳಗಲ್‌ನಿಂದ ಆರಂಭಿಸಿದರೆ ಮುಳ್ಳೋಡಿ > ನಸೆಹಳ್ಳ > ತೊಳಲಿ ಎಂಬ ಗ್ರಾಮಗಳು ಸಿಗುತ್ತವೆ. ಇದೀಗ ಕುದುರೆಮುಖ ರಾಷ್ಟ್ರೀಯ ಉದ್ಯಾನವನದ ವ್ಯಾಪ್ತಿಗೂ ಸೇರಿದ ಈ ಗಿರಿಗ್ರಾಮಗಳು ಗುಡ್ಡಗಾಡು ಸಂಸ್ಕೃತಿಯ ಕುರುಹುಗಳೊಂದಿಗೆ ಆಧುನಿಕತೆಯ ಸಂಪರ್ಕ ಪಡೆದು ಮೆಲ್ಲಗೆ ಸ್ಥಿತ್ಯಂತರಗೊಳ್ಳುತ್ತಿರುವ ವನ್ಯತಾಣಗಳೂ ಆಗಿವೆ. ವಸಂತಚಾರಣ-೨೦೦೧ನೇ ಸಾಲಿಗೆ ಕುದುರೆಮುಖ ಶಿಖರದಲ್ಲಿ ಎರಡು ದಿನ ತಂಗಿದ್ದು ಅಲ್ಲಿನ ಸಿರಿ ಸೊಬಗನ್ನು ಅನುಭವಿಸಿದ್ದ ಅಗನಾಗ್ ಗೆಳೆಯರು ಹಿಂದಿರುಗುವಾಗ ಒಂದು ರಾತ್ರಿಯ ಮಟ್ಟಿಗೆ ನಸೆಹಳ್ಳದಲ್ಲಿ ಉಳಿಯಲು ನಿಶ್ಚಯಿಸಿದ್ದರು. ಅವರಿಗೆ ಇದಕ್ಕಿದ್ದ ಮತ್ತೊಂದು ಆಕರ್ಷಣೆಯೆಂದರೆ, ನಸೆಹಳ್ಳದ ಶಾಂತಪ್ಪ ಗೌಡರು ಮತ್ತು ವಿಶ್ವನಾಥ ಗೌಡರು ಕೋಲಾರದ ಅಗನಾಗ್ ಗೆಳೆಯರಿಗೆ ಹಲವು ವರ್ಷಗಳಿಂದ ಚೆನ್ನಾಗಿ ಪರಿಚಯವಿದ್ದುದು.

ನಸೆಹಳ್ಳದಲ್ಲಿ ಕಾಲಿಟ್ಟಾಗ ಆಗತಾನೆ ಮುಂಗಾರಿನ ಮೊದಲ ಮಳೆಹನಿಗಳು ಬಿದ್ದಿದ್ದವು. ಸುದೀರ್ಘ ಮಳೆಗಾಲವನ್ನು ಎದುರಿಸುವುದಕ್ಕೆ ಸಾಕ್ಷಿಯಾಗಿ ಮನೆಮಂದಿಯೆಲ್ಲ ಸೇರಿ ಕೂಡಿಟ್ಟ ಕಟ್ಟಿಗೆಯ ಸಂಗ್ರಹ ನಮ್ಮ ಕಣ್ಣಿಗೆ ಎದ್ದುಕಾಣುತ್ತಿತ್ತು. ಗೌಡದ್ವಯರ ಮನೆಯಂಗಳದಲ್ಲಿ ದೇಸಿ ಕೋಳಿಗಳು ತಮ್ಮ ಕಾಲುಗಳಿಂದ ಕಸಕಡ್ಡಿಗಳನ್ನು ಗೆಬರುತ್ತಾ ಕೊಕ್ಕುಗಳಲ್ಲಿ ಜೀವರಸವನ್ನು ತುಂಬಿಕೊಳ್ಳುತ್ತಿದ್ದವು. ಅಲ್ಲೇ ಬದಿಯಲ್ಲಿದ್ದ ಮರವೊಂದರಲ್ಲಿ ಹಾವೊಂದು ಅಡ್ಡಾಡುತ್ತಾ ತನ್ನ ನೀಳವಾದ ಒಡಲನ್ನು ಮರದ ಕೊಂಬೆಗೆ ಬಳ್ಳಿಯಂತೆ ಸುತ್ತಿಕೊಂಡಿರುವುದು ಕಂಡುಬಂದಿತು. ವಿಶ್ವನಾಥ ಗೌಡರು ಒಂದು ಪಾತ್ರೆಯಲ್ಲಿ ತುಂಬಿದ್ದ ಜೇನಿನ ಹಲ್ಲೆಗಳನ್ನು ತಂದು ನಮ್ಮ ಮುಂದಿಟ್ಟರು. ಕಳೆದೆರಡು ದಿನಗಳಿಂದ ಗುಡ್ಡಗಾಡಿನಲ್ಲಿ ಅಲೆದಾಡಿ ಮರದ ಪೊಟರೆಗಳಿಂದ ಸಂಗ್ರಹಿಸಿದ್ದ ಆ ಸವಿಜೇನಿನ ಹಲ್ಲೆಗಳನ್ನು ರೊಟ್ಟಿಯ ತುಂಡುಗಳಂತೆ ಮುರಿದು ಬಾಯಲ್ಲಿಟ್ಟುಕೊಂಡು ಜಗಿದು ಚಪ್ಪರಿಸಿ ಮೇಣವನ್ನುಗುಳಿದೆವು. ಹೀಗೆ ಗೌಡರ ಮನೆಯಂಗಳದಲ್ಲಿ ನಾವೆಲ್ಲ ಸಿಹಿಯಾಗಿ ವಿಶ್ರಮಿಸಿದ್ದಾಯ್ತು.

ಸಂಜೆಯಾಗುತ್ತಿದ್ದಂತೆ ಮೇಯಲು ಹೋಗಿದ್ದ ಮಲೆನಾಡಿನ ವಿಶಿಷ್ಟ ದೇಸಿ ತಳಿಗಳಾದ ಗಿಡ್ಡನೆಯ ಹಸುಗಳು ಕೊಟ್ಟಿಗೆಗೆ ಹಿಂದಿರುಗುತ್ತಿದ್ದವು. ನಮ್ಮೊಂದಿಗೆ ಬಿಡುವಾಗಿ ಕುಳಿತ ಗೌಡದ್ವಯರು ಕಳೆದಸರ್ತಿ ಬಂದಿದ್ದಾಗ ನಾವು ತೆಗೆದಿದ್ದ ಕೌಟುಂಬಿಕ ಫೋಟೋಗಳನ್ನು ಇದೀಗ ದೊಡ್ಡದು ಮಾಡಿ ಕಟ್ಟು ಹಾಕಿಸಿ ಕೊಟ್ಟದ್ದನ್ನು ನೆನಪಿಸಿಕೊಂಡು ತಮ್ಮ ಕೃತಜ್ಞತೆಯನ್ನು ಸೂಚಿಸಿದರು. ''ಇನ್ನೊಂದೆರಡು ದಿನ ಇಲ್ಲೇ ಇದ್ದುಬಿಡಿ ! ಮಳೆ ಚೆನ್ನಾಗಿ ಬಿದ್ದು ಹೊಳೆ ಹರಿಯುವಂತಾದರೆ ಹತ್ತು ಮೀನುಗಳನ್ನು ಹಿಡಿಯಬಹುದು''- ಎಂಬ ಸಲಹೆ ಮುಂದಿಟ್ಟರು. ಆದರೆ ಮಾರನೇ ದಿನವೇ ಕಾರ್ಯನಿಮಿತ್ತ ಸ್ವಸ್ಥಳದಲ್ಲಿರಲೇಬೇಕಾಗಿದ್ದ ನಮಗೆ ಹತ್ತು ಮೀನಿನ ಕಾರ್ಯಾಚರಣೆಗೆ ಅಗತ್ಯವಾದ ನಿರಾಳಭಾವವಿರಲಿಲ್ಲ. ರಾತ್ರಿ ಶಾಂತಪ್ಪ ಗೌಡರ ಮನೆಯಲ್ಲಿ 'ಅಕ್ಕಿಮಂದ' (=ಬತ್ತದ ಮೊಳಕೆ ಕಟ್ಟಿನ ಮದ್ಯ) ಕುಡಿದು, 'ತುಂಡುಗಡಬು' (=ಕೋಳಿ ಮಾಂಸದ ತುಂಡುಗಳು ಮತ್ತು ಅಕ್ಕಿಹಿಟ್ಟಿನ ಮುದ್ದೆ) ಸವಿದು ವಿಶ್ವನಾಥ ಗೌಡರ ಮನೆಯಲ್ಲಿ ಮಲಗಲು ತೋಟ ಮತ್ತು ಗದ್ದೆಗಳನ್ನು ಹಾದು ಬರುತ್ತಿರಬೇಕಾದರೆ ಬ್ಯಾಟರಿ ಬೆಳಕಿಗೆ ಜ್ವಲಿಸುವ ಕೆಂಪು ಕಣ್ಣುಗಳನ್ನು ನಿಶ್ಚಲವಾಗಿ ಬಿಟ್ಟುಕೊಂಡು ಬೆದರುನೋಟ ಬೀರುವ ಮೂರು ನಾಲ್ಕು ಮೊಲಗಳು ಕಣ್ಣಿಗೆ ಬಿದ್ದವು.

ಬೆಳಿಗ್ಗೆ ನೂರೊಂದು ಬಗೆ ಪಕ್ಷಿಗಳ ಕಲರವಕ್ಕೆ ಎಚ್ಚತ್ತು ಹೊಳೆಯಲ್ಲಿ ಮುಖ ತೊಳೆಯಲು ಬಂದರೆ, ಗದ್ದೆ ಬದುಗಳ ಮೇಲೆ ಚಿಟ್ಟು ಕೋಳಿಗಳೂ, ಕಾಡುಕೋಳಿಗಳೂ ಅಡ್ಡಾಡುತ್ತಿದ್ದುದನ್ನು ನೋಡಿದೆವು. ಆಗಾಗ್ಗೆ ನವಿಲಿನ ಕೇಕೆಯನ್ನು ಕೇಳುತ್ತಿದ್ದ ನಮಗೆ ನವಿಲು ಕಣ್ಣಿಗೆ ಬೀಳಬಾರದೆ ಎನಿಸಿತು. ನಮ್ಮ ಬಯಕೆಗನುಗುಣವಾಗಿ ಕೊಂಚಕಾಲದಲ್ಲೇ ನವಿಲೊಂದರ ದರ್ಶನ ಭಾಗ್ಯವೂ ಲಭಿಸಿತು. ನಸೆಹಳ್ಳದ ತೋಟ ಗದ್ದೆಗಳ ಮಧ್ಯೆ ನಮಗೆ ಚೆನ್ನಾಗಿ ಪರಿಚಯವಿದ್ದ ಗಿಡಮೂಲಿಕೆಗಳು ಇಲಿಕಿವಿ ಸೊಪ್ಪು, ಹಲವು ಮಕ್ಕಳ ತಾಯಿ, ವನಮೊಗಿಲಿ, ಕಾಶಿಸೊಪ್ಪು ಮುಂತಾದವು ಸಮೃದ್ಧವಾಗಿ ತಂತಾನೆ ಬೆಳೆದಿರುವುದನ್ನು ಕಂಡು ಬೆರಗಾದೆವು. ರಾತ್ರಿಯೆಲ್ಲ ಸಣ್ಣಗೆ ಹನಿಯುತ್ತಿದ್ದ ಮಳೆ ಇದೀಗ ಕೊಂಚ ಬಿಡುವು ಕೊಟ್ಟಿತು. ಮಳೆಗಾಲ ತನ್ನ ಮೊದಲ ಪಾದವನ್ನು ಇನ್ನೂ ಚೆನ್ನಾಗಿ ಊರಿರಲಿಲ್ಲ. ಇನ್ನೆರಡು ದಿನ ಕಳೆದರೆ ಜಿಗಳೆ ಕಾಟ ಶುರುವಾಗುವುದೆಂದೂ ಆಗ ಅಂಗಳದಲ್ಲಿ ಕೂಡ ಅಡ್ಡಾಡಲಾಗದಂತೆ ಎಲ್ಲೆಂದರಲ್ಲಿ ಜಿಗಳೆಗಳು ವೃದ್ಧಿಯಾಗುತ್ತವೆಯೆಂದು ನಮ್ಮ ಆತಿಥೇಯರು ತಿಳಿಸಿದರು. ''ಆಗ ನೀವು ಹೇಗೆ ಓಡಾಡುತ್ತೀರಿ ?'' ಎಂಬ ನಮ್ಮ ಪ್ರಶ್ನೆಗೆ ವಿಶ್ವನಾಥ ಗೌಡರು ಕೊಟ್ಟ ಉತ್ತರವಿದು : ''ಬಲಗಾಲಿಗೆ ಹತ್ತಿದ ಜಿಗಳೆಗಳನ್ನು ಎಡಗಾಲಿನ ಪಾದದಿಂದಲೂ ಎಡಗಾಲಿಗೆ ಹತ್ತಿದ ಜಿಗಳೆಗಳನ್ನು ಬಲಗಾಲಿನ ಪಾದದಿಂದಲೂ ತಿಕ್ಕಿ ಒರೆಸಿ ಕಳೆದು ನಡೆಯುತ್ತಿರುತ್ತೇವೆ.''

ಯಾವುದೇ ಯಂತ್ರ ಅಥವಾ ವಿದ್ಯುತ್ ಶಕ್ತಿಯ ನೆರವಿಲ್ಲದ ನಸೆಹಳ್ಳದ ನೀರಾವರಿಯ ಬಗ್ಗೆ ಇಲ್ಲಿ ಹೇಳಲೇಬೇಕು. ಎರಡು ಮೇಡುಗಳ ನಡುವಣ ಕಾಡುಗಳನ್ನೇ ಶೋಲಾ ಅರಣ್ಯಗಳೆಂದು ಕರೆಯುತ್ತಾರೆ. ಇವು ನೈಸರ್ಗಿಕ ಜಲನಿಧಿಗಳಿದ್ದಂತೆ ! ಇಲ್ಲಿ ಜನಿಸುವ ಗಿರಿ ಜರಿಗಳಿಗೆ ಚಿಕ್ಕದಾಗಿ ಕಾಲುವೆ ತೋಡಿ ಅದನ್ನು ವಿಸ್ತರಿಸಿಕೊಳ್ಳುತ್ತಾ, ಹಲವು ಗುಡ್ಡಗಳನ್ನೆ ಬಳಸಿಕೊಳ್ಳುತ್ತಾ, ಕವಲು ಕವಲುಗಳಾಗಿ ಒಂದಕ್ಕೊಂದು ಸರಪಳಿ ಸಂಬಂಧವನ್ನು ಬೆಸೆಯುತ್ತಾ, ಕೆಳಗಿನ ತಪ್ಪಲು ಪ್ರದೇಶದ ಬತ್ತದ ಗದ್ದೆಗಳಿಗೆ, ತೋಟಕ್ಕೆ, ಗೃಹಬಳಕೆಗೆ ಸದಾ ನೀರು ಹರಿಯುತ್ತಿರುವಂತೆ ಅಣಿಗೊಳಿಸಿರುವ ಈ ಗುಡ್ಡಗಾಡು ನೀರಾವರಿಯು ಸ್ಥಳೀಯ ಇಂಜಿನಿಯರಿಂಗ್ ಕೌಶಲ್ಯದ ನಿದರ್ಶನವಾಗಿದೆ. ಗುಡ್ಡ ಸಾಲುಗಳನ್ನು ನೆಲಸಮಗೊಳಿಸದೆ ತೋಟ-ಗದ್ದೆಗಳನ್ನು ಕಾಂಟೂರ್ ಪದ್ಧತಿಯಲ್ಲಿ ವಿಂಗಡಿಸಿಕೊಂಡು ಮೆಟ್ಟಿಲು ಮೆಟ್ಟಿಲುಗಳಾಗಿ ನಡೆಸುತ್ತಿರುವ 'ಗುಡ್ಡಗಾಡಿನ ಬೇಸಾಯ' ನಮ್ಮ ಪೂರ್ವಿಕರ ಪರಿಸರ ಸ್ನೇಹಿ ತಂತ್ರಜ್ಞಾನದ ಅತ್ಯುತ್ತಮ ಆವಿಷ್ಕಾರವೆನಿಸುತ್ತದೆ. ಬಿರುಬೇಸಿಗೆಯಿಂದಾಗಿ ಚೆನ್ನಾಗಿ ಒಣಗಿಹೋಗಿದ್ದು ಅಲ್ಲಲ್ಲಿ ಸುಟ್ಟು ಕರಿಕಾಗಿರುವ ಈ ಸುವಿಶಾಲವಾದ ಬೋಳುಗುಡ್ಡಗಳ ಒಡಲಿನಲ್ಲಿ ಜುಳು ಜುಳನೆ ಸಾಗುವ ಕಾಲುವೆಗಳು ಸ್ಥಳೀಯ ಗಿರಿಜನರ ಬುದ್ಧಿಮತ್ತೆಯ ಪರಿಣಾಮವಾಗಿದೆ. ಎಲ್ಲಕ್ಕಿಂತ ಮುಖ್ಯವಾಗಿ ನಸೆಹಳ್ಳದ ಸುತ್ತಮುತ್ತ ನಾವು ಕಂಡ ಜೀವಿ ವೈವಿಧ್ಯವು ಮನುಷ್ಯನ ಹಸ್ತಕ್ಷೇಪದಿಂದ ವಿರೂಪಗೊಳ್ಳದ ಹಾಗೂ ಕಣ್ಮರೆಯಾಗದ ನಿಸರ್ಗದ ಸಹಜಯೋಗಕ್ಕೆ ಒಂದು ಉದಾಹರಣೆಯೆನಿಸಿತು.

೨. **ಕೆ. ಐ.ಓ.ಸಿ.ಎಲ್. ಸುತ್ತಮುತ್ತ** : ಬಾಳಗಲ್‌ನಿಂದ ಬೆಂಗಳೂರಿಗೆ ಹೊರಡಬೇಕಾದರೆ ಎರಡು ವಿಧಗಳಿವೆ : ೧. ಸಂಸೆಗೆ ಹೋಗುವುದು ; ೨. ಕುದುರೆಮುಖ ಟೌನಿಗೆ (ಮಲ್ಲೇಶ್ವರ) ಹೋಗುವುದು. ಅಗನಾಗ್ ಗೆಳೆಯರು ಕುದುರೆಮುಖ ಟೌನ್ ನೋಡುವುದಕ್ಕಿಂತಲೂ ಬೆಂಗಳೂರು ಬಸ್ಸನ್ನು ಸ್ಟಾರ್ಟಿಂಗ್ ಪಾಯಿಂಟ್ನಲ್ಲೇ ಹಿಡಿಯುವ ಉದ್ದೇಶದಿಂದ ಕುದುರೆಮುಖ ಟೌನಿಗೆ ಬಂದರು. ಅಲ್ಲಿದ್ದ ಕಾಂಕ್ರೀಟು ಕಟ್ಟಡಗಳ ಸಾಲು, ಟಾರು ರಸ್ತೆಗಳು, ಪಾರ್ಕುಗಳು, ಸಾಲುಮರಗಳು ಅಲಂಕಾರಪ್ರಾಯವಾಗಿದ್ದರೂ ಒಂದು ಬಗೆಯ ನಿರ್ಜೀವತೆಯ ಕಳೆಯನ್ನು ಧರಿಸಿದ್ದವು. ಕೆ.ಎಸ್.ಆರ್.ಟಿ.ಸಿ. ಕೌಂಟರಿನಲ್ಲಿ ಬೆಂಗಳೂರಿಗೆ ಟಿಕೆಟ್ ಬುಕ್ ಮಾಡಿಸಿದ್ದಾಯ್ತು. ಬಸ್ಸು ಹೊರಡಲು ಇನ್ನೂ ಸಾಕಷ್ಟು ಸಮಯವಿದ್ದುದರಿಂದ ಕೆ.ಐ.ಓ.ಸಿ.ಎಲ್. (=ಕುದುರೆಮುಖ ಐರನ್ ಓರ್ ಕಂಪೆನಿ ಲಿಮಿಟೆಡ್) ಸುತ್ತಮುತ್ತ ಕೊಂಚ ಅಡ್ಡಾಡಿದೆವು. ಅಲ್ಲಿ ನಮಗೆ ಭೇಟಿಯಾದ ಸಿಬ್ಬಂದಿ ವರ್ಗಕ್ಕೆ ಕನ್ನಡ ಭಾಷೆಯ ಗಂಧವಿಲ್ಲವೆಂಬುದು ಅರಿವಾಯಿತು. ಬಹುಶಃ ಇಂಡಿಯಾದ ಬೇರೆ ಬೇರೆ ತಾಣಗಳಿಂದ ಬಂದ ಉನ್ನತ ಅಧಿಕಾರಿಗಳು ಮತ್ತು ನೌಕರಶಾಹಿಯೇ ಇಲ್ಲಿ ಹೆಚ್ಚಾಗಿರಬಹುದೆಂದು ಭಾವಿಸಿಕೊಂಡೆವು. ಆ ಪ್ರದೇಶದಲ್ಲಿ ನಮಗೆ ಏಕರೂಪಾತ್ಮಕ ನೆಡುತೋಪುಗಳೇ ಹೆಚ್ಚಾಗಿ ಕಾಣುತ್ತಿತ್ತು. ಕೆ.ಐ.ಓ.ಸಿ.ಎಲ್.ನ ಕಾರ್ಯಾಚರಣೆಯ ಫಲಿತಗಳಿಗೆ ಸಾಕ್ಷಿಯಾಗಿ ಆ ಭೂಭಾಗದ ಗುಡ್ಡ ಸಾಲುಗಳನ್ನು ಯಾವುದೋ ದೈತ್ಯಶಕ್ತಿಯೊಂದು ತೋಬಡ ಹೊಡೆದು ನೆಲಸಮಗೊಳಿಸಿರುವಂತೆ ಭಾಸವಾಯ್ತು. ಅಲ್ಲಲ್ಲಿ ಅರ್ಧ ಅಗೆದಿದ್ದ ಗುಡ್ಡಗಳು ಕೆಂಪು ಕೆಂಪಾಗಿದ್ದು ಆಳವಾದ ಗಾಯಗಳಂತೆ ಕಂಡುಬಂದವು.

ಬೋಳು ಗುಡ್ಡ ಸಾಲುಗಳನ್ನು ಹಾಗೆ ಉಳಿಸಿಕೊಂಡು ಕೃಷಿ ಮಾಡುತ್ತಿರುವ ನಸೆಹಳ್ಳದ ಕಾಂಟೂರ್ ಪದ್ಧತಿಗೆ ಹೋಲಿಸಿದರೆ ಕೆ.ಐ.ಓ.ಸಿ.ಎಲ್. ಕಾರ್ಯಾಚರಣೆಯು ಗುಡ್ಡ - ಗುಡ್ಡಗಳನ್ನೇ ಗುಳುಂ ಮಾಡುವ ಪದ್ಧತಿಯಾಗಿ ತೋರುತ್ತಿತ್ತು. ಇಲ್ಲಿನ ಬೋಳು ಗುಡ್ಡಗಳನ್ನೆಲ್ಲ ಗುಳುಂ ಮಾಡಿದ ಮೇಲೆ ಕೆ.ಐ.ಓ.ಸಿ.ಎಲ್. ಗಣಿಗಾರಿಕೆಯು

ಕುದುರೆಮುಖ ರಾಷ್ಟ್ರೀಯ ಉದ್ಯಾನವನದ ವ್ಯಾಪ್ತಿಗೊಳಪಟ್ಟ ಬೋಳು ಗುಡ್ಡಗಳೆಡೆಗೂ ತನ್ನ ಕಬಂಧ ಹಸ್ತ ಚಾಚುವುದಿಲ್ಲವೆಂದು ಹೇಗೆ ಹೇಳುವುದು ? ನೆಲ್ಲಿಬೀಡು ಮತ್ತು ಗಂಗಡಿಕಲ್ಲು ಪ್ರದೇಶದ ಗಣಿಗಾರಿಕೆಯ ವಿವಾದದಲ್ಲಿ ರಾಜೀನಾಮೆ ನೀಡಿ ಹೊರಬಂದಿರುವ ಎ. ಎನ್. ಯಲ್ಲಪ್ಪ ರೆಡ್ಡಿಯವರ ಪ್ರತಿಭಟನೆಗೆ ಸರ್ಕಾರಿ ಮೂಲಗಳು ಏಕೆ ನಿರುತ್ತರವಾಗಿವೆ ? ಕಾಲಮಿತಿ ಮತ್ತು ವಿಸ್ತರಣೆಯ ವಿಧಾನಗಳಿಂದ ಯಂತ್ರಬಕಾಸುರನಿಗೆ ನಿಯಮಿತವಾಗಿ ಒಂದೊಂದೇ ಬೋಳು ಗುಡ್ಡವನ್ನು ಒಪ್ಪಂದಗಳ ಬಂಡಿಯಲ್ಲಿಟ್ಟು ನಿಷ್ಠೆಯಿಂದ ಕಳುಹಿಸುತ್ತಿದ್ದರೆ ಮುಂದೊಮ್ಮೆ, ಇದೀಗ ಬರಿದಾಗಿರುವ ಕೆ.ಜಿ.ಎಫ್. ಗಣಿಗಳ ದುಃಸ್ಥಿತಿಯೇ ಕೆ.ಐ.ಓ.ಸಿ.ಎಲ್. ಗಣಿಗಾರಿಕೆಗೂ ಬರುವುದಿಲ್ಲವೆ ? ಆಗ ಸಿಬ್ಬಂದಿಗೆ ಒದಗಿಸುವ ಪರಿಹಾರ ಮತ್ತು ಪರ್ಯಾಯ ವಿಧಾನಗಳೇನೆಂಬುದನ್ನು ಈಗಿನಿಂದ ಆಲೋಚಿಸುವುದು ಮೇಲಲ್ಲವೆ ? ಎಲ್ಲಕ್ಕಿಂತ ಮುಖ್ಯವಾದ ಸಂಗತಿಯೇನೆಂದರೆ, ನಸೆಹಳ್ಳದ ಸುತ್ತಮುತ್ತ ನಾವು ಕಂಡ ಜೀವವೈವಿಧ್ಯವನ್ನು ಕುದುರೆಮುಖ ಟೌನಿನಲ್ಲಿ ಊಹಿಸಿಕೊಳ್ಳಲು ಸಾಧ್ಯವಿರಲಿಲ್ಲ. ಈ ಟಾರು ರಸ್ತೆಗಳಲ್ಲಿ ಕಾಂಕ್ರೀಟು ಕಟ್ಟಡಗಳ ಮಧ್ಯೆ ಜಿಗಳೆಗಳ ಕಾಟ ಹೇಗೆ ತಾನೆ ಇರಬಲ್ಲುದು ?

ಒಟ್ಟಿನಲ್ಲಿ, ನಸೆಹಳ್ಳ ಮತ್ತು ಕುದುರೆಮುಖ ಟೌನಿನ ಸುತ್ತಮುತ್ತ ನಾವು ಪ್ರತ್ಯಕ್ಷ ಕಂಡ ಸಂಗತಿಗಳನ್ನು ವಿಮರ್ಶಿಸಿ ನೋಡಿದರೆ, ಗ್ರಾಮೀಣ ಪರಿಸರ ಮತ್ತು ನಗರೀಯ ಪರಿಸರಗಳೆರಡರ ಸ್ಪಷ್ಟ ವೈದೃಶ್ಯಗಳಿಗೆ ನಿದರ್ಶನವಾಗಿತ್ತು. ಕುದುರೆಮುಖ ಟೌನು ನಿರ್ಬೀಜೀಕರಣಕ್ಕೊಳಗಾದ ಪರಿಸರವೆನಿಸಿದರೆ, ನಸೆಹಳ್ಳವು ಬೀಜ ತತ್ವದ ನೆಲಮನೆಯಾಗಿ ತೋರುತ್ತಿತ್ತು. ವರ್ಷವೊಂದಕ್ಕೆ ೧೫೦ ಮಿಲಿಯನ್ ಅಮೇರಿಕನ್ ಡಾಲರುಗಳನ್ನು ವಿದೇಶಿ ವಿನಿಮಯವಾಗಿ ಗಳಿಸಿಕೊಡುವ ಕೆ.ಐ.ಓ.ಸಿ.ಎಲ್. ಗಣಿಗಾರಿಕೆ ಮತ್ತು ನಿಸರ್ಗಸಹಜ ಪರಿಸರಕ್ಕೆ ಧಕ್ಕೆಯಾಗದಂತೆ ಗುಡ್ಡಗಾಡುಗಳೊಂದಿಗೆ ಏಗುತ್ತಾ ಬದುಕುತ್ತಿರುವ ಮಲೆ ಮಕ್ಕಳ ಜೀವನ ಶೈಲಿಗಳಲ್ಲಿ ಯಾವುದನ್ನು 'ಅರ್ಥಪೂರ್ಣ'ವೆಂದು ಕರೆಯಬೇಕು ? ಇವೆರಡರಲ್ಲಿ ಎತ್ತಂಗಡಿಗೆ ಯಾರು ಯೋಗ್ಯರು ? ಈ ಪ್ರಶ್ನೆಗಳಿಗೆ ನಾವಿಂದು ಸರಳವಾದ ನೇರ ಉತ್ತರವನ್ನು ಕೊಡುವ ಪರಿಸ್ಥಿತಿಯಲ್ಲಿಲ್ಲವೆಂಬುದನ್ನು ಮನಗಾಣಿಸುತ್ತಾ, ಹಂತ ಹಂತವಾಗಿ ಅಳವಡಿಸಿಕೊಳ್ಳಬಹುದಾದ ಕ್ರಮಗಳನ್ನು ಚರ್ಚೆಗಿಡುವುದೇ ಈ ಲೇಖನದ ಉದ್ದೇಶವಾಗಿದೆ.

'ಒಂದು ನೀರಿನ ಹನಿ' ಮತ್ತು 'ಒಂದು ರತ್ನಮಣಿ' - ಇವೆರಡಕ್ಕೆ ಹೋಲಿಸಿದರೆ ರತ್ನಮಣಿಗಿರುವ ಮೌಲ್ಯ ನೀರಿನ ಹನಿಗೆ ಖಂಡಿತಾ ಇಲ್ಲ. ಆದರೆ, ನೀರೆ ಸಿಗದಂತಹ ಪರಿಸ್ಥಿತಿಯೊಂದು ನಿರ್ಮಾಣಗೊಂಡರೆ ಆ ಒಂದು ನೀರಿನ ಹನಿಗಾಗಿ ಸಾಮ್ರಾಟರು ತಮ್ಮ ಕಿರೀಟಗಳ ರತ್ನಮಣಿಯನ್ನು ವಿನಿಮಯವಾಗಿ ಕೊಟ್ಟುಬಿಡುವರೆಂಬ ಶರಚ್ಚಂದ್ರ ಚಟರ್ಜಿಯವರ ಮಾತುಗಳನ್ನಿಲ್ಲಿ ಸ್ಮರಿಸಿಕೊಳ್ಳಬಹುದು.

ನೀರಿನ ಸೆಲೆಗಳಿಗೂ ಕಾಡುಗಳ ಅಂತರ್ ಜಾಲಕ್ಕೂ ಇರುವ ಸಂಬಂಧವು ಅವಿಭಾಜ್ಯವಾದುದು. ಹುಲ್ಲುಗಾವಲುಗಳು, ಬೋಳು ಗುಡ್ಡಗಳು, ಶೋಲಾ ಕಾಡುಗಳು, ಮಳೆ ಕಾಡುಗಳು ಇವನ್ನು ಬೇರೆ ಬೇರೆಯಾದ ಘಟಕಗಳೆಂದು ತಿಳಿಯಬಾರದು. ಇವು ಒಂದನ್ನೊಂದು ಆಧರಿಸಿರುತ್ತವೆ. ಬೋಳು ಗುಡ್ಡಗಳಿಲ್ಲದ ಶೋಲಾ ಕಾಡುಗಳನ್ನು ನನಗೆ ಕಲ್ಪಿಸಿಕೊಳ್ಳಲು ಸಾಧ್ಯವಿಲ್ಲ. ಅಗನಾಗ್ ಗೆಳೆಯರು ಕುದುರೆಮುಖ ಶಿಖರಕ್ಕೆ ಚಾರಣ ಮಾಡುವ ವಿಷಯ ತಿಳಿದಾಗ ಗೆಳೆಯರಾದವರೇ ಹೇಳಿದ ಮಾತಿದು : ''ಅಲ್ಲೇನಿದೆ ? ಬರಿಯ ಬೋಳು ಗುಡ್ಡಗಳು ?'' ಯಾವುದೇ ವಸ್ತುವಿನೊಂದಿಗೆ ನಮ್ಮ ಸಂಬಂಧ ಮಾನಸಿಕ ದೂರದ ಜೊತೆ ದೈಹಿಕ ದೂರವನ್ನೂ ಬೆಳೆಸಿಕೊಂಡಾಗ ಇಂತಹ ಹೇಳಿಕೆಗಳು ಹುಟ್ಟಿಕೊಳ್ಳುತ್ತವೆ. 'ದೂರದ ಬೆಟ್ಟ ನುಣ್ಣಗೆ'- ಎಂಬ ಗಾದೆಮಾತಿನ ಅರ್ಥಕೂಡ ಇದೇ ಆಗಿದೆ.

'ಕಾಡು' ಎಂದೊಡನೆ ನಿತ್ಯ ಹರಿದ್ವರ್ಣದ ಅರಣ್ಯವಲಯಗಳನ್ನು ಮಾತ್ರ ಮನಸ್ಸಿಗೆ ತಂದುಕೊಳ್ಳುವುದು ಸರಿಯಲ್ಲ ! ಕಾಡಿನ ಅಪ್ರಮಾಣವನ್ನು ಗ್ರಹಿಸದೆ ಪ್ರಮಾಣಕ್ಕೆ ತಂದುಕೊಳ್ಳುವ ಮನುಷ್ಯ ಸಹಜ ಚಪಲತೆಯಿಂದಾಗಿ ಕಾಡನ್ನು ಕುರಿತ ಸಂಕುಚಿತ ಕಲ್ಪನೆಯೊಂದು ವಿಶೇಷವಾಗಿ ನಾಗರಿಕರಲ್ಲಿ ಹುಟ್ಟಿಕೊಳ್ಳುತ್ತದೆ. ಸುವಿಶಾಲವಾದ ಹುಲ್ಲುಗಾವಲುಗಳು, ಮೈದಾನಪ್ರದೇಶಗಳು, ಸರೋವರಗಳು, ಶಿಲಾಶ್ರೇಣಿಗಳು, ಗುಹಾಸರಣಿಗಳು, ಹಸಿರು ದಿಬ್ಬಗಳು, ಬೋಳು ಗುಡ್ಡಗಳು, ಗಿರಿಕಂದರಗಳು, ಜೌಗು ಪ್ರದೇಶಗಳು, ನದಿ - ಜಲಪಾತಗಳು, ಪರ್ವತಾರಣ್ಯಗಳು, ಮರುಭೂಮಿಗಳು, ಸಾಗರಗಳು, ತೀರ ಪ್ರದೇಶಗಳು, ಅಗ್ನಿಪರ್ವತಗಳು, ಹಿಮಗಿರಿಗಳು - ಇವೆಲ್ಲವುಗಳ ನಡುವಣ ಅಗೋಚರ ಸರಪಳಿ ಸಂಬಂಧವನ್ನು ಬಿಂಬಿಸುವ, ಸೃಷ್ಟಿ ರಚನೆಯ ಕುಶಲತೆ-ಚಂದಗಳು, ಜಗದಚ್ಚರಿಯ ಅಂದದ ಒಪ್ಪಂದಗಳು ಕಾಡಿನ ವ್ಯಾಪ್ತಿಗೊಳಪಡುತ್ತವೆ. 'ಕಾಡು' ಎಂದರೆ ತಾನೂ ಬೆಳೆದು ಇತರ ಜೀವಿ ಸಂಕುಲಗಳೆಲ್ಲವನ್ನೂ ಬೆಳೆಸುವ ನೆಲಮನೆ. ಆದ್ದರಿಂದ ಇದು ಬೋಳುಗುಡ್ಡ, ಇದು ದಟ್ಟ ಅರಣ್ಯವೆಂಬ ಕೃತಕ ವಿಭಜನೆಗೊಳಗಾಗುವುದು ಸಲ್ಲ ! ''ಬೆಟ್ಟದ ಮೇಲಣ ನೆಲ್ಲಿಯ ಕಾಯಿ, ಸಮುದ್ರದೊಳಗಣ ಉಪ್ಪು, ಎತ್ತಣಿಂದೆತ್ತ ಸಂಬಂಧವಯ್ಯ'' – ಎಂಬ ಅಲ್ಲಮನ ವಚನದಲ್ಲಿ ಕಾಡಿನ ಅಗೋಚರ ಮತ್ತು ಅಪ್ರಮಾಣ ಸ್ವರೂಪದ ಚಿಂತನೆಗಳಿವೆ.

ಸಮುದ್ರಕ್ಕೆ ಸೇರುವ ಎಲ್ಲ ನದಿಗಳ ಮೂಲವನ್ನು ಹುಡುಕುತ್ತಾ ಹೊರಟರೆ ನಾವೆಲ್ಲ ಗಿರಿವನಗಳ ನೆತ್ತಿಯನ್ನೇ ತಲುಪುತ್ತೇವೆ. ಭಾರತದ ಎಲ್ಲ ನದಿಗಳು ಗಿರಿನೆತ್ತಿಯಿಂದಲೇ ಉಗಮಿಸುತ್ತವೆಯೆಂಬುದು ನಿಚ್ಚಳವಾದ ಸಂಗತಿಯಾಗಿದೆ. ಸಹ್ಯಾದ್ರಿಯ ಪರಿಸರ ಸಸ್ಯಾದ್ರಿಯಾಗಿ ಕಂಗೊಳಿಸುತ್ತಿರುವುದು ಇಂಥ ಜಲಮೂಲಗಳಿಂದಾಗಿಯೇ ! ಗಿರಿನೆತ್ತಿಯಲ್ಲಿ ಜಿನುಗುತ್ತಾ, ಶೋಲಾ ಕಾಡುಗಳಲ್ಲಿ ಸಂಚಯಗೊಂಡು ಮೆಲ್ಲಗೆ ಹರಿಯುತ್ತಾ ಬರುವ ಜಲದ ಶಾಖೋಪಶಾಖೆಗಳೇ 'ನದಿಮೂಲ'ಗಳೆನಿಸಿಕೊಳ್ಳುತ್ತವೆ... ಕುದುರೆಮುಖದ ಗುಡ್ಡ ಸಾಲಿನಲ್ಲಿ ನೇತ್ರಾ, ಮೂಲ - ತುಂಗಾ ಮೂಲ - ಭದ್ರಾ ಮೂಲವೆನ್ನಬಹುದಾದ ನೀರಿನ ಸೆಲೆಗಳು ಕವಲು ಕವಲುಗಳಾಗಿ ಹಬ್ಬಿಕೊಂಡಿವೆ. ಇವುಗಳೊಂದಿಗೆ ಸ್ಥಳೀಯ ಗಿರಿಜನರು ಹೇಗೆ ಹೊಂದಿಕೊಂಡು ಬಾಳುತ್ತಿದ್ದಾರೆಂಬುದನ್ನು 'ನಸೆಹಳ್ಳದ ಸುತ್ತಮುತ್ತ' - ಎಂಬ ಭಾಗದಲ್ಲಿ ವಿವರಿಸಲಾಗಿದೆ.

ಬೋಳುಗುಡ್ಡಗಳೆಂದರೆ ಶೋಲಾ ಕಾಡುಗಳ ಹೊಟ್ಟೆಯೊಳಕ್ಕೆ ಮಳೆನೀರನ್ನು ಸಾಗಿಸುವ ಗೋಮಾಳೆಯೆಂದೇ ಕರೆಯಬೇಕು. ಈ ಗೋಮಾಳೆ ಮತ್ತು ಹೊಟ್ಟೆಯ ಸಂಬಂಧವನ್ನು ಬೇರ್ಪಡಿಸಲಾದೀತೆ ? ಈ ಸಂಬಂಧವನ್ನು ಅರಿಯದೆ ಕೆ.ಐ.ಓ.ಸಿ.ಎಲ್. ಕೇವಲ ಬೋಳುಗುಡ್ಡಗಳಲ್ಲಿ ಮಾತ್ರ ಗಣಿಗಾರಿಕೆ ನಡೆಸುತ್ತಿದೆಯೆಂದು ಹೇಳುವುದು ಕತ್ತು ಕೊಯ್ಯುವಷ್ಟೆ ನಯವಾಗಿದೆ : ''ಕುದುರೆಮುಖ ಪಶ್ಚಿಮ ಘಟ್ಟಗಳಿಂದ ಆವೃತ್ತವಾಗಿದ್ದರೂ ಗಣಿಗಾರಿಕೆ ನಡೆಯುತ್ತಿರುವ ಹಾಗೂ ಅದರ ಸುತ್ತಲಿನ ಬೆಟ್ಟ ಗುಡ್ಡಗಳು ಯಾವುದೇ ವನಸಂಪತ್ತನ್ನು ಹೊಂದದೆ ಬರೀ ಹುಲ್ಲುಗಾವಲಿನಿಂದ ಆವೃತ್ತವಾಗಿರುವುದು ವಿಶೇಷ. ಇದಕ್ಕೆ ಹತ್ತು ಕಿ.ಮೀ. ದೂರದಲ್ಲಿರುವ ಭಗವತಿ ಅರಣ್ಯ ಯಥೇಚ್ಛವಾದ ವನಸಂಪತ್ತಿನಿಂದ ಕೂಡಿದೆ. ಗಣಿಗಾರಿಕೆ ನಡೆಯುತ್ತಿರುವ ಪ್ರದೇಶದ ಕೆಲವು ಕಣಿವೆಗಳಲ್ಲಿ ಮಾತ್ರ ಶೋಲಾ ಕಾಡಿನಂತ ಮರಗಿಡಗಳನ್ನು ಬಿಟ್ಟರೆ ಉಳಿದ ಪ್ರದೇಶ ಬೋಳುಗುಡ್ಡಗಳಾಗಿವೆ.'' - (ಬಾಲಕೃಷ್ಣ ಪುತ್ತಿಗೆ : ಪ್ರಜಾವಾಣಿ ೨೬-೭-೨೦೦೦)

ಗುಡ್ಡ-ಗುಡ್ಡಗಳನ್ನೆ ಗುಳುಂ ಮಾಡುತ್ತಾ, ನದಿಮೂಲದ ನೀರಿನ ಸೆಲೆಗಳನ್ನು ಶಾಶ್ವತವಾಗಿ ನಿರ್ಮೂಲಗೊಳಿಸುತ್ತಾ, ತನ್ನ ಪರಿತ್ಯಾಜ್ಯಗಳಿಂದ ನದಿನೀರನ್ನು ಕಲುಷಿತಗೊಳಿಸುತ್ತಾ ಬಂದಿರುವ ಕೆ.ಐ.ಓ.ಸಿ.ಎಲ್. ಪರಿಸರ ನಿರ್ವಹಣೆಯ 'ಅತ್ಯುತ್ತಮ ವಿಧಾನಗಳಿಂದ' ಹಲವಾರು ಪರಿಸರ ಪ್ರಶಸ್ತಿಗಳನ್ನು ಗಿಟ್ಟಿಸಿದ್ದು ಇದೀಗ ಇತಿಹಾಸ ! ಕೆ.ಐ.ಓ.ಸಿ.ಎಲ್. ಗಣಿಗಾರಿಕೆಯನ್ನು ಬಲವಾಗಿ ಸಮರ್ಥಿಸಿ ಮಾತನಾಡಿರುವ ಕರ್ನಾಟಕ ಸರ್ಕಾರದ ನಿವೃತ್ತ ಪಿ.ಸಿ.ಸಿ.ಎಫ್. (=ಪ್ರಿನ್ಸಿಪಲ್ ಚೀಫ್ ಕನ್ಸರ್ವೇಟರ್ ಆಫ್ ಫಾರೆಸ್ಟ್) ಎಸ್. ಶ್ಯಾಂಸುಂದರ್ ಅವರ ಅಭಿಪ್ರಾಯವೊಂದನ್ನಿಲ್ಲಿ ಕನ್ನಡಕ್ಕೆ ಅನುವಾದಿಸಿಕೊಡಲಾಗಿದೆ :

''...ಅಕೇಶಿಯಾ ನೆಡುತೋಪುಗಳಿಗೆ ಸಂಬಂಧಪಟ್ಟಂತೆ ಒಂದು ಸಂಗತಿಯನ್ನಿಲ್ಲಿ ಸ್ಪಷ್ಟಪಡಿಸಲಿಚ್ಛಿಸುತ್ತೇನೆ. ಕೆಲವೊಂದು ವ್ಯಕ್ತಿಗಳು ಭಾವಿಸಿಕೊಂಡಿರುವ ಹಾಗೆ ಅಕೇಶಿಯಾ ನೆಡುತೋಪುಗಳು ಅಮೇರಿಕಾ ಸಂಸ್ಥಾನಗಳ ಪ್ಲಾಸ್ಟಿಕ್ಕು ಲಾನುಗಳೆಂದಾಗಲಿ ಅಥವಾ ಸಮೃದ್ಧವಾದ ಸ್ಥಳೀಯ ಜೀವವೈವಿಧ್ಯವನ್ನು ನಿರ್ಮೂಲಗೊಳಿಸುವ ಯೋಜನೆಗಳೆಂದಾಗಲಿ ಭ್ರಮಿಸಿದಲ್ಲಿ ಅದಕ್ಕೆ ಯಾವ ಉತ್ತರವೂ ಇಲ್ಲ. ಅಕೇಶಿಯಾ ನೆಡುತೋಪುಗಳಿಗಾಗಿ ಯಾವುದೇ ಅರಣ್ಯ ಭಾಗವನ್ನಿಲ್ಲಿ ಕಡಿದು ನಾಶಪಡಿಸಿಲ್ಲ. ಕೇವಲ ಹುಲ್ಲುಗಾವಲುಗಳಲ್ಲಿ ಮತ್ತು ಅದಿರು ಗಣಿಗಾರಿಕೆಯ ಪ್ರದೇಶಗಳಲ್ಲಿ ಮಾತ್ರ ಅಕೇಶಿಯಾ ಗಿಡಗಳನ್ನು ನೆಟ್ಟು ಬೆಳೆಸಲಾಗಿದೆ. ಈ ಗಿಡ ನೆಡುವ ಕಾರ್ಯಕ್ರಮ ಆರಂಭವಾದದ್ದು ೧೯೭೬ರಲ್ಲಿ. ಹೀಗೆ ಗಿಡಗಳನ್ನು ನೆಟ್ಟು ಬೆಳೆಸಬೇಕೆಂಬ ಕಡ್ಡಾಯ ನಿಯಮಗಳಿಲ್ಲದಿದ್ದಾಗ್ಯೂ ಆಗಿನ ದಕ್ಷ ಫಾರೆಸ್ಟರ್ ದಿ|| ವೈ. ಎಂ. ಎಲ್. ಶರ್ಮ ಅವರ ನಾಲ್ಕು ದಶಕಗಳಿಗೂ ಹೆಚ್ಚಿನ ಅರಣ್ಯಾನುಭವದ ಪಾಠಗಳಿಂದ ಮತ್ತು ಯಾವ ಜಾತಿಯ ಗಿಡಗಳನ್ನು ಈ ಪ್ರದೇಶದಲ್ಲಿ ನೆಟ್ಟು ಬೆಳೆಸಬಹುದೆಂಬ ಅರಣ್ಯ ಇಲಾಖೆಯ ಸಂಶೋಧನಾ ವರದಿಗಳನ್ನು ಆಧರಿಸಿ ಕಡೆಗೊಮ್ಮೆ ಅಕೇಶಿಯಾ ತಳಿಗಳ ಸೂಕ್ತ ಆಯ್ಕೆ ಮಾಡಲಾಗಿದೆ. ಇಲ್ಲಿನ ಹುಲ್ಲುಗಾವಲುಗಳಿಗೆ ಪೋಷಕಾಂಶಗಳನ್ನೆಲ್ಲ ಪೂರೈಸಿ ನಿಸ್ಸತ್ವಗೊಂಡಿರುವ ಮಣ್ಣಿನಲ್ಲಿ ಬೇರೇನೂ ಬೆಳೆಯಲಾರದು. ಎರಡರಿಂದ ಮೂರು ಅಡಿಗಳಷ್ಟು ಆಳದಲ್ಲಿ ಹಬ್ಬಿಕೊಂಡಿರುವ ದಪ್ಪ ಹಾಸಿನ 'ಇಂಪೆರಟ' ಹುಲ್ಲಿನ ಬೇರುಗಳು ತೇವ ನಿರೋಧಕವಾಗಿರುವುದರಿಂದ ಒಣ ಹವಾಮಾನದಲ್ಲಿ ಯಾವುದೇ ಸಸಿಗಳು ಬದುಕುಳಿಯುವುದಿಲ್ಲ. ಇಂಥ ಸನ್ನಿವೇಶಗಳಲ್ಲಿ ಕೆಲವೇ ಸಸ್ಯತಳಿಗಳು ಮಾತ್ರ ಬದುಕುವುದಕ್ಕಾಗಿ ಹೋರಾಡಬಲ್ಲವು. ಇವುಗಳ ಪೈಕಿ 'ಅಕೇಶಿಯಾ ಅವುರಿಕ್ಯುಲಿಫಾರ್ಮಿಸ್' ಅತ್ಯುತ್ತಮವಾಗಿದೆ. ಒಮ್ಮೆ ಅಕೇಶಿಯಾ ನೆಲೆಗೊಂಡಿತೆಂದರೆ, ಇವುಗಳ ದಟ್ಟ ನೆರಳು ಹುಲ್ಲಿನ ಹಾಸುಗೆಯನ್ನು ಕೊಂದು ಹಾಕುವುದರಿಂದ ಕ್ರಮೇಣ ಈ ಪ್ರದೇಶಗಳಲ್ಲಿ ದೇಶೀಯ

ತಳಿಗಳನ್ನು ನೆಟ್ಟು ಬೆಳೆಸಬಹುದು. ಇದರ ಜೊತೆಗೆ ಕೆ.ಐ.ಓ.ಸಿ.ಎಲ್. ಸಂಘಟಿತ ಪ್ರಯತ್ನ ನಡೆಸುತ್ತಾ ವೈಜ್ಞಾನಿಕ ವಿಧಾನಗಳು ಮತ್ತು ಜೈವಿಕ ಗೊಬ್ಬರಗಳ ಮೂಲಕ ಬಗೆಬಗೆಯ ಪ್ರಯೋಗಗಳನ್ನು ಮಾಡಿ ಸ್ಥಳೀಯ ಸಸ್ಯಗಳ ಏಳ್ಗೆಗಾಗಿ ಶ್ರಮಿಸುತ್ತಿದೆ...'' (ಡೆಕ್ಕನ್ ಹೆರಾಲ್ಡ್: ೧೦.೮.೨೦೦೦)

ಅಕೇಶಿಯಾ ನೆಡುತೋಪುಗಳ ಮೂಲಕ ಹುಲ್ಲಿನ ಹಾಸುಗೆಯನ್ನು ಕೊಂದುಹಾಕಿ ಕಾಲಕ್ರಮೇಣ ನಾನಾ ಜಾತಿಯ ಸಸಿಗಳನ್ನು ನೆಟ್ಟು ಬೆಳೆಸುವ ಈ ಅಪೂರ್ವ ಯೋಜನೆಗೆ 'ಅರಣ್ಯೀಕರಣ'ವೆಂದು ಕರೆಯಲಾಗಿದೆ. ಇಂಥದ್ದೊಂದು ಯೋಜನೆ ಮತ್ತು ಮಹಾನ್ ಸಂಶೋಧನೆಗೆ ಸಾಧಾರಣ ದರ್ಜೆಯ ಪರಿಸರ ಪ್ರಶಸ್ತಿಗಳಿಗೆ ಬದಲು, ಅಂತರರಾಷ್ಟ್ರೀಯ ಮಟ್ಟದ ನೊಬೆಲ್ ಪ್ರಶಸ್ತಿಯನ್ನು ಶಿಫಾರಸು ಮಾಡಬಾರದೇಕೆ ?! ಹುಲ್ಲನ್ನು ಪರಮ ಶತ್ರುವೆಂಬಂತೆ ಪರಿಗಣಿಸುವ ಈ ಎಗ್ಗತನಕ್ಕೆ ಏನು ಹೇಳೋಣ ! ನಿಸರ್ಗವು ಕಾಡುಗಳನ್ನು ಸೃಷ್ಟಿಸುತ್ತದೆ; ಮನುಷ್ಯನು ತೋಪುಗಳನ್ನು ಬೆಳೆಸುತ್ತಾನೆ ಎಂಬ ಸತ್ಯವನ್ನಿಲ್ಲಿ ಮನಗಾಣಬೇಕಾಗಿದೆ. ಬಹುರೂಪಾತ್ಮಕ ಕಾಡುಗಳು ಮತ್ತು ಏಕರೂಪಾತ್ಮಕ ತೋಪುಗಳು - ಇವೆರಡರಲ್ಲಿ ಇಡೀ ಜೀವಿಸಂಕುಲಕ್ಕೆ ಯಾವುದು ಶ್ರೇಯಸ್ಕರವೆಂಬುದು ಸ್ವಯಂವೇದ್ಯವಾಗಿದೆ.

ಕೊನೆಯದಾಗಿ, ಸ್ಥಳೀಯವಾದ ಪರಿಸರವಾದಿ ಸಂಘಟನೆಗಳ ಚಳುವಳಿಗಳಿಂದ ಕೆ.ಐ.ಓ.ಸಿ.ಎಲ್. ಗಣಿಗಾರಿಕೆಗೆ ಮತ್ತು ಕುದುರೆಮುಖ ರಾಷ್ಟ್ರೀಯ ಉದ್ಯಾನ ವನದ ಸಮಗ್ರ ಯೋಜನೆಯಿಂದ ನಸೆಹಳ್ಳ ಮುಂತಾದ ಗಿರಿಗ್ರಾಮಗಳಿಗೆ ಎತ್ತಂಗಡಿಯ ಭೀತಿ ಕಾಡುತ್ತಿದೆ. ಕೆ.ಐ.ಓ.ಸಿ.ಎಲ್. ಪರವಾಗಿ ಎಸ್. ಶ್ಯಾಂಸುಂದರ್ ವರದಿಯ ಜೊತೆಗೆ ಕರ್ನಾಟಕ ಸರ್ಕಾರದ ಕಾಲಮಿತಿ ವಿಸ್ತರಣೆಯ ಶ್ರೀರಕ್ಷೆ ಇರುವಂತೆಯೇ ನಸೆಹಳ್ಳ ಮುಂತಾದ ಗಿರಿಗ್ರಾಮಗಳಿಗೆ ಸ್ಥಳೀಯ ಪರಿಸರವಾದಿ ಸಂಘಟನೆಗಳ ಸಹಾನುಭೂತಿ ಮತ್ತು ಬೆಂಬಲಗಳಿವೆ. ಈ ಹಿನ್ನೆಲೆಯಲ್ಲಿ ಕುದುರೆಮುಖ ಗಿರಿಗ್ರಾಮಗಳನ್ನಾಗಲಿ ಅಥವಾ ಕುದುರೆ ಮುಖ ಅದಿರು ಕಂಪೆನಿಯನ್ನಾಗಲಿ ನಿಂತ ನಿಲುವಿನಲ್ಲಿ ಎತ್ತಂಗಡಿ ಮಾಡಲು ಸಾಧ್ಯವಿಲ್ಲವೆಂಬುದನ್ನು ಒಪ್ಪಿ ಕೊಳ್ಳುತ್ತಾ ಕಾಲಾನುಕ್ರಮವಾಗಿ ಅಳವಡಿಸಿಕೊಳ್ಳ ಬಹುದಾದ ಕ್ರಮಗಳ ಬಗ್ಗೆ ಇಲ್ಲಿ ಪ್ರಸ್ತಾಪಿಸಲಾಗಿದೆ.

**೧. ಕುದುರೆಮುಖ ಗಿರಿಗ್ರಾಮಗಳ ಬಗ್ಗೆ ಸೂಕ್ತ ಕ್ರಮಗಳು :**

ಅ) ಕುದುರೆಮುಖ ರಾಷ್ಟ್ರೀಯ ಉದ್ಯಾನವನದ ವ್ಯಾಪ್ತಿಗೆ ಸೇರಿದ ಗಿರಿಗ್ರಾಮಗಳಲ್ಲಿ 'ವನ ಸಂರಕ್ಷಣಾ ಸಮಿತಿ'ಗಳನ್ನು ಸ್ಥಳೀಯರ ಭಾಗವಹಿಸುವಿಕೆಯಿಂದಲೇ ಸ್ಥಾಪಿಸಬೇಕು. ನಾನಾ ಜಾತಿಯ ದೇಶೀಯ ಗಿಡ-ಮರ ಗಳನ್ನು ನೆಟ್ಟು ಬೆಳೆಸುತ್ತಿರುವ ಗಿರಿಜನರನ್ನು ಗುರುತಿಸಿ ಆ ಕ್ಷೇತ್ರದಲ್ಲಿ ತಮ್ಮನ್ನು ಸಮರ್ಪಿಸಿಕೊಳ್ಳಲು ಸರ್ಕಾರದ ಕಡೆಯಿಂದ, ಬೇರೆ ಬೇರೆ ಸಂಘಟನೆಗಳ ಮೂಲಕ ಪ್ರೋತ್ಸಾಹ ನೀಡಬೇಕು.

ಆ) ಈಗಾಗಲೇ ಅಸ್ತಿತ್ವದಲ್ಲಿರುವ 'ಗ್ರಾಮ ಅರಣ್ಯ ಸಮಿತಿ'ಗಳಿಗೆ ಸ್ಥಳೀಯ ಗಿರಿಜನರನ್ನು ತೊಡಗಿಸಿಕೊಂಡು ಮನೆ ಬಳಕೆಗಾಗಿ ಮರಗಿಡಗಳನ್ನು ಬೆಳೆಸುವ, ಲಾಭಾಂಶ ದಲ್ಲಿ ಸರ್ಕಾರಕ್ಕೆ ಅರೆಪಾಲು ನೀಡುವ ವಿಧಾನಗಳನ್ನು ಜಾರಿಗೆ ತರಬೇಕು. ಈ ವಿಷಯದಲ್ಲಿ ಬಾಹ್ಯಶಕ್ತಿಗಳಿ ಗಿಂತಲೂ ಸ್ಥಳೀಯ ಗಿರಿಜನರ ನಿರ್ಣಯಗಳೇ ಪ್ರಧಾನವಾಗಿರಬೇಕು.

ಇ) ಗಿರಿಜನರು ಬೆಳೆಯುವ ಹಣ್ಣು-ತರಕಾರಿಗಳಿಗೆ, ಕಾಡಿನಲ್ಲಿ ಸಂಗ್ರಹಿಸುವ ಜೇನು-ಬೆತ್ತ ಮುಂತಾದ ಅರಣ್ಯ ಉತ್ಪನ್ನಗಳಿಗೆ ಸೂಕ್ತ ಬೆಲೆ ಸಿಗುವಂತೆ ಹಾಪ್‌ಕಾಮ್ಸ್ ಮಾದರಿಯಲ್ಲಿ ಬೆಳೆಗಾರ ಮತ್ತು ಗ್ರಾಹಕರ ನಡುವಣ ನೇರ ಸಂಬಂಧಕ್ಕೆ ಒತ್ತು ನೀಡಬೇಕು.

ಈ) ಕುದುರೆಮುಖ ಗಿರಿಗ್ರಾಮಗಳ ಪೈಕಿ ಸೂಕ್ತವಾದುದನ್ನು ಆಯ್ಕೆ ಮಾಡಿ ಸಹಕಾರಿ ಸಂಘಗಳ ಮೂಲಕ ದೇಶೀಯ ಬಿತ್ತನೆ ಬೀಜ, ಜೈವಿಕ ಗೊಬ್ಬರ, ಜೈವಿಕ ಕ್ರಿಮಿನಾಶಕಗಳ ಬಗ್ಗೆ ವಿಶೇಷ ತರಪೇತಿ ನೀಡಬೇಕು. ಹೊಲಿಗೆಯಂತ್ರ ಮುಂತಾದ ಸಣ್ಣಪುಟ್ಟ ಕೈ ಕೆಲಸಗಳಲ್ಲಿ ಪ್ರಾವೀಣ್ಯತೆಯನ್ನು ಕಲಿಸಿಕೊಡಬೇಕು.

## ಸ್ವ-ಗತ

ಮೊನ್ನೆ.....
ಯಾವುದೋ ಕವಿತೆಯನ್ನು
ತನ್ಮಯಳಾಗಿ ಓದುತ್ತಿದ್ದಂತೆ,
ಅಂತರಂಗದಿ ಕಾಡಿದ ನೋವುಗಳು,
ಎಷ್ಟೋ ವರುಷದಿಂದ
ಅರಳರಳಿ ಕಾಡಿದ ಬೇವುಗಳು,
ವಿರಹದುರಿ ಬಿಸಿ ಧಗೆಗೆ
ಕಾದು ನಿಂತ ನೆಲದಂತೆ,
ಕವಿತೆ ಸಾಲು-ಸಾಲುಗಳು
ನನಗರಿವಿಲ್ಲದೆ ಕಣ್ಣೀರ ತರಿಸಿದವು !



ಇನ್ನೊಂದು ಕವಿತೆ ಓದಿದಾಗ...
ಅಮ್ಮನ ಸೀರೆಯಂಚಿನಲಿ
ತಲೆಯಿಟ್ಟು ಗುಸು - ಗುಸು
ಮಾತಾಡಿದಾಗ -
ಅರಳಿದ ಬಾಲ್ಯ ಕನಸುಗಳು
ಸೀರೆ ಹೂನಂತೆ
ಬಿರಿದರಳಿದಾಗ -
ಕವಿತೆ ಕಣ್ ಮಿಟುಕಿಸಿ
'ಹಾಯ್' ಎಂದಿತು !

**ಶೋಭಾ ಪ್ರಮೋದ್**
ಮಹಾಲಕ್ಷ್ಮಿ ಏಜೆನ್ಸೀಸ್, ಮಾಣ್‌ಗಾಂವ್-೪೦೨೧೦೪
ರಾಯಗಡ ಜಿಲ್ಲೆ, ಮಹಾರಾಷ್ಟ್ರ.

ಉ) ಅರಣ್ಯ ಇಲಾಖೆಯಲ್ಲಿ ಮಧ್ಯಮ ಮತ್ತು ಕೆಳದರ್ಜೆಯ ಹುದ್ದೆಗಳನ್ನು ಭರ್ತಿಮಾಡುವಾಗ ಮೀಸಲಾತಿ ನಿಯಮಗಳು ಮತ್ತು ವಯೋಮಾನ ಮಿತಿಗಳನ್ನು ಸಡಿಲಿಸಿ ಸ್ಥಳೀಯ ಗಿರಿಜನರನ್ನೇ ಆಯ್ಕೆ ಮಾಡಿಕೊಂಡು ಅವರನ್ನು ಇಲಾಖೆಯಲ್ಲಿ ಕ್ರಿಯಾತ್ಮಕವಾಗಿ ತೊಡಗಿಸಿಕೊಳ್ಳುವಂತಾಗಬೇಕು.

**೨. ಕುದುರೆಮುಖ ಗಣಿಗಾರಿಕೆ ಬಗ್ಗೆ ಸೂಕ್ತ ಕ್ರಮಗಳು :**

ಅ) ಕುದುರೆಮುಖ ಅದಿರು ಕಂಪೆನಿಯು ಅಕೇಶಿಯಾ ನೆಡು ತೋಪುಗಳ ಮೂಲಕ ಸಾಧಿಸುತ್ತಿರುವ 'ಅರಣ್ಯೀಕರಣ' ಯೋಜನೆಯನ್ನು ಎಷ್ಟು ಬೇಗ ಸ್ಥಗಿತಗೊಳಿಸಿದರೆ ಅಷ್ಟು ಒಳ್ಳೆಯದು. ಇದರ ಬದಲಿಗೆ ನಸೆಹಳ್ಳ ಮಾದರಿಯಲ್ಲಿ ಕಾಂಟೂರ್ ಪದ್ಧತಿಯ ಗುಡ್ಡಗಾಡಿನ ಬೇಸಾಯ ಮತ್ತು ತೋಟಗಾರಿಕೆಗೆ ಪ್ರಯತ್ನಿಸಬೇಕು.

ಆ) ಅದಿರಿಗಾಗಿ ಅಗೆದ ಭೂಪ್ರದೇಶಗಳನ್ನು ಫಲವಂತಗೊಳಿಸುವ, ಅಲ್ಲಿನ ಮಣ್ಣನ್ನು ಸತ್ವಭರಿತವನ್ನಾಗಿ ಮಾಡುವ ಕ್ರಮಗಳನ್ನು ತೆಗೆದುಕೊಳ್ಳಬೇಕು. ಅದಿರನ್ನು ಸಂಸ್ಕರಿಸಿದ ಹೂಳಿನಿಂದ ತುಂಬಿಹೋಗಿರುವ ಲಕ್ಯಾ ಅಣೆಕಟ್ಟೆಗೆ ಕಾಯಕಲ್ಪ ಚಿಕಿತ್ಸೆ ನೀಡಿ, ಅದನ್ನು ಸಹಜಸ್ಥಿತಿಗೆ ತರಲು ವೈಜ್ಞಾನಿಕ ಕ್ರಮಗಳನ್ನು ತೆಗೆದುಕೊಳ್ಳಬೇಕು.

ಇ) ಗಣಿಗಾರಿಕೆ ನಡೆಸಲು ಇದುವರೆಗೆ ಯಾವ ಪ್ರದೇಶವನ್ನು ಗುರುತುಮಾಡಿ ಸ್ವಾಧೀನ ಪಡಿಸಿ ಕೊಳ್ಳಲಾಗಿದೆಯೋ ಆ ಪ್ರದೇಶಕ್ಕೆ ಮಾತ್ರ ಬದ್ಧವಾಗಿರುವಂತೆ ಇನ್ನು ಮುಂದೆಯೂ ಗಣಿಗಾರಿಕೆ ನಡೆಸಬೇಕು. ಅದಿರಿನ ನಿಕ್ಷೇಪ ಬರಿದಾಗಿದೆಯೆಂಬ ಕಾರಣಕ್ಕೆ ಪಶ್ಚಿಮ ಘಟ್ಟಗಳ ಯಾವುದೇ ಹೊಸ ಪ್ರದೇಶವನ್ನು ಗಣಿಗಾರಿಕೆಗಾಗಿ ಮಂಜೂರು ಮಾಡಬಾರದು.

ಈ) ಕಬ್ಬಿಣದ ಅದಿರು ಸೌರಶಕ್ತಿಯಂತೆ ಅಕ್ಷಯವಾಗಿರದೆ ಬೇಗನೆ ಕ್ಷಯವಾಗಿಬಿಡುವ ಪರಿಮಿತ ಸಂಪನ್ಮೂಲವೆಂಬುದನ್ನು ಮನಗಂಡು, ಸಿಬ್ಬಂದಿ ವರ್ಗಕ್ಕೆ ಪರ್ಯಾಯ ಕ್ರಮಗಳು ಮತ್ತು ಸೂಕ್ತ ಪರಿಹಾರಗಳನ್ನು ಕಲ್ಪಿಸಿಕೊಡಲು ಈಗಿನಿಂದಲೇ ಆಲೋಚಿಸಬೇಕು.

ಉ) 'ತೊಳಲಿ' ಎಂಬ ಗ್ರಾಮ ದಿ|| ಲೋಬೋ ಕುಟುಂಬದ ನಾಲ್ಕು ಮನೆಗಳಿಂದ ಕೂಡಿದ್ದು, ಇದೀಗ ಮುಂಬೈ ಉದ್ಯಮಿಯೊಬ್ಬರ ಖಾಸಗಿ ಆಸ್ತಿಯಾಗಿದೆ. ಈ ಉದ್ಯಮಿಯು ಬಾಳಗಲ್‌ನಿಂದ ಮುಳ್ಳೋಡಿವರೆಗೆ ವಾಹನಯೋಗ್ಯ ರಸ್ತೆ ನಿರ್ಮಾಣ, ವಿದ್ಯುತ್ ಸಂಪರ್ಕದ ವ್ಯವಸ್ಥೆಗಳನ್ನು ಮಾಡಿದ್ದಾರೆ. ಒಂದು ಗಿರಿಗ್ರಾಮದ ಕಲ್ಪನೆಗೂ, ವ್ಯಕ್ತಿಯೊಬ್ಬನ ಖಾಸಗಿ ಆಸ್ತಿಯ ನೆಲೆಗೂ ತುಂಬಾ ವ್ಯತ್ಯಾಸಗಳಿವೆ. ರಸ್ತೆ ನಿರ್ಮಾಣವಾಗುವುದೆಂದರೆ ಕಾಡು ನಾಶವಾಗುವುದೆಂದೇ ಅರ್ಥ ! ಇದನ್ನರಿತು ಕುದುರೆಮುಖ ರಾಷ್ಟ್ರೀಯ ಉದ್ಯಾನವನದ ವ್ಯಾಪ್ತಿಯಲ್ಲಿ ಬರುವ ಗಿರಿಗ್ರಾಮವನ್ನು 'ಇಡಿಯಾಗಿ' ಖಾಸಗಿ ಆಸ್ತಿಯನ್ನಾಗಿ ಮಾಡಿಕೊಳ್ಳಲು ಅವಕಾಶವನ್ನೇ ನೀಡಬಾರದು.

ಮೇಲೆ ಸೂಚಿಸಿರುವ 'ಸೂಕ್ತ ಕ್ರಮಗಳು' ಲೇಖಕನ ಮನಸ್ಥಿತಿಗೆ ಹೊಳೆದ ಸಲಹೆಗಳೆಂದು ತಿಳಿದು, ನೈಜವೂ, ಪ್ರಾಯೋಗಿಕವೂ ಆದ ಅರಿವು ಮತ್ತು ಆಚರಣೆಗಳನ್ನು ಪರಸ್ಪರ ಚರ್ಚೆ, ಸಂವಾದಗಳು ಮತ್ತು ಮಾತುಕತೆಗಳ ಮೂಲಕವೇ ನಿರ್ಣಯಿಸಿಕೊಳ್ಳಬೇಕೆಂದು ಬಿನ್ನವಿಸಿಕೊಳ್ಳುತ್ತೇನೆ.

ವಿ. ಚಂದ್ರಶೇಖರ ನಂಗಲಿ
೩೮೪. ಪಿ. ಸಿ. ಬಡಾವಣೆ, ಕೋಲಾರ



# ಅನುಭಾವಿ ಅಕ್ಕ

ಓ. ಎಲ್. ನಾಗಭೂಷಣ ಸ್ವಾಮಿ

*ಅಕ್ಕನ ಅನುಭಾವಿ ವ್ಯಕ್ತಿತ್ವವನ್ನು ಆಕೆಯ ಸಮಕಾಲೀನ ವಚನಕಾರರು ಕಂಡಿರುವ ರೀತಿಯನ್ನು ಒಟ್ಟಾಗಿ ಪರಿಶೀಲಿಸುವುದು ಈ ಟಿಪ್ಪಣಿಯ ಉದ್ದೇಶ. ಅಕ್ಕನನ್ನು ಅವಳ ಕಾಲದ ಉಳಿದ ವಚನಕಾರ್ತಿಯರು ತಮ್ಮ ರಚನೆಗಳಲ್ಲಿ ಸ್ಮರಿಸುವುದಿಲ್ಲವೆಂಬುದು ಕುತೂಹಲದ ಸಂಗತಿ. ಆದರೆ ಬಸವ, ಅಲ್ಲಮ, ಚೆನ್ನಬಸವ, ಸಿದ್ಧರಾಮ ಮತ್ತು ಮಡಿವಾಳ ಮಾಚಯ್ಯ ಅಕ್ಕನ ವ್ಯಕ್ತಿತ್ವವನ್ನು ತಮ್ಮ ರಚನೆಗಳಲ್ಲಿ ರೂಪಿಸಿದ್ದಾರೆ. ಇಂಥ ವಚನಗಳನ್ನು ಒಟ್ಟಾಗಿ ನೋಡುವುದರಿಂದ ಅಕ್ಕನ ಸಮಕಾಲೀನರು ಅಕ್ಕನನ್ನು ಕಂಡ ಬಗೆ ತಿಳಿಯುತ್ತದೆ. ನಾವು ಇಂದು ಅಕ್ಕನನ್ನು ಆಕೆಯೊಬ್ಬ ಬಂಡಾಯಗಾರ್ತಿ, ಭಾವಗೀತೆಗಳ ಕವಿ ಎಂದೆಲ್ಲ ಕಂಡು ಮೆಚ್ಚಿದ್ದರೆ ಅವಳ ಸಮಕಾಲೀನರು ಆಕೆಯ ಆಧ್ಯಾತ್ಮಿಕ ಸಾಧನೆಯನ್ನು ಮಾತ್ರ ಮೆಚ್ಚಿದ್ದಂತೆ ಕಾಣುತ್ತದೆ. ಅಕ್ಕನ ವ್ಯಕ್ತಿತ್ವವನ್ನು ವಿವರಿಸುವಾಗ ಈ ಎಲ್ಲ ವಚನಕಾರರೂ ಬಹುಮಟ್ಟಿಗೆ "ಇಲ್ಲ", "ನೀಗಿಕೊಂಡ", "ಕಳೆದುಕೊಂಡ", ಮುಂತಾದ ನಿಷೇಧ ವಾಚಕಗಳನ್ನೇ ಬಳಸಿ ಮಾತನಾಡಿರುವುದು ಗಮನಾರ್ಹ. ಅಕ್ಕ ಏನಲ್ಲ, ಅವಳಲ್ಲಿ ಏನಿಲ್ಲ ಎಂಬುದನ್ನು ವಿವರಿಸುತ್ತಾ ಅವಳು ಏನು, ಎಂಥವಳು ಎಂಬುದನ್ನು ಕಾಣಿಸಲು ಪ್ರಯತ್ನಿಸುತ್ತಾರೆ.*

೧

ಬಸವಣ್ಣ ಅಕ್ಕನನ್ನು ಮೆಚ್ಚಿ ಕೊಂಡಾಡುವುದಕ್ಕೆ ಮೂರು ಕಾರಣಗಳಿವೆ. ಅಕ್ಕ ನಾಚಿಕೆಗಳು ಇಲ್ಲದವಳು, ಯಾವ ಹೊರೆಯೂ ಇಲ್ಲದವಳು ಮತ್ತು ಅವಳ ಭಾಷೆ ಪರಿಶುದ್ಧವಾದದ್ದು.

ಬಸವಣ್ಣ ಮೂರು ಬಗೆಯ ನಾಚಿಕೆಗಳನ್ನು ಕುರಿತು ಮಾತನಾಡಿದ್ದಾನೆ. ಮೊದಲನೆಯದು ಕಾಯದ ಲಜ್ಜೆ. ಇದು ಕೇವಲ ಕಲ್ಪಿತವಾದದ್ದು ಎನ್ನುತ್ತಾನೆ. ಗಂಡು ಹೆಣ್ಣಿನ ದೇಹದ ಕೆಲವು ಭಾಗಗಳು ನಾಚಿಕೆಯನ್ನು ಹುಟ್ಟಿಸುತ್ತವೆ, ಹುಟ್ಟಿಸಬೇಕು ಎಂಬ ಧೋರಣೆ; ಅಥವಾ ಹಾಗೆ ಬಚ್ಚಿಟ್ಟುಕೊಂಡ ಭಾಗಗಳು ಕಾಮಪ್ರಚೋದಕ ಎಂಬ ತಿಳಿವು. ಇವೆಲ್ಲ 'ನಿಜ' ಅಲ್ಲ, ಕಲ್ಪಿತಗಳು. ಎರಡನೆಯ ನಾಚಿಕೆ ಜೀವಕ್ಕೆ ಸಂಬಂಧಿಸಿದ್ದು. ಇದನ್ನು ಅವನು ಮೋಹವೆನ್ನುತ್ತಾನೆ. ಬದುಕಿಗೆ ಅಗತ್ಯವೆಂದು ಭಾವಿಸಿ ಮೋಹವನ್ನು ಹುಟ್ಟಿಸಿಕೊಂಡಿರುವ ವಸ್ತುಗಳೆಲ್ಲ ಜೀವದ ಲಜ್ಜೆಗೆ ಕಾರಣವಾಗುತ್ತವೆ. ಮೂರನೆಯ ನಾಚಿಕೆ ನೆನಪಿಗೆ ಸಂಬಂಧಿಸಿದ್ದು. ನೆನಪೂ ನಾಚಿಕೆಗೆ ಕಾರಣವಲ್ಲವೆ ? ನೆನಪು ಎಂಬುದು ಮರೆವಿನ ಇನ್ನೊಂದು ಮುಖ ತಾನೇ ? ಆ ನೆನಪು ಮತ್ತು ಮರೆವನ್ನು ಸುಟ್ಟುಬಿಟ್ಟರೆ ಮನದ ಲಜ್ಜೆ ಇಲ್ಲವಾಗುತ್ತದೆ. ಅಕ್ಕಮಹಾದೇವಿ ಹೀಗೆ ಕಾಯ, ಜೀವ ಮತ್ತು ಮನಸಿನ ಲಜ್ಜೆಗಳು ಇಲ್ಲದವಳು. ಅಕ್ಕನಲ್ಲಿ 'ತವಕ'ವಿಲ್ಲ, 'ಸ್ನೇಹ'ವಿಲ್ಲ, 'ವ್ಯವಹಾರ'ವೂ ಇಲ್ಲ. ತವಕವಿಲ್ಲವೆಂದರೆ ಆಸೆ, ಹಂಬಲ, ಆತುರ ಇತ್ಯಾದಿಗಳಿಲ್ಲದವಳು; ಸ್ನೇಹವೆಂದರೆ ಯಾವುದೇ ಬಗೆಯ ಜಿಡ್ಡು ಇಲ್ಲದವಳು; ಕೊಡುವ ಕೊಳ್ಳುವ, ತಾನೇನೋ ಕೊಡಬೇಕು ಮತ್ತು ಕೊಟ್ಟು ಏನನ್ನೋ ಪಡೆಯಬೇಕು ಎಂಬ ವ್ಯವಹಾರ ಧೋರಣೆಯೂ ಅಕ್ಕನಲ್ಲಿ ಇಲ್ಲ ಎಂದು ಬಸವ ಅವಳನ್ನು ಮೆಚ್ಚಿದ್ದಾನೆ. (ಅಕ್ಕನ ವಚನಗಳು : ಎಲ್. ಬಸವರಾಜು; ವಚನ ಸಂಖ್ಯೆ ೩)

ಬಸವಣ್ಣ ಅಕ್ಕನನ್ನು ಮೆಚ್ಚುವುದಕ್ಕೆ ಇನ್ನೊಂದು ಕಾರಣವಿದೆ. 'ಮಹದೇವಿ ಎಂಬ ಭಕ್ತೆಗೆ ಆವ ಹೊರೆಯೂ ಇಲ್ಲ' ಎಂಬುದು ಅವನ ಮೆಚ್ಚುಗೆಗೆ ಕಾರಣವಾಗಿದೆ. ರೂಪ ಇರುವ ಮನುಷ್ಯರನ್ನು ಒಲಿದರೆ ಆಗ ಒಲುಮೆಯನ್ನು ಉಳಿಸಿಕೊಳ್ಳುವುದಕ್ಕೆ ತನ್ನ ತನುವನ್ನು ಸುಂದರವಾಗಿಟ್ಟುಕೊಳ್ಳುವ ಹೊರೆ ಇರುತ್ತದೆ. ಆದರೆ ಅಕ್ಕ ರೂಪಿಲ್ಲದವನನ್ನು ಒಲಿದವಳು. ಆದ್ದರಿಂದ ತನ್ನ ತನುವಿನ ಹಂಗಿನ ಭಾರ ಕಳೆದುಕೊಂಡವಳು. ಮನಸ್ಸಿರುವ ಮನುಷ್ಯನನ್ನು ಒಲಿದರೆ ತನ್ನ ಮತ್ತು ಆತನ ಅಭಿಮಾನವನ್ನು ಕಾಪಾಡಿಕೊಳ್ಳಬೇಕಾದ ಹಂಗಿನ ಭಾರ ಇರುತ್ತದೆ. ಆದರೆ ಅಕ್ಕ ಮನವಿಲ್ಲದವನನ್ನು ಒಲಿದವಳು. ಆದ್ದರಿಂದಲೇ ಅಭಿಮಾನದ ಹೊರೆಯನ್ನು ಜೋಪಾನಮಾಡಿಕೊಳ್ಳಬೇಕಾದ ಭಾರ ಕಳೆದುಕೊಂಡವಳು. ಅಕ್ಕ ಯಾರನ್ನು ಒಲಿದಳೋ ಅವನು ದಿಗಂಬರನಾದ್ದರಿಂದ ತಾನೂ ಕೌಪೀನದ ಹಂಗಿನ ಭಾರ ಕಳೆದುಕೊಂಡವಳು. ಈ ಭಕ್ತೆ ಯಾವ ಹೊರೆಯೂ ಇಲ್ಲದೆ ಎಷ್ಟು ಲಾಘವದಿಂದ ಇದ್ದಾಳಲ್ಲ ಎಂಬುದು ಬಸವನ ಮೆಚ್ಚುಗೆಗೆ ಕಾರಣ. (ವಚನ ಸಂಖ್ಯೆ ೪)

ಬಸವ ಅಕ್ಕನನ್ನು ಮೆಚ್ಚುವುದಕ್ಕೆ ಮೂರನೆಯ ಕಾರಣ ಅವಳು ತನ್ನಲ್ಲಿ ತಾನು ನಿಶ್ಚಯಗೊಂಡವಳು, ಆದ್ದರಿಂದ ಅವಳ ಭಾಷೆ ಬೀಸರವೋಗಿಲ್ಲ, ಎಂದರೆ ಮೀಸಲಳಿದಿಲ್ಲ, ಅಶುದ್ಧವಾಗಿಲ್ಲ ಎನ್ನುತ್ತಾನೆ. ಬಸವ ನಡೆ ಮತ್ತು ನುಡಿಗಳ ಪರಿಶುದ್ಧತೆಗೆ ಗಮನಕೊಟ್ಟವನಲ್ಲವೆ ? ಆದ್ದರಿಂದಲೇ ಅಕ್ಕನ ಪರಿಶುದ್ಧ ಭಾಷೆ ಅವನ ಮೆಚ್ಚುಗೆಗೆ ಕಾರಣವಾಗಿದೆ. (ವಚನ ಸಂಖ್ಯೆ ೫). ನಮ್ಮಲ್ಲಿ ಅನುಭಾವ ಎಂಬ ಮಾತನ್ನು ಮೌನ ಎಂಬುದರೊಡನೆ ಸಮೀಕರಿಸುವ ತಪ್ಪು ಕಲ್ಪನೆಯೊಂದಿದೆ. ವಚನಕಾರರು ನಿಶ್ಶಬ್ದದ ಬಗ್ಗೆ ಹೇಳುತ್ತಾರೆ, ಮಾತನ್ನು ಸೂತಕ ಎನ್ನುತ್ತಾರೆ, ಇತ್ಯಾದಿಗಳೆಲ್ಲ ನಿಜ. ಆದರೆ ವಚನಗಳನ್ನು ನೋಡಿದರೆ ಅನುಭಾವ ಎಂಬ ಮಾತನ್ನು ಸಮಾನ ಮನೋಧರ್ಮಿಗಳ ನಡುವಿನ ಸಂವಾದ ಎಂಬ ಅರ್ಥದಲ್ಲೂ ಬಳಸಿರುವುದು ಕಾಣುತ್ತದೆ. ಅಕ್ಕನ ಭಾಷೆ ಪರಿಶುದ್ಧವಾದದ್ದು ಎನ್ನುವಾಗ ಅವಳ ಮಾತಿನಲ್ಲಿ ಮಾತು ಅರ್ಥಗಳ ನಡುವೆ, ಭಾವ-ಭಾಷೆಗಳ ನಡುವೆ ಸಂದಿಲ್ಲ, ಅವಳ ಮಾತು ಜ್ಯೋತಿರ್ಲಿಂಗದಷ್ಟು ಶುದ್ಧಪ್ರಭೆಯನ್ನುಳ್ಳದ್ದು ಎಂದೇ ಬಸವಣ್ಣ ಹೇಳುತ್ತಿರುವಂತಿದೆ. ಎಷ್ಟು ಬೇಕೋ ಅಷ್ಟು ಮಾತನಾಡುವ ಅಕ್ಕನ ಸ್ವಭಾವವನ್ನು ಕುರಿತು ಹೇಳುತ್ತ ಚನ್ನಬಸವಣ್ಣ "ಒಂದನಾಡಹೋಗಿ ಒಂಬತ್ತನಾಡುವವರೆಲ್ಲ" ಹಿರಿಯರೇ ಎಂದು ಕೇಳುವ ಮೂಲಕ ಅಕ್ಕನ ಭಾಷೆಯ ಶಕ್ತಿಯನ್ನು ಕೊಂಡಾಡುತ್ತಾನೆ. ಅಕ್ಕನಮ ಬೆರೆಸಿ ಬೇರಿಲ್ಲದ ಹಿರಿತನ, ಅವಳು ಸುಮ್ಮನೆ ವಯಸ್ಸಾದವಳಲ್ಲ ಎಂದು ಚನ್ನಬಸವಣ್ಣ ಅಕ್ಕನ ಹಿರಿಮೆಯನ್ನು ಗುರುತಿಸುತ್ತಾನೆ. ಅನುಭಾವಿಗಳಾಗಿದ್ದೂ ತಮ್ಮ ಒಳಗನ್ನು, ಅಕ್ಕನ ಹಾಗೆ ಮಾತಿನಲ್ಲಿ ಹೇಳಬಲ್ಲವರು ವಿರಳ. ಆದ್ದರಿಂದಲೇ ಅವಳ ಒಂದು ವಚನಕ್ಕೆ ಇರುವ ಶಕ್ತಿ ಆದ್ಯರ ಅರುವತ್ತು, ಬಸವಣ್ಣನ ಇಪ್ಪತ್ತು, ಅಲ್ಲಮಪ್ರಭುವಿನ ಹತ್ತು ಮತ್ತು ಅಜಗಣ್ಣನ ಐದು ವಚನಗಳಿಗೆ ನಿರ್ವಚನವಾಗಬಲ್ಲದು ಎಂದು ಸಿದ್ಧರಾಮ ಹೇಳುತ್ತಾನೆ.

ಕಲಿದೇವ ಎಂಬ ಅಂಕಿತದ ಮಡಿವಾಳ ಮಾಚಯ್ಯ ಅಕ್ಕನ ವ್ಯಕ್ತಿತ್ವದ ವಿರೋಧಾಭಾಸಗಳನ್ನು ಗುರುತಿಸಿ, ಮೆಚ್ಚಿದ್ದಾನೆ. ಅಕ್ಕ ಕಾಮಿಯಾಗಿದ್ದು ನಿಃಕಾಮಿ,

ಅವಳು ಸೀಮೆಯಲ್ಲಿದ್ದು ನಿಸ್ಸೀಮೆ, ಭವಿಯ ಸಂಗ ತೊರೆದು ಭವಬಾಧೆ ಹರಿದವಳು (ವಚನ ಸಂಖ್ಯೆ ೧) ಮತ್ತು ಅಕ್ಕನಲ್ಲಿ ಹೆಂಗೂಸೆಂಬ ಭಾವ ಬಯಲ ಬೆರೆಸಿತ್ತು (ವಚನ ಸಂಖ್ಯೆ ೧೧). ಅಕ್ಕನ ವಚನಗಳಲ್ಲಿರುವ ಲೈಂಗಿಕ ಪ್ರತಿಮೆಗಳ ಬಗ್ಗೆ ಕನ್ನಡ ನವ್ಯ ವಿಮರ್ಶೆ ಪ್ರಧಾನವಾಗಿ ಚರ್ಚಿಸಿತು. ಆದರೆ ಅಕ್ಕ ನಿಃಕಾಮಿ ಅಷ್ಟೇ ಅಲ್ಲ, ಆಕೆ ಹೆಂಗುಸೆಂಬ ಭಾವವನ್ನೇ ಇಲ್ಲವಾಗಿಸಿಕೊಂಡಿದ್ದವಳು ಎಂಬುದು ಅವಳ ಸಮಕಾಲೀನರ ಧೋರಣೆಯಾಗಿರುವಂತಿದೆ. ಭಾಷೆಯ ಮಟ್ಟದಲ್ಲಿ ತನ್ನ ಭಾವ ತೀವ್ರತೆಯನ್ನು ತಿಳಿಸಲು ಲೈಂಗಿಕ ಪ್ರತಿಮೆಗಳನ್ನು ಬಳಸಿದರೂ ಅವಳ ಮನಸ್ಸಿನಲ್ಲಿ ಅಂಥ ಆಸೆ ಇರಲಿಲ್ಲ; ಕಾಮದ ಅತಿ ಹಂಬಲ ಅಥವಾ ಅದರ ನಿರಾಕರಣೆ, ಎರಡೂ ವ್ಯಕ್ತಿತ್ವದ ದೃಷ್ಟಿಯಿಂದ ಆತಂಕಗಳನ್ನು ಹುಟ್ಟಿಸಬಲ್ಲವು. ಕಾಮವನ್ನು ಸಹಜವೆಂದು ತಿಳಿಯುವುದು ಸಮತೋಲನದ ನಿಲುವು. ಚೆನ್ನಮಲ್ಲಿಕಾರ್ಜುನನನ್ನು 'ಸಹಜಮಿಥುನರೂಪ' ಎಂದು ಕರೆಯುವಾಗ ಅಕ್ಕ ಕಾಮವನ್ನು ಸಹಜವೆಂದು ನೋಡಿದ್ದು ಸ್ಪಷ್ಟವಾಗಿದೆ. ಯಾವ ವಿಕಾರಗಳೂ ಇಲ್ಲದಿರುವುದೇ ಸಹಜತೆ. ಅಕ್ಕ ಹಾಗೆ ಸಹಜವಾಗಿದ್ದಳು. ಹೆಣ್ಣುತನ ಮತ್ತು ಗಂಡುತನಗಳೆಂಬ ಕಲ್ಪನೆಗಳು ಸಮಾಜ ಸಂಸ್ಕೃತಿಯ ಕಾರಣದಿಂದ ವ್ಯಕ್ತಿಯ ಮನಸ್ಸಿನಲ್ಲಿ ಬೇರೂರುತ್ತವೆ. ನಿಜವಾಗಿ ಹೆಂಗುಸುತನವೆಂಬುದು ಒಂದು ಸಾಮಾಜಿಕ ಚಹರೆ. ಅದರೊಡನೆ ಹೆಂಗುಸು ಹೀಗಿರಬೇಕು, ಬಾರದು ಎಂಬೆಲ್ಲ ಕಲ್ಪಿತಗಳ ಸರಣಿಯೇ ಹುಟ್ಟಿಕೊಳ್ಳುತ್ತದೆ. ಅಕ್ಕ ಹೆಂಗೂಸೆಂಬ ಭಾವವನ್ನು ಬಯಲಾಗಿಸಿಕೊಂಡಿದ್ದವಳು ಎನ್ನುವುದು ಬಹುದೊಡ್ಡ ಮಾತು. ನಮ್ಮನಮ್ಮೊಳಗಿರುವ ಗಂಡು ಅಥವಾ ಹೆಣ್ಣುತನ 'ನಿಜ'ವಲ್ಲ, ಅದು ಕೇವಲ 'ಭಾವ', ಆರೋಪಿತ ಎಂಬ ಅರಿವು ಪಡೆಯುವುದು ಬಹುದೊಡ್ಡ ಸಾಧನೆ. ಅದು ಅಕ್ಕನಿಗೆ ಸಾಧ್ಯವಾಗಿತ್ತು ಎಂಬುದು ಮಾಚಯ್ಯನ ದೃಷ್ಟಿಯಾಗಿದೆ.

ವಚನಕಾರರು ನೆನಪು ಮತ್ತು ಮರೆವುಗಳ ಸಂಬಂಧವನ್ನು ಕುರಿತು ಗಾಢವಾಗಿ ಆಲೋಚಿಸಿದ್ದಾರೆ. ನಾವು ಯಾವುದನ್ನು ನಮ್ಮ ವ್ಯಕ್ತಿತ್ವ ಎಂದುಕೊಳ್ಳುತ್ತೇವೆಯೋ ಅದು ಬಹುಮಟ್ಟಿಗೆ ನೆನಪುಗಳನ್ನು ಆಧರಿಸಿಯೇ ರೂಪುಗೊಂಡಿರುತ್ತದೆ. ವರ್ತಮಾನಕ್ಕೆ ನಾವು ತೋರುವ ಪ್ರತಿಕ್ರಿಯೆಗಳೆಲ್ಲವೂ ನೆನಪಿನಿಂದಲೇ ಮೂಡುತ್ತವೆ. ಮರೆವು ನೆನಪಿನದೇ ಇನ್ನೊಂದು ಮುಖ. ಲೌಕಿಕ ವ್ಯವಹಾರ ಸುಸೂತ್ರವಾಗಿ ನಡೆಯಲು ನೆನಪು ಅಗತ್ಯವೇ ಆದರೂ ಆಧ್ಯಾತ್ಮಿಕ ಪ್ರಗತಿಗೆ ಹಳೆಯ ನೆನಪುಗಳು ಪ್ರತಿಬಂಧಕವೇ ಹೌದು. ಅಂತೆಯೇ ನಮ್ಮ ನಿಜವನ್ನು ನಾವು ಮರೆತು, ನಮ್ಮ ಬಗ್ಗೆ ನಾವು ಕಟ್ಟಿಕೊಂಡಿರುವ ಕಲ್ಪನೆಗಳಿಗೆ ಬದ್ಧರಾಗಿರುವುದೂ ಆಧ್ಯಾತ್ಮಿಕ ವಿಕಾಸಕ್ಕೆ ತೊಂದರೆಯನ್ನು ಒಡ್ಡುತ್ತದೆ. ಅಕ್ಕ ಮರೆವಿಲ್ಲದವಳು. ಅಂದರೆ ತನ್ನ ನಿಜವೇನು ಎಂಬುದರ ಅರಿವನ್ನು ಮರೆಯದೆ ಇದ್ದವಳು. ಆದ್ದರಿಂದಲೇ ನಾವು ಜೋಪಾನವಾಗಿ ಕಾಯ್ದಿಟ್ಟುಕೊಳ್ಳುವ ಲೌಕಿಕ ನೆನಪುಗಳ ಬಂಧನಕ್ಕೆ ಸಿಲುಕದವಳು. ಲೌಕಿಕ ಜೀವನ ನಮ್ಮಲ್ಲಿ ರೂಪಿಸುವ ಗತಕಾಲದ ನೆನಪುಗಳು ಹಿರಿದು-ಕಿರಿದು, ಮಹತ್ವದ್ದು – ಕ್ಷುಲ್ಲಕವಾದದ್ದು ಎಂಬಂಥ ಕಲ್ಪಿತ ಬಂಧನಗಳನ್ನು ರೂಪಿಸುತ್ತವೆ. ಅಕ್ಕ ನೆನಪುಗಳಿಂದ ಪಾರಾಗಿದ್ದವಳು, ಮರೆವು ಇಲ್ಲದೆ ತನ್ನ ಅರಿವನ್ನು ಉಳ್ಳವಳು. ಆದ್ದರಿಂದಲೇ ಅವಳು ಹಿರಿದು-ಕಿರಿದು ಇತ್ಯಾದಿ ಅಳತೆಗಳನ್ನು ಮೀರಿದ್ದವಳು. ಸಾವು ಎಂಬುದೂ ಕೂಡ ನೆನಪಿನಿಂದಲೇ ಪ್ರೇರಿತವಾಗುವ ಭಯ. ಹುಟ್ಟಿದ್ದೇವೆ ಎಂಬ ನೆನಪು ಇರುವವರೆಗೂ ಸತ್ತೇವು ಎಂಬ ಭಯ ಇರುತ್ತದೆ. ಸತ್ತರೆ ನಮ್ಮೊಡನೆ ನಮ್ಮ ಎಲ್ಲ ನೆನಪುಗಳೂ, ನಾವು ಪ್ರೀತಿಯನ್ನು ಬೆಳೆಸಿಕೊಂಡಿರುವ ಸಂಗತಿಗಳೆಲ್ಲವೂ, ಕೊನೆಗೆ ನಾವು ಯಾವುದನ್ನು ನಮ್ಮ ವ್ಯಕ್ತಿತ್ವ ಎಂದುಕೊಂಡಿದ್ದೇವೆಯೋ ಅದೂ ಮರೆವಿಗೆ ಸಂದುಬಿಡುತ್ತದೆ ಎಂಬ ಭಯ ನಮ್ಮನ್ನು ಕವಿಯುತ್ತದೆ. ಹುಟ್ಟು ಮತ್ತು ಸಾವುಗಳು ವಿರುದ್ಧ ಧ್ರುವಗಳಾಗಿ ಕಂಡು ಒಂದು ಬಯಸಬೇಕಾದದ್ದು ಇನ್ನೊಂದು ತಿರಸ್ಕರಿಸಬೇಕಾದದ್ದು ಎಂಬ ಧೋರಣೆ ನಮ್ಮಲ್ಲಿ ಬೆಳೆಯುತ್ತದೆ. ಅಕ್ಕ ಹುಟ್ಟು ಸಾವುಗಳ ಕಲ್ಪಿತ ಭಯದಿಂದ ಪಾರಾಗಿದ್ದವಳು. ದೇಹ ಪಡೆದು ಹುಟ್ಟುವ ಹುಟ್ಟು ಮಾತ್ರವೇ ಹುಟ್ಟಲ್ಲ, ನಾನು ಎಂದೆಂದಿಗೂ ಇರುವವಳೇ ಎಂಬ ನಿಲುವಿನವಳು. ಆದ್ದರಿಂದ ಅವಳು ಅಜಾತಳು, ಅಜಾತಳಾದ್ದರಿಂದಲೇ ಅವಳಿಗೆ ಸಾವಿನ ಭಯವಿಲ್ಲ ಎಂದು ಸಿದ್ಧರಾಮ ಹೊಗಳುತ್ತಾನೆ. ಅಲ್ಲಮ ಅಕ್ಕನ ಕಾಲಾತೀತ ಗುಣದ ಬಗ್ಗೆ ನುಡಿದಿದ್ದಾನೆ. ಆದಿ ಮತ್ತು ಅಂತ್ಯ, ಅನಾದಿ ಮತ್ತು ಅನಂತ ಇವೆಲ್ಲ ನಮ್ಮ ಕಾಲದ ಕಲ್ಪನೆಯನ್ನು ಸೂಚಿಸುವ ಪದಗಳು. ಇಂತಹ ಕುರುಹುಗಳಿಲ್ಲದೆ ನಮ್ಮ ದಿನ ನಿತ್ಯದ ವ್ಯವಹಾರ ಸಾಗದು, ನಿಜ. ಆದಿ ಶಕ್ತಿ ಎಂದು ಯಾವುದನ್ನು ಗುರುತಿಸುತ್ತಾರೋ ಅದು ಕೇವಲ ನಮ್ಮ ಭಾಷೆಯ ಒಂದು ಪದ, ಒಂದು ಕುರುಹು. ಹಾಗೆಯೇ ಅನಾದಿ ಎಂಬುದು ಕೂಡ ಒಂದು ಹೆಸರು. ನಾವು ಏನೇನನ್ನು ಹೆಸರಿಟ್ಟು ಗುರುತಿಸುತ್ತೇವೆಯೋ ಅವೆಲ್ಲ ಪರಿಮಿತಿಗೆ ಒಳಪಟ್ಟು ಬಿಡುತ್ತವೆ. ಅಕ್ಕ ಹಾಗೆ ಕುರುಹುಗಳಿಗೆ, ಹೆಸರಿನ ಮಿತಿಗಳಿಗೆ ಒಳಗಾದವಳಲ್ಲ, ಅವಳೊಂದು ಬೆಳಕು. ಅಂತರಂಗ ಮತ್ತು ಬಹಿರಂಗ ಎಂಬ ವ್ಯತ್ಯಾಸಗಳಿಲ್ಲದೆ ಅಂತರಂಗದ ಬೆಳಕು ಬಹಿರಂಗದಲ್ಲೂ ವ್ಯಾಪಿಸಿಕೊಂಡಂತೆ ಇರುವವಳು ಅಕ್ಕ ಎಂದು ಅಲ್ಲಮ ಹೇಳುತ್ತಾನೆ.

ಅಕ್ಕ ಇಂಥ ಬೆಳಕು ಹೇಗಾದಳು ಎಂಬುದನ್ನು ಅಲ್ಲಮ ಹೇಳಿದ್ದಾನೆ. ನಾನೆಂದರೆ ದೇಹ ಮಾತ್ರ ಎಂದುಕೊಂಡಿರುವವರೆಗೂ ಸತ್ಯ ಎಂಬುದು ಅರಿವಿಗೆ ಬರಲಾರದು. ವಚನಕಾರರು ಈ ಸತ್ಯವನ್ನು ಲಿಂಗ ಎಂದೂ ಕರೆದಿದ್ದಾರೆ. ಅಕ್ಕ ತಾನೆಂದರೆ ಕೇವಲ ದೇಹ, ಅಥವಾ ಹೆಣ್ಣು ದೇಹ ಎಂಬ ಕಲ್ಪನೆಗೆ ಸಿಲುಕಿದವಳಲ್ಲ. ಅವಳಲ್ಲಿ ತನುಗುಣವಿಲ್ಲದ್ದರಿಂದ ಆಕೆ ಲಿಂಗಸಂಗಿ. ನಾವು ಯಾವುದನ್ನು ನಮ್ಮ ಮನಸ್ಸು ಎನ್ನುತ್ತೇವೆಯೋ ಅದು ನೆನಪುಗಳ ಪ್ರಭಾವದಿಂದ ರೂಪುಗೊಂಡದ್ದು. ಇಷ್ಟ ಮತ್ತು ಅನಿಷ್ಟಗಳೇ, ನನಗೆ ಬೇಕು ನನಗೆ ಬೇಡ ಎಂಬಂಥ ನಿಲುವುಗಳೇ, ಪ್ರಮುಖವಾಗಿರುವಂಥದ್ದು. ಮನೋಗುಣ ಮುಖ್ಯವಾಗಿಬಿಟ್ಟರೆ ಆಗ ಇರುವ ಸತ್ಯ ನಮಗೆ ಕಾಣದೆ ಮನಸ್ಸು ಏನನ್ನು ಬಯಸುತ್ತದೆಯೋ ಅದು ಮಾತ್ರ ಕಾಣತೊಡಗುತ್ತದೆ. ಮನಸ್ಸೇ ಮುಖ್ಯ ಎಂದುಕೊಂಡವರಿಗೆ ಸತ್ಯವಾಗಲಿ, ಸತ್ಯದ ಅರಿವಾಗಲಿ ದೊರೆಯದು. ಮನೋಗುಣವಿಲ್ಲದವಳು, ಆದ್ದರಿಂದ ಸದಾ ಅರಿವುಸಂಗಿ ಎಂದು ಅಲ್ಲಮ ಹೇಳುತ್ತಾನೆ. ನಮಗೆ ಭಾವಗಳೇ ಮುಖ್ಯವಾದರೆ ಆಗ ಸರಿ ಮತ್ತು ತಪ್ಪು, ಒಳಿತು ಮತ್ತು ಕೆಡುಕು ಎಂಬಂಥ ತೀರ್ಮಾನಗಳ ಬಲೆಯಲ್ಲಿ ಸಿಲುಕಿ ಭಾವದ ಕತ್ತಲಲ್ಲಿ ತಡಕಾಡಬೇಕಾಗುತ್ತದೆ. ಅಕ್ಕನಲ್ಲಿ ಈ ಮೂರು ಗುಣಗಳೂ, ಅಂದರೆ ದೇಹಗುಣ, ಮನೋಗುಣ ಮತ್ತು ಭಾವಗುಣ ಇಲ್ಲ, ಆದ್ದರಿಂದ ಅವಳು ಸದಾ ಲಿಂಗಸಂಗಿ, ಅರಿವು ಸಂಗಿ ಮತ್ತು ಮಹಾಪ್ರಭೆ ಎಂದು ಅಲ್ಲಮ ಗುರುತಿಸುತ್ತಾನೆ. (ವಚನ ಸಂಖ್ಯೆ ೮).

ನೋಟವೆ ತಾನಾದವಳು, ತನ್ನ ತಾನರಿದ ನಿಜಶಕ್ತಿ, ಭಿನ್ನವಿಲ್ಲದರಿವು, ಮನ್ನಣೆಯ ಮಮಕಾರವ ಮೀರಿದ ಭಾವ ಎಂದವನು ಅಲ್ಲಮ. ಅಕ್ಕನ ವ್ಯಕ್ತಿತ್ವ ಅಖಂಡವಾದದ್ದು. ಅಂದರೆ ಅವಳಲ್ಲಿ ತಾನು ಬೇರೆ, ಈ ಲೋಕ ಬೇರೆ ಎಂಬ ನಮ್ಮೆಲ್ಲರಲ್ಲೂ ಸಾಮಾನ್ಯವಾಗಿರುವ ದೃಷ್ಟಿ ಇರಲಿಲ್ಲ. ಅವಳ ಬುದ್ಧಿ, ಮನಸ್ಸು, ದೇಹಗಳು ಬೇರೆ ಬೇರೆ ದಾರಿಗಳಲ್ಲಿ ಸಾಗುತ್ತ ಅಂತರಂಗದ ತೊಳಲಾಟಕ್ಕೆ ಕಾರಣವಾಗಿರಲಿಲ್ಲ. ತಾನು ಬೇರೆ, ಲೋಕ ಬೇರೆ ಎಂಬ ದ್ವಂದ್ವ ಅವಳಲ್ಲಿ ಇಲ್ಲವಾದ್ದರಿಂದಲೇ ಅವಳದು ಭಿನ್ನವಿಲ್ಲದ ಅರಿವು. ''ನಾನು'' ಎಂಬುದೂ ಇಲ್ಲದೆ, ನಾನು ನೋಡುತ್ತಿರುವ ವಸ್ತು ತನ್ನಿಂದ ಬೇರೆ ಎಂಬ ಖಂಡ ದೃಷ್ಟಿಯೂ ಇಲ್ಲದೆ ನೋಟವೇ ತಾನು ಎಂಬ ಸ್ಥಿತಿಯನ್ನು ಪಡೆದುಕೊಂಡವಳು. ಆದ್ದರಿಂದಲೇ ಅವಳದು ತಾನರಿದ ನಿಜ ಶಕ್ತಿ. ಅವಳಿಗೆ ಇಂಥ ಅಖಂಡತೆ ಇದ್ದದ್ದರಿಂದಲೇ ಲೋಕದಿಂದ, ಇತರರಿಂದ, ಮನ್ನಣೆಯನ್ನು ಪಡೆಯಬೇಕೆಂಬ ಮಮಕಾರವೂ ಇರಲಿಲ್ಲ. ಅಂತೆಯೇ ಅವಳು ಮಹದೇವಿ ಎಂದು ಅಲ್ಲಮ ನುಡಿಯುತ್ತಾನೆ. (ವಚನ ಸಂಖ್ಯೆ ೭)

ತನ್ನ ನಿಲುಕಡೆಯ ನಿಜವ ತಾನರಿಯದವಳು. ನುಡಿಗೆ ಎಡಗೊಡದ ಘನವ ಹಿಡಿದವಳು. ಎಡೆ ಇಲ್ಲದ ಪರಿಪೂರ್ಣದೊಳಗೆ ನಡೆ ನುಡಿ ಕೆಟ್ಟವಳು. ಅಕ್ಕ ಅಖಂಡವಾದವಳು, ಆದ್ದರಿಂದಲೇ ಅವಳಿಗೆ ತಾನು ಯಾವ ನಿಲುಕಡೆಯನ್ನು ಪಡೆದಿದ್ದೇನೆ ಎಂಬ ಅರಿವು ಇಲ್ಲ. ಹಾಗೆ ಗೊತ್ತಿದ್ದಿದ್ದರೆ ಅವಳ ವ್ಯಕ್ತಿತ್ವ ಭಿನ್ನವಾಗಿಬಿಡುತ್ತಿತ್ತು. ಗೊತ್ತಿದೆ ಎಂದರೆ ತನಗಿಂತ ಬೇರೆ ಯಾವುದೋ ಇದೆ, ಅದು ಗೊತ್ತಿದೆ ಎಂದರ್ಥವಲ್ಲವೆ ? ಅಕ್ಕ ಹಾಗೆ ತನಗೆ ಗೊತ್ತಿದೆ ಗೊತ್ತಿಲ್ಲ ಎಂಬ ದ್ವಂದ್ವಗಳಿಲ್ಲದವಳು. ಹೀಗಾಗಿ ಅವಳು ಘನ, ಘನವನ್ನು ಹಿಡಿದವಳು ಅಥವಾ ಘನವೇ ಅವಳನ್ನು ಹಿಡಿದು ಘನದ ಹಿಡಿತಕ್ಕೆ ಒಳಗಾದವಳು. ಅವಳು ನುಡಿಗೆ ಎಡೆ ಇಲ್ಲದ ಪರಿಪೂರ್ಣದೊಳಗೆ ಇರುವವಳು. ಅಂಥ ಸ್ಥಿತಿಯಲ್ಲಿ ಮಾತು ಬೇಕಾಗಿಲ್ಲ. ಮಾತು ಎಂಬುದು ನಮ್ಮನ್ನು ನಿಜದಿಂದ ಬೇರೆ ಮಾಡುವ ಮಾಧ್ಯಮ. ಅಕ್ಕ ನುಡಿಗೆಟ್ಟವಳು, ಅಂದರೆ ನುಡಿಯ ಹಂಗು ಇಲ್ಲದವಳು. ನುಡಿಯ ಅಗತ್ಯವೇ ಇಲ್ಲದೆ ನುಡಿ ಕೆಟ್ಟು, ಇಲ್ಲವಾದ ಸ್ಥಿತಿ ಅವಳದು. ನಡೆಗೆಟ್ಟವಳೂ ಹೌದು. ಈ ಮಾತುಗಳನ್ನು ಕೊಂಚ ವಿವರಿಸುವುದು ಅಗತ್ಯವಿದೆ. ನಾವು ಇಂದು ಕೇಡು, ಕೆಟ್ಟ ಎಂಬ ಮಾತುಗಳನ್ನು ಒಳ್ಳೆಯ ಅರ್ಥದಲ್ಲಿ ಬಳಸುವುದೇ ಇಲ್ಲ. ಆದರೆ ವಚನಕಾರರಲ್ಲಿ ಅನೇಕ ಬಾರಿ ಕೇಡು, ಕೆಟ್ಟ ಎಂಬ ಮಾತುಗಳು ಧನಾತ್ಮಕ ಅರ್ಥದಲ್ಲಿ ಬಳಕೆಯಾಗಿರುವುದು ಕಾಣುತ್ತದೆ. ''ಸತ್ಯದ ಬಲದಿಂದ ಅಸತ್ಯದ ಕೇಡು,'' ''ಜ್ಯೋತಿಯ ಬಲದಿಂದ ತಮಂಧದ ಕೇಡು'' ಎಂಬಂಥ ಮಾತುಗಳಲ್ಲಿ ಕತ್ತಲೆಯು ಕೆಟ್ಟರೆ ಅದು ಬೆಳಕಾಗುತ್ತದೆ, ಅಸತ್ಯ ಕೆಟ್ಟರೆ ಅದು ಸತ್ಯವಾಗುತ್ತದೆ ಎಂಬ ಅರ್ಥ ಹೊಳೆಯುತ್ತದೆಯಲ್ಲವೆ ? ಹಾಗೆಯೇ ನುಡಿಯು ಕೆಟ್ಟರೆ ಅದು ಮೌನವಾಗುತ್ತದೆ. ನಡೆ ಕೆಟ್ಟರೆ ನಿಶ್ಚಲತೆಯಾಗುತ್ತದೆ. ಅಕ್ಕನ ನುಡಿಯು ಮೌನವಾದ ನುಡಿ, ಗಮನವಿಲ್ಲದ ನಿರ್ಗಮನ ಎಂದು ಅಲ್ಲಮ ಹೇಳುತ್ತಿರುವಂತಿದೆ. (ವಚನ ಸಂಖ್ಯೆ ೧೨). ಇನ್ನೊಂದು ರೀತಿಯಿಂದ ನೋಡುವುದಾದರೆ ಲೌಕಿಕ ನೀತಿಯ ದೃಷ್ಟಿಯ ಸರಿ ತಪ್ಪುಗಳ ನಡೆ ಕೂಡ ಅವಳದಲ್ಲ. ಯಾವುದನ್ನು *ಶೂನ್ಯ ಸಂಪಾದನೆ* ಎಂಬ ಕೃತಿ ''ಶೂನ್ಯ''ವೆಂದು ಕರೆಯುತ್ತದೆಯೋ ಅದನ್ನು

ಸಂಪಾದಿಸಿಕೊಂಡಿದ್ದವಳು. ಅಲ್ಲಮ ಅದನ್ನು ಗುರುತಿಸಬಲ್ಲ, ಆದರೆ ಅವನು ಇನ್ನೂ ತನ್ನ ಶೂನ್ಯವನ್ನು ಸಂಪಾದಿಸಿಕೊಳ್ಳಬೇಕಿದೆ. ''ಶೂನ್ಯ ಸಂಪಾದನೆ'' ಕೃತಿಯಲ್ಲಿ ಅಕ್ಕನ ಪ್ರಸಂಗದ ನಂತರ ಅಲ್ಲಮನೂ ತನ್ನ ಅಂತಿಮ ಪಯಣಕ್ಕೆ ತೊಡಗಿದ ಪ್ರಸಂಗ ಬರುತ್ತದೆ. ಮತ್ತೆ ಕಲ್ಯಾಣಕ್ಕೆ ಬರುವ ಸಂಗತಿಯು ಬರುತ್ತದೆ. ಅಲ್ಲಮ ಹಾಗೆ ಕಲ್ಯಾಣಕ್ಕೆ ಬಂದಾಗ ಅವನು ಹೇಗಿದ್ದ ಎಂಬ ವರ್ಣನೆ ಇದೆಯಲ್ಲ ಅದು ಅಲ್ಲಮನ ಶೂನ್ಯ ಸಂಪಾದನೆ ಪೂರ್ಣವಾದದ್ದನ್ನು ಸೂಚಿಸುತ್ತದೆ. ಲೋಕದ ಕಣ್ಣಿಗೆ ಉನ್ಮತ್ತನಂತೆ, ಬಾಲಕನಂತೆ, ಹುಚ್ಚನಂತೆ ಕಾಣುವ, ಆದರೆ ಎರಡಳಿದ ಸ್ಥಿತಿಯಲ್ಲಿದ್ದ ಅಲ್ಲಮನ ವರ್ಣನೆ ಬಹಳ ಉಜ್ವಲವಾದದ್ದು. ಅಕ್ಕ ಕಲ್ಯಾಣಕ್ಕೆ ಬರುವ ವೇಳೆಗಾಗಲೇ ಅಂಥ ಎತ್ತರವನ್ನು ತಲುಪಿದ್ದವಳು. ಇನ್ನುಳಿದದ್ದು ಅವಳು ತನುವೆಂಬ ಕದಳಿಯಲ್ಲಿ, ಮನವೆಂಬ ಕದಳಿಯಲ್ಲಿ ಕರ್ಪೂರದಂತೆ ಕರಗುವುದು ಮಾತ್ರ. ಅವಳ ಆಧ್ಯಾತ್ಮಿಕ ಹಿರಿಮೆಯನ್ನು ಅವಳ ಸಮಕಾಲೀನ ವಚನಕಾರರು ಹೀಗೆ ಕೊಂಡಾಡಿದ್ದಾರೆ.

೨

ಅಕ್ಕನ ಸಮಕಾಲೀನ ವಚನಕಾರ್ತಿಯರು ಯಾರೂ ಅಕ್ಕನನ್ನು ಸ್ಮರಿಸಿರುವುದು, ಕೊಂಡಾಡಿರುವುದು ಗಮನಕ್ಕೆ ಬಂದಿಲ್ಲ. ಅಕ್ಕನನ್ನು ಬಿಟ್ಟರೆ ಅತಿ ಹೆಚ್ಚಿನ ಸಂಖ್ಯೆಯ ವಚನಗಳು ದೊರೆತಿರುವುದು ಅಕ್ಕಮನದು. ಆಕೆಯಂತೂ ''ಸೀಮೆವಂತ'' ಎಂಬ ಮಾತನ್ನು ಮತ್ತೆ ಮತ್ತೆ ಬಳಸುತ್ತ ತಾನು, ತನ್ನ ಕುಟುಂಬ, ವ್ರತ, ಮನೆಗೆಲಸ ಇತ್ಯಾದಿಗಳ ಸೀಮೆಗಳೊಳಗೇ ಇದ್ದು ಸಾಧನೆ ಮಾಡಬಯಸುವವಳು ಎಂದಿದ್ದಾಳೆ. ಅವಳ ಧೋರಣೆ ಅಕ್ಕನ ನಿಲುವಿಗೆ ವಿರುದ್ಧವಾದದ್ದಾಗಿ ಕಾಣುತ್ತದೆ. ಕೇವಲ ಅಕ್ಕ ಮಾತ್ರವಲ್ಲ, ಮುಕ್ತಾಯಕ್ಕನ ದುಃಖವನ್ನು ಕಟುವಾಗಿ ವಿಮರ್ಶಿಸುವ ವಚನಕಾರ್ತಿಯರೂ ಇದ್ದಾರೆ. ನಾವು ಇಂದು ಅಷ್ಟೊಂದು ಮೆಚ್ಚುವ ಅಕ್ಕ ಅಥವಾ ಮುಕ್ತಾಯಕ್ಕರನ್ನು ಏಕೆ ಸಮಕಾಲೀನ ವಚನಕಾರ್ತಿಯರು ನೆನೆಯುವುದೂ ಇಲ್ಲ ? ಆದರೆ ಬಸವ ಮುಖ್ಯನಾಗಿ ಇತರ ಅನೇಕ ವಚನಕಾರರನ್ನು ಪ್ರೀತಿ ಭಕ್ತಿಗಳಿಂದ ಸ್ಮರಿಸುತ್ತಾರೆ ಎಂಬ ಪ್ರಶ್ನೆ ಕಾಡುತ್ತದೆ. ಈ ಪ್ರಶ್ನೆಗೆ ಎರಡು ಸಮಾಧಾನಗಳಿರುವುದು ಸಾಧ್ಯ. ವಚನಾಕಾರ್ತಿಯರು ಬರೆದ ಎಲ್ಲ ವಚನಗಳೂ ಸಿಕ್ಕಿಲ್ಲ ಎಂದುಕೊಳ್ಳಬಹುದು. ಆದರೆ ಇದು ತೃಪ್ತಿಕರ ಉತ್ತರವಲ್ಲ. ಇನ್ನೊಂದು ಆ ಕಾಲದ ಸ್ತ್ರೀಯರ, ಸಾಮಾಜಿಕ ವಾಸ್ತವ ಪ್ರೇರಿತ ದೃಷ್ಟಿಕೋನ ಕಾರಣ ಎನ್ನಬಹುದು. ಅಕ್ಕ ತುಳಿದ ದಾರಿ ಎಲ್ಲ ಲೌಕಿಕ ಮಹಿಳೆಯರಿಗೆ ಆದರ್ಶವಾಗುವುದು ಸಾಧ್ಯವಿಲ್ಲ ಎಂದು ಅವರು ಭಾವಿಸಿದ್ದಿರಬಹುದೆ ? ಅಥವಾ ಎಲ್ಲ ವಚನಕಾರ್ತಿಯರ ರಚನೆಗಳಲ್ಲಿ ವ್ರತ, ನೇಮ, ಪೂಜೆಗಳೇ ಬಹುಭಾಗ ಆಕ್ರಮಿಸಿರುವುದನ್ನು ಕಂಡರೆ ಮಹಿಳೆಯ ಆಧ್ಯಾತ್ಮಿಕ ಸಾಧನೆಗೆ ಪುರುಷ ದೃಷ್ಟಿಕೋನ ಕೆಲವು ಮಿತಿಗಳನ್ನು ವಿಧಿಸಿತ್ತೆಂದು ಊಹಿಸಬಹುದೆ ? ನಿಸ್ಸೀಮರಾಗುವುದು, ಬಯಲನ್ನು ಗಳಿಸುವುದು, ಇತ್ಯಾದಿ ಆಧ್ಯಾತ್ಮಿಕ ಎತ್ತರಗಳೆಲ್ಲಾ ಪುರುಷರಿಗಷ್ಟೆ, ಪುರುಷ ಮನೋಧರ್ಮಕ್ಕಷ್ಟೆ ಸಾಧ್ಯ ಎಂಬ ಮನೋಧರ್ಮ ಕೆಲಸಮಾಡಿದೆಯೇ ?

ಈ ಪ್ರಶ್ನೆಗಳು ಆಧ್ಯಾತ್ಮಿಕ ಪ್ರಶ್ನೆಗಳಲ್ಲ, ಸಾಮಾಜಿಕ ಪ್ರಶ್ನೆಗಳು. ಬಹುಶಃ ಅಕ್ಕ ಕೂಡ ಆಧ್ಯಾತ್ಮಿಕತೆಯ ಈ ಪುರುಷ ಪ್ರಾಧಾನ್ಯವನ್ನು ಒಪ್ಪಿಕೊಂಡಿರಬಹುದು ಎಂಬ ಭಾವ ಅವಳ ಕೆಲವು ವಚನಗಳನ್ನು ಓದಿದಾಗ ಬರುತ್ತದೆ. ''ನಾಮದಲ್ಲಿ ಹೆಂಗೂಸೆಂಬ ಹೆಸರಾದರೇನು, ಭಾವಿಸಲು ಗಂಡುರೂಪು.'' ''ಮುಂಗೈಯಲ್ಲಿ ವೀರಗಂಕಣವನಿಕ್ಕಿ, ಮುಂಗಾಲಲ್ಲಿ ತೊಡರುಬಾವುಲಿಯ ಕಟ್ಟಿದೆ, ಗಂಡುಡಿಗೆಯನ್ನುಟ್ಟೆನೆಂಬ ಮಾತಿನ ಬಿರಿವ ನುಂಗಿದೆನು'', ಎಂಬಂಥ ಮಾತುಗಳು ಮತ್ತು *ಅಘಟಿತ ಘಟಿತನ ಒಲವಿನ ಶಿಶು* ಎಂದು ಆರಂಭವಾಗುವ ಅಕ್ಕನ ವಚನ ಇವನ್ನು ಈ ಮಾತಿಗೆ ನಿದರ್ಶನವಾಗಿ ನೋಡಬಹುದು (*ಶಿವಶರಣೆಯರ ವಚನಗಳು*, ಕರ್ನಾಟಕ ಸಂಸ್ಕೃತಿ ಇಲಾಖೆ, ಸಂ. ವೀರಣ್ಣ ರಾಜೂರ, ಕ್ರಮವಾಗಿ ವಚನ ಸಂಖ್ಯೆ ೧೩೦, ೨೨೮ ಮತ್ತು ೧೨).

ಅನುಭಾವವೆಂಬುದು ಕಾಲವೆಂಬ ಕಲ್ಪನೆಯನ್ನು ಮೀರುವ ಅಪೇಕ್ಷೆ, ಅದೊಂದು ಕಾಲಾತೀತ ಸ್ಥಿತಿ; ಆದರೆ ಅದನ್ನು ಭಾಷೆಯಲ್ಲಿ ವ್ಯಕ್ತಿಪಡಿಸಿದಾಗ ಕಾಲಧರ್ಮ. ಕಾಲಧರ್ಮವು ರೂಪಿಸುವ ಸಾಮಾಜಿಕ ಮಾನಸಿಕ ಮನೋಧರ್ಮಗಳಿಗೆ ಒಳಪಡದೆ ವಿಧಿಯಿಲ್ಲ. ಅಕ್ಕನ ಸಮಕಾಲೀನ ವಚನಕಾರರು ಅವಳ ಅನುಭಾವಿಕತೆಯನ್ನು ಮೆಚ್ಚಿದರೂ ಸಮಕಾಲೀನ ಶರಣೆಯರು ಅಕ್ಕನ ಬಗ್ಗೆ, ಮತ್ತು ತಮ್ಮ ಇತರ ಒಡನಾಡಿ ವಚನಕಾರ್ತಿಯರ ಬಗ್ಗೆ ಮೌನವಹಿಸಿರುವುದು, ಅಕ್ಕನಲ್ಲಿ ಮತ್ತು ಇತರ ವಚನಕಾರ್ತಿಯರಲ್ಲಿ ಸೂಕ್ಷ್ಮವಾಗಿ ವ್ಯಕ್ತವಾಗುವ ಪೌರುಷ ಮನೋಧರ್ಮ, ಇವನ್ನು ಇನ್ನಷ್ಟು ವಿವರವಾಗಿ ಪರಿಶೀಲಿಸುವ ಅಗತ್ಯವಿದೆ. ಅಕ್ಕನ ವಚನಗಳನ್ನು ಈಗ ನಡೆದಿರುವುದಕ್ಕಿಂತ ಇನ್ನೂ ಹೆಚ್ಚು ವಿವರವಾಗಿ ಅಕ್ಕನೇ ರೂಪಿಸಿಕೊಂಡಿರುವ ಪರಿಣಾಮಿ, ಧಾವತಿ, ಮುಂತಾದ ಪರಿಕಲ್ಪನೆಗಳ ಹಿನ್ನೆಲೆಯಲ್ಲಿ, ಆಕೆ ಬಳಸುವ ಹೋಲಿಕೆ ರೂಪಕಗಳಿಗೂ ತಾತ್ವಿಕ ವಿಚಾರಗಳಿಗೂ ಇರುವ ಸಂಬಂಧವನ್ನು ಅನುಲಕ್ಷಿಸಿಕೊಂಡು ಪರಿಶೀಲಿಸುವುದು ಅಗತ್ಯವಾಗಿದೆ. ಅದು ಇನ್ನೊಂದು ವಿಸ್ತೃತ ಅಧ್ಯಯನ ವಸ್ತುವಾಗುತ್ತದೆ.

ಓ. ಎಲ್. ನಾಗಭೂಷಣ ಸ್ವಾಮಿ
ಇಂಗ್ಲಿಷ್ ಅಧ್ಯಾಪಕರು, ಮಹಾರಾಣಿ ಕಾಲೇಜು
ಬೆಂಗಳೂರು - ೫೬೦ ೦೦೧

## ಸಾದರ ಸ್ವೀಕಾರ

**ಗರ್ದಿ ಗಮ್ಮತ್** (ಕವನ ಸಂಕಲನ)
*ಎಸ್. ಬಿ. ಸುಳ್ಳದ್*
**ಪುಟ : ೮೮** ಬೆಲೆ : ರೂ. ೬೦
**ಮಿಲಿಂದ-ಆನಂದ ಪ್ರಕಾಶನ**
ಭೀಮಾಗೃಹ, ಪ್ಲಾಟ್ ನಂ.೧
ಜಿ.ಡಿ.ಎ. ಕಾಲೋನಿ, ಪ್ರಶಾಂತನಗರ (ಬಿ)
ರಾಜಾಪೂರ ಅಂಚೆ, ಗುಲ್ಬರ್ಗಾ-೫೮೫ ೧೦೬

**ಮುಸುಕಿದಿ ಮಬ್ಬಿನಲ್ಲಿ** (ಪದ್ಯಗಳು)
*ಮಾಧವ ಕುಲಕರ್ಣಿ*
**ಪುಟ : ೪೦** ಬೆಲೆ : ರೂ. ೨೦
**ಗಜಾನನ ಪಬ್ಲಿಕೇಷನ್ಸ್**
ನಂ. ೬೨೩, ನ್ಯೂ ಕಾಂತರಾಜ ಅರಸ್ ರಸ್ತೆ,
ಕುವೆಂಪುನಗರ, ಮೈಸೂರು-೫೭೦ ೦೨೩

**ನೆಲದ ಮರೆಯ ನಿಧಾನ** (ವಿಚಾರ ವಿಮರ್ಶೆ)
*ಟಿ. ಜಿ. ಭಟ್ಟ, ಹಾಸಣಗಿ*
**ಪುಟ : ೧೦೨** ಬೆಲೆ : ರೂ. ೪೦
**ಆದಿತ್ಯ ಪ್ರಕಾಶನ**, ಹಾಸಣಗಿ, ಯಲ್ಲಾಪುರ ತಾಲ್ಲೂಕು
ಉತ್ತರ ಕನ್ನಡ - ೫೮೧ ೩೪೭

**ನಿಮ್ಮದು ಸಮಸ್ಯೆಯ ಮಗುವೆ ?** (ಲೇಖನ ಸಂಗ್ರಹ)
*ಡಾ|| ಕೆ. ಎ. ಅಶೋಕ್ ಪೈ*
**ಪುಟ : ೧೩೬** ಬೆಲೆ : ರೂ. ೨೫
**ದಿವ್ಯಚಂದ್ರ ಪ್ರಕಾಶನ**
ನಂ. ೪೫, ಪಾಪಣ್ಣನ ತೋಟ, ೧ನೇಮುಖ್ಯ ರಸ್ತೆ
೨ನೇ ಅಡ್ಡರಸ್ತೆ, ಕೆ.ಎಚ್.ಬಿ. ಕಾಲನಿ ೨ನೇ ಹಂತ
ಬಸವೇಶ್ವರನಗರ, ಬೆಂಗಳೂರು-೫೬೦೦೭೯

**ರಚನಾತ್ಮಕ ಚಿಂತನೆಗಳು** (ಲೇಖನ ಸಂಗ್ರಹ)
*ಪ್ರೊ|| ಲಲಿತಾಂಬ ವೃಷಭೇಂದ್ರಸ್ವಾಮಿ*
**ಪುಟ : ೧೨೮** ಬೆಲೆ : ರೂ. ೪೫
**ಪ್ರಸಾದ ಪ್ರಕಾಶನ**,
'ಶಿವ ಪ್ರಸಾದ', ೮ನೇ ಕ್ರಾಸ್, ಕಲ್ಯಾಣನಗರ,
ಧಾರವಾಡ-೫೮೦ ೦೦೭

**ಅಲೆಯ ಆಲಾಪ** (ಕವನ ಸಂಗ್ರಹ)
*ಜಿ. ಆರ್. ಪರಿಮಳಾ ರಾವ್*
**ಪುಟ : [illegible]** ಬೆಲೆ : ರೂ. ೩೫

**ಮಿನುಗು ದೀಪ** (ಹನಿಗವನಗಳು)
*ಜಿ. ಆರ್. ಪರಿಮಳಾ ರಾವ್*
**ಪುಟ : ೭೬** ಬೆಲೆ : ರೂ. ೩೫

**ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು**
**ಅನಿಕಾ ಪ್ರಕಾಶನ**, 'ಗರ್ಗೇಶ್ವರಿ', ನಂ. ೧೦೦೩
೨೭ನೇ 'ಎ' ಮೈನ್ ರೋಡ್, ೯ನೇ ಬ್ಲಾಕ್
ಜಯನಗರ, ಬೆಂಗಳೂರು-೫೬೦ ೦೬೯

**ಷಡಕ್ಷರ** (ಅಭಿನಂದನ ಗ್ರಂಥ)
*ಪ್ರಧಾನ ಸಂ : ಗಿರಿರಾಜ ಹೊಸಮನಿ*
**ಪುಟ : ೧೭೨** ಬೆಲೆ : ರೂ. ೬೦
**ಶ್ರೀ ಷಡಕ್ಷರಪ್ಪ ಶಿಕ್ಷಕರ ಅಭಿನಂದನ ಸಮಿತಿ**
ಲಿಂಗಸೂಗೂರು, ರಾಯಚೂರು ಜಿಲ್ಲೆ

**ವಂಚಕರ ಆಡಳಿತ – ದಿವಾಳಿಯತ್ತ ಭಾರತ** (ಲೇಖನಗಳು)
**ಪುಟ : ೩೬** ಬೆಲೆ : ರೂ. ೨
**ಭಾರತ ಕಮ್ಯುನಿಸ್ಟ್ ಪಕ್ಷ (ಮಾ)**
ಕರ್ನಾಟಕ ರಾಜ್ಯ ಸಮಿತಿ
ನಂ. ೧೨, ೧೮ನೇ ಅಡ್ಡರಸ್ತೆ, ಸಂಪಂಗಿರಾಮನಗರ,
ಬೆಂಗಳೂರು - ೫೬೦ ೦೨೭

# ಪುಸ್ತಕಗಳ ವರ್ಷ : ಒಂದು ಚಿಂತನೆ



*ಪುಸ್ತಕಗಳಿವೆ - ಕೊಳ್ಳುವವರೆಲ್ಲಿ ?*

ಕೇಂದ್ರ ಸರಕಾರ ಈ ವರ್ಷವನ್ನು (೨೦೦೧-೨) 'ಪುಸ್ತಕಗಳ ವರ್ಷ' ಎಂದು ಮೇ ಆರಂಭದಲ್ಲಿ ಘೋಷಿಸಿದೆ. ಇದನ್ನು ಮುಂದಿನ ವರ್ಷ ಏಪ್ರಿಲ್ ೨೨ರವರೆಗೂ ಆಚರಿಸಲಾಗುತ್ತದೆ.

ಕಳೆದ ಏಪ್ರಿಲ್ ೨೩ರಂದು ರಾಜಧಾನಿಯಲ್ಲಿ ಕೇಂದ್ರ ಮಾನವ ಸಂಪನ್ಮೂಲ ಮಂತ್ರಾಲಯವು ಒಂದು ಪುಸ್ತಕ ಪ್ರದರ್ಶನದ ಯೋಜನೆ ಹಾಕಿತ್ತು. ಬಹುಶಃ ಈ ಯೋಜನೆಯೇ 'ಪುಸ್ತಕ ವರ್ಷ'ದ ಆಚರಣೆಗೆ ಎಡೆಮಾಡಿಕೊಟ್ಟಿದೆ.

ಇಂದು ಜನರಲ್ಲಿ ಓದುವ ಹವ್ಯಾಸ ಕುಂಠಿತ ಗೊಳ್ಳುತ್ತಿದೆ. ಇನ್ನೊಂದೆಡೆ ಟೆಲಿವಿಷನ್‌ನ ಪ್ರಭಾವವಂತೂ ಹೇಳತೀರದು. ಇದರಿಂದಾಗಿ ಓದಲೇ ಬೇಕೆಂಬ ಅನಿವಾರ್ಯತೆಯೇನೂ ಕಾಣಿಸುತ್ತಿಲ್ಲ! ಇಂದು ತಮ್ಮ ಆಸಕ್ತಿ, ಅಭಿರುಚಿಗಳನ್ನು ತಿಳಿಯಲು, ಕೇಳಲು ಇಂದಿನ ಯುವ ಪೀಳಿಗೆಯ ಬಳಿ ಬೇರೆ ಬೇರೆ ಆಧುನಿಕ ಮಾಧ್ಯಮಗಳಿವೆ. ಕೆಲವರಂತೂ ''ಕಂಪ್ಯೂಟರ್ ಮತ್ತು ಇಂಟರ್‌ನೆಟ್ ಬಂದ ನಂತರ ಪುಸ್ತಕಗಳ ಅಗತ್ಯತೆ ಇದೆ ಎನ್ನುವುದೇ ತರ್ಕಹೀನ ಮಾತು'' ಎನ್ನಲಾರಂಭಿಸಿದ್ದಾರೆ. ಒಂದು ನಿಟ್ಟಿನಲ್ಲಿ ಇದನ್ನು ತಳ್ಳಿಹಾಕುವಂತೆಯೂ ಇಲ್ಲ.

ಆರುನೂರು ವರ್ಷಗಳ ಹಿಂದೆ ಪ್ರಿಂಟ್ ಮೀಡಿಯಾದ ಆವಿಷ್ಕಾರ ಆಗಿದ್ದಿರಲಿಲ್ಲ. ಅಂದಿನ ದಿನಗಳಲ್ಲಿ ಹೆಚ್ಚಿನ ದೇಶಗಳು ತಮ್ಮ ಸಂಸ್ಕೃತಿಯ ಆದಾನ-ಪ್ರದಾನಗಳಿಂದ ವಂಚಿತಗೊಂಡಿದ್ದುವು. ಪ್ರಿಂಟ್ ಮೀಡಿಯಾದ ವಿಸ್ತಾರವಾದಂತೆ ವಿಚಾರಗಳ ಪ್ರಭಾವಕ್ಷೇತ್ರಗಳು ವೃದ್ಧಿಸತೊಡಗಿದವು. ಎಲ್ಲಿಯತನಕ ಅಂದರೆ, ಶಿಕ್ಷಣದ ಸಂಪೂರ್ಣ ಪದ್ಧತಿಗಳೇ ಪುಸ್ತಕವನ್ನು ಆಧರಿಸಿದವು. ಇದೀಗ ಈ ಮಾಧ್ಯಮದಲ್ಲಿ ಹೊಸ ಕ್ರಾಂತಿ ಜರುಗಿದೆ. ಅದು ಪ್ರಿಂಟ್ ಮೀಡಿಯಾದಿಂದ ಅದರ ವರ್ಚಸ್ಸನ್ನು ಸೆಳೆದುಕೊಂಡಿದೆ.

ಒಂದು ಕಾಲದಲ್ಲಿ 'ಮೌಖಿಕ ಮಾಧ್ಯಮ'ದ ಮೇಲೆ ಮುದ್ರಿತ ಮಾಧ್ಯಮ'ವು ಮೇಲ್ಮೈ ಸಾಧಿಸಿದ್ದರೆ ಇಂದು 'ದೃಶ್ಯ ಮಾಧ್ಯಮ'ಗಳು 'ಮುದ್ರಿತ ಮಾಧ್ಯಮ'ವನ್ನು ಹಿಂದಕ್ಕಟ್ಟಿವೆ.

'ಭಾರತ್ ದೇಶ್ ಮಹಾನ್' ನ ಟಿವಿ ಚಾನಲ್ ದೂರದರ್ಶನವು ಕೂಡಾ ಇತರ ಚಾನೆಲ್‌ಗಳನ್ನು ಎದುರಿಸಲು ಸನ್ನದ್ಧವಾಗಿದೆ. ಅದೇ ತಂತ್ರಗಳನ್ನು ತನ್ನಲ್ಲೂ ಅಳವಡಿಸಿಕೊಳ್ಳಲಾರಂಭಿಸಿದೆ. ಕೆಲವು ತಜ್ಞರು ಶಂಕಿಸುವಂತೆ ಭವಿಷ್ಯದಲ್ಲಿ ನಮ್ಮ ಶಿಕ್ಷಣ ಪ್ರಣಾಳಿಯನ್ನು ಹೊಸ ಟೆಕ್ನಾಲಜಿಯ ಕೈಗೊಪ್ಪಿಸಬೇಕಾಗಬಹುದು. ಇತಿಹಾಸ, ಭೂಗೋಳ, ಗಣಿತ, ಸಾಹಿತ್ಯ ಎಲ್ಲವೂ ಕಾರ್ಪೊರೇಟ್ ಕಂಪೆನಿಗಳ ಕೈಗೆ ಹೋಗುವ ಸಾಧ್ಯತೆ ಖಂಡಿತ ಇದೆ. ಶಾಲೆಯ ಗೋಡೆಗಳ ಮೇಲೆ ಟೂತ್‌ಬ್ರಶ್, ಚಾಕ್ಲೇಟ್‌ಗಳ ಜಾಹಿರಾತು ಚೀಟಿಗಳನ್ನು ಅಂಟಿಸುವುದು ಸರ್ವೇಸಾಮಾನ್ಯವಾಗಿದೆ. ಪುಸ್ತಕಗಳ ಮುಖಪುಟಗಳಲ್ಲಿ ಸಾಬೂನು, ಕಾರು... ಇತ್ಯಾದಿ ಕಂಪೆನಿಗಳ ಹೆಸರೂ ರಾರಾಜಿಸುತ್ತಿವೆ. ಮುಖ್ಯವಾಗಿ ಈ ಟೆಕ್ನಾಲಜಿ ನಮ್ಮ ನಿತ್ಯ ಜೀವನದ ಒಂದು ಅಂಗವೆನಿಸಿಬಿಟ್ಟಿದೆ. ಹೀಗಿದ್ದೂ ಅದು, 'ಮಾನವ ಮೌಲ್ಯ', ಮಾರುಕಟ್ಟೆಯ ವಸ್ತು ಅಲ್ಲವಲ್ಲ ?

ಇಂತಹ ಸಂದರ್ಭದಲ್ಲಿ ೨೦೦೧-೨ ಅವಧಿಯನ್ನು 'ಪುಸ್ತಕಗಳ ವರ್ಷ' ಎಂದು ಘೋಷಿಸಿರುವಾಗ ನಿಜಕ್ಕೂ ಅದರ ಮಹತ್ವ ಹೆಚ್ಚಿದೆ. 'ಇಂಟರ್‌ನೆಟ್ ಸಂಸ್ಕರಣ' ದಿಂದ ಜ್ಞಾನ ಮತ್ತು ಮನೋರಂಜನೆಗಳ 'ಬೃಹತ್ ರಾಶಿ' ಇದ್ದರೂ ಪುಸ್ತಕಗಳ ಅಗತ್ಯವಂತೂ ಸದಾಕಾಲ ಇರುತ್ತದೆ. ಎಲ್ಲಿಯವರೆಗೆ ಮನುಷ್ಯ ಇರುವನೋ ಅಲ್ಲಿಯವರೆಗೆ ಪುಸ್ತಕ ಪ್ರಪಂಚಕ್ಕೆ ಅಳಿವಿಲ್ಲ.

ಅಂದ ಹಾಗೆ, ಭಾರತ ಸರಕಾರಕ್ಕೆ ತಾನೇ ನೇಮಿಸಿದ ಈ ಸಮಿತಿಗಳ ವರದಿಗಳನ್ನು ಓದಲೂ ಬಿಡುವಿಲ್ಲ. ಸರಕಾರಿ ಕಛೇರಿಗಳಲ್ಲಿ ಸಂಬಂಧಪಟ್ಟ ಕಡತಗಳು ಕೊಳೆಯುತ್ತಿರುತ್ತವೆ. ಇಂತಹ ಪರಿಸ್ಥಿತಿಯಲ್ಲಿ ಕೇಂದ್ರ ಸರಕಾರದಿಂದ ಮತ್ತೇನನ್ನು ನಿರೀಕ್ಷಿಸಲು ಸಾಧ್ಯ ?

ಇದು 'ಪುಸ್ತಕಗಳ ವರ್ಷ' ಎಂದು ಘೋಷಿಸಿರುವುದು ಪ್ರಕಾಶಕರ ಲಾಬಿಯ ಒತ್ತಡದಿಂದಲೇ ಎಂದು ಕೆಲವರ ಅಂಬೋಣ. ಒಂದು ವೇಳೆ ಇದು ನಿಜವೇ ಆಗಿದ್ದರೆ ಖಂಡಿತಾ ಇದರಿಂದ ಯಾರಿಗೂ ಲಾಭವಾಗದು. ಹಾಗಿದ್ದಲ್ಲಿ ಇದರ ನಿಯಮಗಳನ್ನೇ ಬದಲಾಯಿಸ ಬೇಕಾಗುತ್ತದೆ. ಅಂಚೆ ಮುದ್ರಣ ವೆಚ್ಚ ಎರಡೂ ಕಡಿಮೆ ಆಗಬೇಕು. ಪ್ರಕಾಶಕರೂ ತಮ್ಮ ಮನೋಧರ್ಮವನ್ನು ಬದಲಾಯಿಸಿಕೊಳ್ಳಬೇಕು. 'ಪುಸ್ತಕಗಳ ವರ್ಷ'ದ ಅವಧಿಯಲ್ಲಿ ಸರಕಾರ ತನ್ನ ಇಲಾಖೆಗಳಿಗೆ ಹೆಚ್ಚಿನ ಸಂಖ್ಯೆಯಲ್ಲಿ ಪುಸ್ತಕಗಳನ್ನು ಖರೀದಿಸುವ ಯೋಜನೆಯನ್ನು ಘೋಷಿಸಬೇಕು. ಆಗ ಮಾತ್ರ ಈ ಯೋಜನೆ ಸಾರ್ಥಕತೆಯತ್ತ ಹೆಜ್ಜೆ ಹಾಕುತ್ತದೆ.

ಪುಸ್ತಕಗಳು, ಸಾಹಿತ್ಯದ ವಿವಿಧ ಪ್ರಕಾರಗಳು, ಮನುಷ್ಯನ ಭಾವಲೋಕವನ್ನು ಅತ್ಯಂತ ಪರಿಣಾಮಕಾರಿ ಯಾಗಿ ಬದಲಿಸುತ್ತವೆ. ಹೊರಗಿನ ಪರಿವರ್ತನೆಗಳು ಖಾಯಂ ಆಗಿರುವುದಿಲ್ಲ, ಕೇವಲ ತೋರಿಕೆಗೆ ಮಾತ್ರ ಆಗಿರುತ್ತದೆ. ಮಾನವ ಭಾವನೆಗಳನ್ನು ಸಂಸ್ಕಾರದ ಕಡೆಗೆ ಗಮನ ಹರಿಯುವಂತೆ ಮಾಡುವುದು ಪುಸ್ತಕಗಳೇ.

ಇಂದು ಮನುಷ್ಯನ ಭೌತಿಕ ವಿಕಾಸಕ್ಕಾಗಿ ಅಪಾರ ಹಣ ಖರ್ಚು ಮಾಡಲಾಗುತ್ತಿದೆ. ಆದರೆ ಆತನ

ಶ್ರೀನಿವಾಸ ಜೋಕಟ್ಟೆ

**೨೦೦೧-೨ ವರ್ಷದ ಅವಧಿಯನ್ನು 'ಪುಸ್ತಕಗಳ ವರ್ಷ' ಎಂದು ಕೇಂದ್ರ ಸರಕಾರ ಘೋಷಿಸಿದೆ. ಆರು ಶತಮಾನಗಳಿಂದಲೂ, ಅಂದರೆ ಮುದ್ರಣ ಆವಿಷ್ಕಾರವಾದಂದಿನಿಂದಲೂ, ಸಮಾಜದ ಸರ್ವತೋಮುಖ ಬೆಳವಣಿಗೆಗೆ ಪುಸ್ತಕಗಳ ಕೊಡುಗೆ ಅಪಾರ. ಪುಸ್ತಕಗಳಿಲ್ಲದೇ ಮನುಕುಲದ ಬದುಕು ಶೂನ್ಯ.**

**ಈ ಟಿ.ವಿ., ಕಂಪ್ಯೂಟರ್ - ಇಂಟರ್‌ನೆಟ್ ಯುಗದಲ್ಲಿ ಪುಸ್ತಕಗಳ ಭವಿಷ್ಯ ಒಂದು ಪ್ರಶ್ನಾರ್ಥಕ ಚಿಹ್ನೆಯಾಗಿದೆ. ಯಾವುದೇ ಇತರ ಮಾಧ್ಯಮವಾದರೂ ಜನಸಾಮಾನ್ಯರಿಗೆ ಪುಸ್ತಕದಷ್ಟು ಹತ್ತಿರವಾಗಬಲ್ಲುದೇ ? ಈ ನಿಟ್ಟಿನಲ್ಲಿ ಆದ್ಯತೆಗಳೇನು, ಓದುಗರ ಪ್ರಕಾಶಕರ ಪಾತ್ರವೇನು ಎಂಬ ಚರ್ಚೆ ಈ ಲೇಖನದಲ್ಲಿದೆ.**



# ಕ್ರಿಸ್ತುರೂಪದ ಕ್ರಾಂತಿಯೋಧ ಚೆಗವೇರ

**"ಒಬ್ಬ ಕಿರಾತಕನ ಬದುಕು ಸಾವಿನೊಂದಿಗೆ ಅಂತ್ಯ - ಆದರೆ ಒಬ್ಬ ಕ್ರಾಂತಿಯೋಧನ ಬದುಕು ಸಾವಿನಿಂದಲೇ ಆರಂಭ".**

ಎ. ಆರ್. ಎಂ. ಇಸ್ಮಾಯಿಲ್

೧೯೬೦ರ ದಶಕದಲ್ಲಿ ವಿಚಾರವಂತ ಯುವಕರಲ್ಲಿ ಗೆಳೆಯ ಚೆ ಗೆವಾರ ಒಬ್ಬ ಆದರ್ಶ ಪುರುಷ. ಬೆಲ್ ಬಾಟಂ ಪ್ಯಾಂಟ್, ನಾಯಿ ಕಿವಿಯಂತಿರುವ ಕಾಲರ್ ಅಂಗಿ, ಹೆಗಲಿಗೊಂದು ತೋಳು ಚೀಲ, ಅಲಕ್ಷ್ಯ ಎತ್ತಿ ತೋರಿಸುವ ವೇಷ, ಕುರುಚಲು ಗಡ್ಡ ಇಷ್ಟಾದರೆ ಚೆ ನ ಸ್ಟೈಲ್ ಪೂರ್ತಿಯಾಯಿತು.

'ಚೆ' ಯಾರು ? ೬೦ರ ದಶಕದಲ್ಲಿಯೇ ಕಣ್ಮರೆಯಾದ ಈ ಯುವಕನನ್ನು ನಾವೇಕೆ ಇಂದು ನೆನಪಿಸಿಕೊಳ್ಳಬೇಕು ? ಅದರ ಅವಶ್ಯಕತೆ ಏನಿದೆ ? ಇತ್ಯಾದಿ ಅನೇಕ ಪ್ರಶ್ನೆಗಳು ಏಳುತ್ತವೆ. ಎರಡನೇ ಜಾಗತಿಕ ಯುದ್ಧದ ನಂತರದ ಧ್ರುವೀಕರಣ ಹೇಗಿತ್ತೆಂದರೆ ಎರಡು ಮಹಾಶಕ್ತಿಗಳು ವಿಶ್ವಜನತೆಯನ್ನು ತಮ್ಮ ಹಿಡಿತದಲ್ಲಿಟ್ಟುಕೊಂಡು ತಮ್ಮ ಹಿತಾಸಕ್ತಿಗಳ ಮತ್ತು ಅವರವರು ಕಂಡ ಕನಸುಗಳ ಸಾಧನೆಗಾಗಿ ಯತ್ನಿಸುತ್ತಿದ್ದರು. ಇಡೀ ಪ್ರಪಂಚವನ್ನು ತಮ್ಮ ಆಯುಧ ವ್ಯಾಪಾರ ಮತ್ತು ಮಾರಕಾಸ್ತ್ರಗಳ, ರಾಸಾಯನಿಕ ಅಸ್ತ್ರಗಳ ಪ್ರಯೋಗಶಾಲೆಯನ್ನಾಗಿ ಪರಿವರ್ತಿಸುವ ಯತ್ನ ನಡೆಯುತ್ತಿದ್ದು, ವಿಶ್ವ ಜನತೆ ಸೈತಾನ್ ಮತ್ತು ಸಮುದ್ರದ ಮಧ್ಯೆ ಸಿಕ್ಕಿ ಬಿದ್ದಂತೆ ತತ್ತರಿಸುತ್ತಿದ್ದರು. ಈ ಹಿನ್ನೆಲೆಯಲ್ಲಿ ಅನೇಕ ಸಣ್ಣಪುಟ್ಟ ರಾಷ್ಟ್ರಗಳಲ್ಲಿ ತಮ್ಮ ಜನತೆಯನ್ನು ಸಾಮ್ರಾಜ್ಯಶಾಹಿಗಳ ಹಿಡಿತದಿಂದ ವಿಮುಕ್ತಿಗೊಳಿಸುವ ಹೋರಾಟದ ಪ್ರಕ್ರಿಯೆ ಸಹ ಪ್ರಾರಂಭಗೊಂಡಿತ್ತು. ಈ ಸಂದರ್ಭದಲ್ಲಿ ಕ್ಯೂಬಾ ದೇಶ ಸರ್ವಾಧಿಕಾರಿ ಬಾಟಿಸ್ಟಾನ ದುರಾಡಳಿತದ ವಿರುದ್ಧ ಸ್ವಾತಂತ್ರ್ಯ ಹೋರಾಟವನ್ನು ಪ್ರಾರಂಭಿಸಲಾಯಿತು. ಇದರ ಮುಖ್ಯ ಹೋರಾಟದ ಸೂತ್ರಧಾರಿಗಳಲ್ಲಿ ನಮ್ಮ ಈ 'ಚೆ' ಸಹ ಒಬ್ಬರು.

ಅರ್ಜೆಂಟೀನ ದೇಶದಲ್ಲಿ ಹುಟ್ಟಿದ 'ಚೆ' ವೃತ್ತಿಯಲ್ಲಿ ವೈದ್ಯರಾಗಿದ್ದರೂ ಅವರಲ್ಲಿ ಬೀಡು ಬಿಟ್ಟಿದ್ದ ಸಾಹಸ ಮನೋಭಾವ ಮತ್ತು ಹೋರಾಟದ ಸದ್ಗುಣಗಳು ಅವರನ್ನು ಕ್ಯೂಬಾದ ವಿಮೋಚನಾ ಸಮರ ಆಕರ್ಷಿಸಿತು. ೧೯೫೯ರ ಜನವರಿಯಲ್ಲಿ 'ಕ್ಯೂಬಾ ಕ್ರಾಂತಿ' ಯಶಸ್ವಿಯಾಯಿತು. ಕ್ಯೂಬಾ ಕ್ರಾಂತಿಯಲ್ಲಿ 'ಚೆ' ಅವರ ಮಹತ್ತರ ಪಾತ್ರ ಕುರಿತು ಅನೇಕ ಗ್ರಂಥಗಳು ಸಹ ಪ್ರಕಟಗೊಂಡಿರುತ್ತವೆ. ಕ್ಯೂಬಾ ರಾಷ್ಟ್ರದ ಮಹಾನ್ ಕ್ರಾಂತಿಕಾರಿ ಫಿಡೆಲ್ ಕ್ಯಾಸ್ಟ್ರೋ ಅವರು ಪದೇಪದೆ ಘೋಷಿಸುವಂತೆ ಕ್ಯೂಬಾ ಲ್ಯಾಟಿನ್ ಅಮೆರಿಕದ ಶೋಷಿತ ಜನರಿಗಲ್ಲದೆ ಜಗತ್ತಿನ ಎಲ್ಲ ದುಡಿವ ಜನತೆಗೆ 'ಚೆ' ನೆನಪು ಎಂದೆಂದಿಗೂ ಸ್ಫೂರ್ತಿದಾಯಕ.

'ಚೆ' ಬದುಕಿದ್ದಾಗಲೇ ಅವರನ್ನು ಕ್ಯೂಬಾದ 'ಗೌರವ ನಾಗರಿಕ'ನಾಗಿ ಅಂಗೀಕರಿಸಿರುವುದಲ್ಲದೇ ವಿದೇಶ ಕಾರ್ಯ ಹಾಗೂ ಕೈಗಾರಿಕ ಅಭಿವೃದ್ಧಿ ಮಂತ್ರಿ ಪದವಿ ಸಹ ನೀಡಲಾಗಿತ್ತು. ಆದರೆ ಒಬ್ಬ ಮಾದರಿ 'ಕ್ರಾಂತಿ ಯೋಧ'ನಾಗಿ 'ವಿಶ್ವ ಮಾನವೀಯತೆ' ಎಂಬ ಮಹಾನ್ ಪ್ರಜ್ಞೆಯ ಪ್ರೇರಕ ಶಕ್ತಿಯಾಗಿ ಕ್ಯೂಬಾ ಒಂದೇ ಅಲ್ಲ ಸಾಮ್ರಾಜ್ಯಶಾಹಿಗಳ ಹಿಡಿತದಲ್ಲಿ ನರಳುತ್ತಿರುವ ಎಲ್ಲಾ ಜನಾಂಗದ 'ವಿಮೋಚನೆ'ಗಾಗಿ ಶ್ರಮಿಸುವುದೇ ನನ್ನ ಧ್ಯೇಯ ಎಂಬ ನಿರ್ಣಯದೊಂದಿಗೆ ೧೯೬೫ರ ನಂತರ ಕ್ಯೂಬಾದಿಂದ ತನ್ನ ಕಾರ್ಯಕ್ಷೇತ್ರವನ್ನು 'ಚೆ' ೧೯೬೫ರಲ್ಲಿ ಬೊಲಿವಿಯಾಗೆ ವಿಸ್ತರಿಸಿ ಅಲ್ಲಿ 'ಗೆರಿಲ್ಲಾ' ಸೈನ್ಯವನ್ನು ಸಂಘಟಿಸುವ ಉದ್ದೇಶದಿಂದ ಅಲ್ಲಿನ ಅರಣ್ಯ ಪ್ರದೇಶದಲ್ಲಿ ನೆಲೆಯೂರಿದರು. ಬೊಲಿವಿಯಾದ ಅರಣ್ಯ, ಮರಳುಭೂಮಿ ಈ ಎಲ್ಲವೂ ಸಹ ಕ್ರಾಂತಿಯ ಘೋಷಣೆಗಳಿಂದಾಗಿ ಪರಿವರ್ತನೆಯ ಆಕಾಂಕ್ಷೆಯತ್ತ ಕೊಂಡೊಯ್ಯುತ್ತಿದ್ದವು. ಪ್ರಪಂಚದ ಉದ್ದಗಲಕ್ಕೂ ತನ್ನ ಆಧಿಪತ್ಯವನ್ನು ಸ್ಥಾಪಿಸುವ ಆತುರದಲ್ಲಿದ್ದ ಸಾಮ್ರಾಜ್ಯಶಾಹಿಯ ಎಲ್ಲಾ ಹುನ್ನಾರಗಳನ್ನು ಧಿಕ್ಕರಿಸಿದ ಆ ಯುವಕ ಎಲ್ಲಿದ್ದಾನೆ ? ಏನು ಮಾಡುತ್ತಿದ್ದಾನೆ ? ಎಂಬ ಹುಡುಕಾಟ ಆರಂಭವಾಯಿತು. ಅಮೇರಿಕಾದ ಬೇಟೆ ನಾಯಿಗಳಾದ 'ಸಿ.ಐ.ಎ.' ಲ್ಯಾಟಿನ್ ಅಮೇರಿಕಾದ ಉದ್ದಗಲಕ್ಕೂ ತನ್ನ ಕರಾಳ ಬಲೆಯನ್ನು ಬೀಸುತ್ತಾ 'ಚೆ'ಗಾಗಿ ಬೇಟೆಯಾಡತೊಡಗಿದರು.

ಕೊನೆಗೂ ೧೯೬೭ ಅಕ್ಟೋಬರ್ ೯ ರಂದು 'ಚೆ' ನಿಶ್ಯಬ್ದವಾದರು ಎಂಬ ದುಃಖದ ಸಂದೇಶ 'ಚೆ'ನ ಅನುಯಾಯಿ ವೃಂದವನ್ನು ಮುಟ್ಟಿದಾಗ ಅನೇಕ ಊಹೆ ಉಪಮೆಗಳು ಕೇಳಿಬಂದವು. ಬಹುತೇಕ ಈ ಕಾಲಘಟ್ಟದಲ್ಲಿ 'ಚೆ' ವಿಚಾರವಂತ ಯುವಕರ ನಡುವೆ ಒಂದು ಮಹಾ ಸ್ಫೂರ್ತಿಯ ಕೇಂದ್ರ ಬಿಂದುವಾಗಿ ಪರಿಣಾಮಗೊಂಡಿದ್ದರು. 'ಚೆ'ರವರ ಆ ''ನಕ್ಷತ್ರಗಳಂತೆ ಹೊಳೆಯುವ ನೇತ್ರಗಳು, ಮಾನವೀಯತೆಯ ಪರಮಪ್ರತೀಕವಾದ ಆ ಮುಖ ಎಂದಿಗೂ ಮರೆಯಲಾಗದ ನೆನಪಾಗಿತ್ತು.''

'ಚೆ' ಮಧ್ಯ ಬೊಲಿವಿಯಾದ ತಮ್ಮ ಗೆರಿಲ್ಲಾ ಸೈನ್ಯದೊಂದಿಗೆ ತರಬೇತಿಯ ಸನ್ನಾಹದಲ್ಲಿದ್ದಾಗ 'ಸಿ.ಐ.ಎ.' ಬೆಂಬಲಿತ ಬೊಲಿವಿಯಾದ ಸೈನಿಕರಿಂದ ಬಂಧಿತರಾಗಿ ನಂತರ ನಿಗೂಢ ರೀತಿಯಲ್ಲಿ ಕಣ್ಮರೆಯಾದ ಸುದ್ದಿ ವ್ಯಾಪಿಸಿದಾಗ ತಮ್ಮ ಒಡಹುಟ್ಟಿದವರು ಯಾರೋ ತೀರಿಕೊಂಡ ಹಾಗೆ ಬಿಕ್ಕಿ ಬಿಕ್ಕಿ ಅಳುತ್ತಿದ್ದ ದೃಶ್ಯ ಕಲ್ಲನ್ನು ಸಹ ಕರಗಿಸುವಂತಿತ್ತು.

ಕಂಬನಿ ಸುರಿಸದವರು ಬಹುಶಃ ಯಾರೂ ಇರಲಿಕ್ಕಿಲ್ಲ. ಲ್ಯಾಟಿನ್ ಅಮೇರಿಕಾದ ಪ್ರಾಂತ್ಯದಲ್ಲಿನ ಸಿಂಹಭಾಗ ಯುವಕರು ಸಹ ಮಾದಕ ವಸ್ತುಗಳ ಪ್ರಭಾವಕ್ಕೆ ತುತ್ತಾಗಿ ಸಂಪೂರ್ಣವಾಗಿ ಅಮೇರಿಕನ್ ಸಾಮ್ರಾಜ್ಯಶಾಹಿಯ ಕರಾಳ ಹಿಡಿತದಲ್ಲಿ ಇದ್ದ ಆ ಒಂದು ಸನ್ನಿವೇಶದಲ್ಲಿ ತಾನು ವೃತ್ತಿಯಿಂದ ವೈದ್ಯನಾಗಿದ್ದರೂ ಸಹ ಕ್ರಾಂತಿಯ ಸಾಧನೆಗಾಗಿ ಅವರನ್ನು ಜನಪರ 'ಗೆರಿಲ್ಲಾ' ಹೋರಾಟದ ಕಡೆ ಕೈ ಬೀಸಿ ಕರೆಯುತ್ತಿದ್ದಂತೆ, ಅವರು ಕ್ಯೂಬಾ ದೇಶದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ತಮ್ಮನ್ನು ತೊಡಗಿಸಿಕೊಂಡರು.

೧೯೨೮ ಜೂನ್ ೧೪ ರಂದು ಅರ್ಜೆಂಟೀನ ದೇಶದ ರುಸಾರಿಯಾ ಪಟ್ಟಣದಲ್ಲಿ ಜನಿಸಿದರು 'ಚೆ'. ಅವರ ತಂದೆ ತಾಯಿಗಳ ಪ್ರಗತಿಪರ ಕಾಳಜಿಯಿಂದಲೇ ಪ್ರಭಾವಿತರಾದ 'ಚೆ'ಗೆ ಎಲ್ಲಿಲ್ಲದ ಉತ್ಸಾಹ ; ಹಾಗೂ ಹೋರಾಟದ ಮನೋಭಾವ ಇವರ ಜೀವನ ಭಾಗವಾಗಿತ್ತು. ಮೇಲೆ ಉದ್ಧರಿಸಿರುವ ನಾಣ್ನುಡಿಗೆ ಅನುಗುಣವಾಗಿ 'ಚೆ' ಬದುಕಿದ್ದಾಗ ಕ್ಯೂಬಾ ದೇಶದ ವಿಮೋಚನೆಗಾಗಿ ತಮ್ಮನ್ನು ಸಮರ್ಪಿಸಿಕೊಂಡರೆ, ಮರಣಾನಂತರ ಲ್ಯಾಟಿನ್ ಅಮೇರಿಕಾದ ಪೆರು, ಎಲ್ ಸಾಲ್ವೊಡಾರ್, ಮೆಕ್ಸಿಕೋ, ನಿಕರಾಗುವಾ, ಅರ್ಜೆಂಟೀನ, ಬೊಲಿವಿಯಾ ಇತ್ಯಾದಿ ಭಾಗಗಳಲ್ಲಿ ಸಾಮಾಜಿಕ ಕ್ರಾಂತಿಯ ಭೌಗೋಳಿಕ ವಿಸ್ತರಣೆಗೆ ಪ್ರೇರಣಾಶಕ್ತಿಯಾಗಿದ್ದರು. ಆದರೆ ಮರಣಾನಂತರ ವಿಶ್ವವ್ಯಾಪಿಯಾಗಿ ಯುವಶಕ್ತಿಯ ಆದರ್ಶ ಪುರುಷನಾಗಿ ಪರಿಣಾಮಗೊಂಡಿದ್ದು ಮಾತ್ರ ನಿಸ್ಸಂಶಯ.

'ಚೆ' ಆದರ್ಶಗಳು ಮಾಸ್ಕೊದ ''ಲುಮುಂಬಾ'' ವಿಶ್ವವಿದ್ಯಾನಿಲಯದಿಂದ ಕೊಲೊಂಬೋದ ಬುದ್ಧಿಜೀವಿ ಕೇಂದ್ರಗಳವರೆಗೆ ವ್ಯಾಪಿಸುತ್ತಲೇ ಇತ್ತು. ಈ ಪ್ರಬಲ 'ಚೆ'ನ ಆದರ್ಶಗಳು, ಪ್ರಬಲ ಕ್ರಾಂತಿಯ ಚಳುವಳಿಗಳಲ್ಲಿ 'ಚೆ'ನ ಪ್ರಭಾವವಿತ್ತೆಂಬುದು ಸ್ಪಷ್ಟ. ಹಲವು ವರ್ಷಗಳ ಹಿಂದೆ ಒಬ್ಬ ಅಮೇರಿಕನ್ ಪತ್ರಕರ್ತನಾದ ಜಾನ್ ಲೀ ಆ್ಯಂಡರ್‌ಸನ್ ಎಂಬುವರು ಈ ಬಗ್ಗೆ ಅಧ್ಯಯನ ನಡೆಸಿ 'ನ್ಯೂಯಾರ್ಕ್ ಟೈಮ್ಸ್' ಪತ್ರಿಕೆಯಲ್ಲಿ ಒಂದು ಲೇಖನ ಬರೆಯುವ ಮೂಲಕ 'ಚೆ'ನ ಪಾರ್ಥಿವ ಶರೀರ ಎಲ್ಲಿ ಮಾಯವಾಯಿತು ಎಂಬುದರ ಬಗ್ಗೆ ಇದ್ದಂತಹ ಊಹೆ, ವದಂತಿಗಳಿಗೆ ಅಂತಿಮ ತೆರೆ ಎಳೆದರು.

೧೯೬೭ ಅಕ್ಟೋಬರ್ ೮ ರಂದು ಜ|| ವರ್ಗಾಸ್ ಎಂಬ ಸೈನ್ಯಾಧಿಕಾರಿಯ ಕಾರ್ಯಾಚರಣೆಯ ನಂತರ 'ಚೆ' ಮತ್ತವರ ಐದು ಜನ ಗೆಳೆಯರನ್ನು ಜೀವಂತವಾಗಿ ಸೆರೆಹಿಡಿಯಲಾಯಿತು. ಆದರೆ ಬೊಲಿವಿಯಾದ ಸೈನಿಕ ಸರ್ವಾಧಿಕಾರಿ ಬ್ಯಾರಿಯಂತೋಷ್‌ನ ಆಜ್ಞೆಯಂತೆ ಮರುದಿನವೇ 'ಚೆ' ಮತ್ತು ಅವರ ಗೆಳೆಯರನ್ನು ಕಗ್ಗೊಲೆ ಮಾಡಲಾಯಿತು. ಸದರಿ ಸೈನ್ಯಾಧಿಕಾರಿಯ ನೆನಪಿನಂತೆ ''ಹೇ ! ರಣಹೇಡಿಗಳೇ, ನೀವು ಕೊಲ್ಲುವುದು ಒಬ್ಬ ಮನುಷ್ಯನನ್ನು ಮಾತ್ರ, ಎಂಬುದನ್ನು ಮರೆಯಬೇಡಿ'' ಎಂದು ಕೊನೆಯದಾಗಿ 'ಚೆ'ರವರು ಉಚ್ಚರಿಸಿದ ಮಾತಾಗಿತ್ತು. 'ಚೆ'ನ ಮೃತದೇಹವನ್ನು ಒಬ್ಬ ದೋಬಿ ಅಂಗಡಿಯಲ್ಲಿ ಪ್ರದರ್ಶನಕ್ಕಿಡಲಾಗಿತ್ತು. ಆದರೆ ಸಾವಿರಾರು ಜನ 'ಚೆ' ನ ಮುಖವನ್ನು ನೋಡಲು ಮುತ್ತಿದಾಗ ಇದರ ಪರಿಣಾಮಗಳ ಕುರಿತು ಭಯಭೀತರಾದ ಅಂದಿನ ಆಡಳಿತ ವರ್ಗ ತಕ್ಷಣ ಮೃತದೇಹವನ್ನು ನಿಗೂಢ ರೀತಿಯಲ್ಲಿ ಎಲ್ಲಿಗೋ ಸಾಗಿಸಿ ಕಾಣೆಯಾಗಿದೆ ಎಂದು ಪ್ರಕಟಣೆಯನ್ನು ಹೊರಡಿಸಿತು. ಅಲ್ಲದೇ ದೋಬಿ ಅಂಗಡಿಗೆ ಸಹ ಬೀಗ ಮುದ್ರೆಯನ್ನು ಹಾಕಲಾಯಿತು.

ಆ್ಯಂಡರ್‌ಸನ್ ಅವರ ಲೇಖನ ಪ್ರಕಟವಾದ ೩೦ ವರ್ಷಗಳ ತರುವಾಯ 'ಚೆ'ನ ಮೃತದೇಹವನ್ನು ಮತ್ತೆ ಹೊರತೆಗೆಯಲಾಯಿತು. ಮೃತ ದೇಹವನ್ನು ಕ್ಯೂಬಾ ದೇಶಕ್ಕೆ ಕೊಂಡೊಯ್ಯಲಾಯಿತು. 'ಚೆ'ನ ಮೃತದೇಹವನ್ನು ಸ್ವೀಕರಿಸಿದ ಅಂದು 'ಚೆ'ನ ಸಹಪಾಠಿ, ಮಾರ್ಗದರ್ಶಿ ಎಲ್ಲವೂ ಆದ ಫಿಡೆಲ್ ಕ್ಯಾಸ್ಟ್ರೋ ನೆನಪುಗಳ ಸಾಗರದಲ್ಲಿ ಮುಳುಗೆದ್ದು ಬಿಕ್ಕಿ ಬಿಕ್ಕಿ ಅಳುತ್ತಿದ್ದ ದೃಶ್ಯ ಮರೆಯಲಾಗದ ದೃಶ್ಯ.

'ಚೆ'ನ ಮೃತದೇಹ ಇರಿಸಿರುವ ಕ್ಯೂಬಾದ ಹವಾನದಲ್ಲಿರುವ 'ಚೆ' ಸ್ಮಾರಕ ಇಂದು ಕಮ್ಯುನಿಸ್ಟ್ ಪ್ರವಾಸಿಗರಿಂದ ತುಂಬಿ ಹರಿಯುತ್ತಿದೆ. ಟಿ ಶರ್ಟ್, ಬ್ಯಾಡ್ಜ್, ಟೋಪಿ, ಬ್ಯಾನರ್ ಈ ರೀತಿ ಅನೇಕ ವಸ್ತುಗಳು ಪ್ರದರ್ಶನಗಳಾಗುತ್ತವೆ. ಪುಸ್ತಕಗಳು, ಫೋಟೋ, ಆಲ್ಬಂಗಳು ಇತ್ಯಾದಿ ಅನೇಕ ಲ್ಯಾಟಿನ್ ಅಮೇರಿಕಾದ ಪಟ್ಟಣಗಳಲ್ಲಿ ಮಾರಾಟವಾಗುತ್ತವೆ.

ಹುತಾತ್ಮನಾಗಿ ಮೂವತ್ತೆರಡು ವರ್ಷಗಳು ಕಳೆದರೂ 'ಚೆ' ಅಮೇರಿಕದ ಸಾಮ್ರಾಜ್ಯಶಾಹಿಗೆ ದುಸ್ವಪ್ನವಾಗಿಯೇ ಕಾಡುತ್ತಿದ್ದಾರೆ. ಪದವಿಗಾಗಿ ಪಕ್ಷದಿಂದ ಪಕ್ಷಕ್ಕೆ ಹಾರಾಡುತ್ತಿರುವ ಹೊಟ್ಟೆಪಾಡು ರಾಜಕಾರಣಿಗಳ ನಡುವೆ ಬದುಕುತ್ತಿರುವ ನಾವೆಲ್ಲರೂ 'ಚೆ' ಅವರ ಕ್ರಾಂತಿಕಾರಿ ಬದುಕಿನಿಂದ ಸ್ಫೂರ್ತಿ ಪಡೆದು ಸಾಮ್ರಾಜ್ಯಶಾಹಿಯ ವಿರುದ್ಧ ಹೋರಾಡಲು ಸಜ್ಜಾಗಬೇಕಾಗಿದೆ.

ಹೆತ್ತ ತಾಯಿ, ಹುಟ್ಟಿದ ನೆಲ, ತಾಯಿ ಜೋಗುಳ ಹಾಡಿದ ಭಾಷೆ ಇವೆಲ್ಲವನ್ನು ಮರೆತು ಪಾಶ್ಚಾತ್ಯರು ಪರಿಚಯ ಮಾಡಿದಂತಹ ವಿಲಕ್ಷಣ ಸಂಸ್ಕೃತಿಗೆ ಬಲಿಯಾಗಿ ಜೀವನದ ಸೌಭಾಗ್ಯಗಳನ್ನು ಶ್ರಮವಿಲ್ಲದೇ ಎತ್ತಿ ಹಿಡಿಯಲು ಕನಸು ಕಾಣುತ್ತಿರುವ, ಐಷಾರಾಮ ಜೀವನದತ್ತ ಜಾರುತ್ತಿರುವ ನಮ್ಮ ಯುವಜನರು 'ಚೆ' ಮುಂದಿನ ತಲೆಮಾರಿಗಾಗಿ ಬಿಟ್ಟು ಹೋಗಿರುವ ಜೀವನಾದರ್ಶಗಳು, ಉದ್ದೇಶಗಳು, ಕ್ರಾಂತಿಕಾರಿ ಆದರ್ಶಗಳ ಬಗ್ಗೆ ಚಿಂತಿಸಬೇಕಾಗಿದೆ.

ಜಗತ್ತಿನ ಪ್ರಥಮ ಕಮ್ಯುನಿಸ್ಟ್ ಯಾರು ? ಎಂಬ ಪ್ರಶ್ನೆಗೆ ಕವಿಯ ಉತ್ತರ 'ಏಸು ಕ್ರಿಸ್ತ' ಎಂಬುದಾಗಿದ್ದರೆ, 'ಚೆ'ನ ಮೃತದೇಹವನ್ನು ನೋಡಿದ ಕವಿಯ ಪ್ರತಿಕ್ರಿಯೆ ಏನೆಂದರೆ 'ಶಿಲುಬೆಯ ಮೇಲಿನ ಕ್ರಿಸ್ತುವಿನ ರೂಪ.' ಈ ರೀತಿ ಆಯಾ ಕಾಲಘಟ್ಟದಲ್ಲಿ ಕ್ರಾಂತಿಯ ಕಿಡಿಯನ್ನು ಕಿಚ್ಚಾಗಿಸುತ್ತಾ ಬಂದ ಕ್ರಾಂತಿಕಾರಿ ಹೋರಾಟಗಾರರ ಸಾಲಿನಲ್ಲಿ ಪ್ರಜ್ವಲಿಸುವ ಮಹಾನ್ ಚೇತನ ''ಕ್ರಿಸ್ತುರೂಪದ ಕ್ರಾಂತಿಯೋಧ 'ಚೆ'ಗೆವಾರ'' ಎಂದರೆ ಅತಿಶಯೋಕ್ತಿಯೇನಲ್ಲ.

ಎ. ಆರ್. ಎಂ. ಇಸ್ಮಾಯಿಲ್
ಎ.ಐ.ಟಿ.ಯು.ಸಿ. ಬಳ್ಳಾರಿ ಡಿಸ್ಟ್ರಿಕ್ಟ್ ಕೌನ್ಸಿಲ್, ಲಕ್ಷ್ಮಿನರಸಿಂಹ ಕಾಂಪ್ಲೆಕ್ಸ್
ಕೆ. ಸಿ. ರೋಡ್, ಬಳ್ಳಾರಿ-೫೮೩ ೧೦೧.

೫೩ನೇ ಪುಟದಿಂದ

ಭಾವನಾತ್ಮಕ ವಿಕಾಸಕ್ಕಾಗಿ ಹೆಚ್ಚಿನ ಗಮನ ನೀಡಲಾಗುತ್ತಿಲ್ಲ. ಇಂದು ಒಂದರ್ಥದಲ್ಲಿ 'ಉತ್ತೇಜನಕರ' ವಾತಾವರಣವೇನೋ ಇದೆ. ಇದರಿಂದಾಗಿಯೇ ಬಾಲಕರಲ್ಲಾಗಲಿ, ಯುವ ಜನತೆಯಲ್ಲೇ ಆಗಲಿ, ವಯಸ್ಕರಲ್ಲಾಗಲಿ ಪ್ರೌಢಿಮೆ ಬೆಳೆಯಬೇಕೆಂದರೆ ಇಂತಹ ಪ್ರಕ್ರಿಯೆಗಳೇ ಮುಖ್ಯವೆನಿಸುತ್ತದೆ. ಸಾಹಿತ್ಯ ಪುಸ್ತಕಗಳ ಅಭಾವವು ಅನೇಕ ನಕಾರಾತ್ಮಕ ಬೆಳವಣಿಗೆಗಳಿಗೆ ಕಾರಣವಾಗುತ್ತದೆ. ರೋಗ ಆರಂಭವಾದಾಗಲೇ ತೀವ್ರತರದ ಔಷಧಿ ಸೇವಿಸಿ ಅನಂತರ ಅದರ ಪ್ರಭಾವ ಕಡಿಮೆ ಮಾಡಲು ಇನ್ನೊಂದು ಔಷಧಿ ಸೇವನೆ ಮಾಡುತ್ತಿದ್ದಾರೆ.

ಶಿಕ್ಷಣ ಕ್ಷೇತ್ರದಲ್ಲಿ ಈಗ ಸಾಹಿತ್ಯಕ್ಕೆ ಎಲ್ಲಿಯೂ ಆದ್ಯತೆಗಳೇ ಇದ್ದಂತಿಲ್ಲ.

ನಮ್ಮ ದೇಶದಲ್ಲಿ ಇಂಗ್ಲಿಷ್ ಭಾಷೆಯಲ್ಲಿ ಲಿಖಿತ ಸಾಹಿತ್ಯದ ಓದುಗರ ಪರಿಸ್ಥಿತಿ ಎಲ್ಲಿಗೆ ತಲುಪಿದೆಯೆಂದರೆ ಪಾಟ್ನಾ, ಲಖ್ನೋ ಮೊದಲಾದ ನಗರಗಳಲ್ಲಿ ಬ್ರಿಟಿಷ್ ಕೌನ್ಸಿಲ್‌ನ ಪುಸ್ತಕಾಲಯಗಳನ್ನು ಮುಚ್ಚಲಾಗುತ್ತಿದೆ. ಸಾಕ್ಷರತೆ ವೃದ್ಧಿಯಾದಂತೆಯೇ ಓದುಗರ ಸಂಖ್ಯೆಯು ಕುಸಿಯತೊಡಗಿದೆ. ದಿನೇ ದಿನೇ ಭಾರತದ ಅನೇಕ ಗ್ರಂಥಾಲಯಗಳು, ಪ್ರಕಾಶನಗಳು, ಪುಸ್ತಕಾಲಯಗಳು ಹೀನಸ್ಥಿತಿಯನ್ನು ತಲುಪುತ್ತಿವೆ. ಅದೇ ಸಮಯದಲ್ಲಿ 'ಇಂಟರ್‌ನೆಟ್, ಸೈಬರ್ ಸೆಂಟರ್' ಗಳ ಸಂಖ್ಯೆ ಹೆಚ್ಚುತ್ತಿದೆ.

ಇಂದು ಅನೇಕ ವಾರ್ತಾ ಮಾಧ್ಯಮಗಳು ದೈತ್ಯ ಕಾರ್ಪೊರೇಟ್ ಕಂಪೆನಿಗಳ ಹಿಡಿತದಲ್ಲಿ ಸಿಕ್ಕಿ ನರಳುತ್ತಿವೆ. ಇವುಗಳ ಉದ್ದೇಶ ಕೇವಲ ಹಣ ಗಳಿಕೆ. ಇಂತಹವರಿಗೆ ಸಂಸ್ಕೃತಿಯ ಯಾವುದೇ ಕೊಡುಕೊಳ್ಳುವಿಕೆ ಇರುವುದಿಲ್ಲ. ಇವರಿಗೆಲ್ಲಾ ಜ್ಞಾನಾರ್ಜನೆ, ಸದ್ವಿಚಾರ, ಕಲೆ, ಕಲ್ಪನೆ, ಮಾನವೀಯ ಮೌಲ್ಯಗಳೆಲ್ಲವನ್ನೂ ಮಾರ್ಕೆಟ್‌ಗೆ ಮಿತಿಯಾಗಿ ಇರಿಸಿದ್ದಾರೆ. ಭಾವನೆಗಳ ಸಂಸ್ಕಾರದಿಂದಲೇ ರಾಕ್ಷಸ ಪ್ರವೃತ್ತಿ ತ್ಯಜಿಸಿ ಮನುಷ್ಯ ಎಂದೆನಿಸಿಕೊಳ್ಳಲು ಸಾಧ್ಯ.

೨೦೦೧-ನ್ನು 'ಪುಸ್ತಕ ವರ್ಷ' ಎಂದು ಆಚರಿಸುವಾಗ ನಾವು ಮುಖ್ಯವಾಗಿ ನೆನಪಿನಲ್ಲಿಡಬೇಕಾದುದು ಓದುಗರ ಸಂಖ್ಯೆ ಗಾಬರಿಪಡಿಸುವಷ್ಟೇನೂ ಕಡಿಮೆ ಆಗಿಲ್ಲವೆಂಬುದನ್ನು. ನಿಜ, ಅವರ ಆಸಕ್ತಿಗಳು ಬದಲಾಗಿವೆ, ವಿಷಯಗಳು ಬದಲಾಗಿವೆ, ಮಾರುಕಟ್ಟೆಯಲ್ಲಿ ಸ್ಪರ್ಧೆಗಳು ಹೆಚ್ಚಾಗಿವೆ. ಹೀಗಾಗಿ ನಮ್ಮ ಪ್ರಕಾಶಕರೂ ಬದಲಾದ ಪರಿಸ್ಥಿತಿಗನುಸಾರವಾಗಿ ಪುಸ್ತಕಗಳನ್ನು ಹೊರತರಬೇಕಾಗಿದೆ. ಈ ಇಂಗಿತವನ್ನು ಓದುಗರ ಇಂಗಿತಗಳೊಡನೆ ಮೇಳೈಸಿಕೊಳ್ಳಬೇಕಾಗಿದೆ.

ಶ್ರೀನಿವಾಸ ಜೋಕಟ್ಟೆ
ಜೋಕಟ್ಟೆ, ವಯಾ ಬಾಜ್ಪೆ ಪೋಸ್ಟ್, ಮಂಗಳೂರು ತಾಲ್ಲೂಕ್, ದಕ್ಷಿಣ ಕನ್ನಡ-೫೭೪ ೧೪೩

# ಈ ಮಸೂದ ಇಂದು ಬದುಕಿದ್ದರೆ...?

ಜಾಗತಿಕ ಭಯೋತ್ಪಾದನೆಯ ವಿರುದ್ಧ ಅಮೆರಿಕ ರಣಕಹಳೆ ಮೊಳಗಿಸಿರುವ ಈ ದಿನಗಳಲ್ಲಿ ಈತ ಬದುಕಿದ್ದರೆ ಭಾರತ ಉಪಖಂಡದ ಸ್ಥಿತಿ ಏನಾಗುತ್ತಿತ್ತು? ಆದರೆ ತಾಲಿಬಾನ್-ಪಾಕಿಸ್ತಾನ್-ಲಾದೆನ್ ತ್ರಿಕೂಟದ ವಿರುದ್ಧ ಅವಿಶ್ರಾಂತವಾಗಿ ಸೆಣಸಿದ ಅಹ್ಮದ ಶಹಾ ಮಸೂದ ಈಚಿನ ಒಂದು ರವಿವಾರ (ಸೆ. ೯) ಇದೇ ದುಷ್ಟಕೂಟದ ಸಂಚಿಗೆ ಬಲಿಯಾದ. ನ್ಯೂಯಾರ್ಕ್‌ನ ನೂರಂತಸ್ತಿನ ಕಟ್ಟಡಗಳು ನೆಲಸಮಗೊಳ್ಳುವ ಮುನ್ನ ಈ ಆಫಘನ್ ನಾಯಕನ ಸಾವು ಬಿನ್ ಲಾದೆನ್‌ಗೆ ತಂದಷ್ಟು ಖುಷಿಯನ್ನು ಇನ್ನಾರಿಗೂ ತಂದಿರಲಿಕ್ಕಿಲ್ಲ.

ಈ ಮಸೂದ ಅಂತಿಂಥವನಲ್ಲ. ತಾಲಿಬಾನ್ ಮತಾಂಧ ಭಯೋತ್ಪಾದಕರ ವಿರುದ್ಧ ತಿರುಗಿ ನಿಂತವನೀತ. ಇಡೀ ದೇಶ ಈ ಅಗ್ನಿಭಕ್ಷಕರ ಕೆನ್ನಾಲಿಗೆಗೆ ಆಹುತಿಯಾಗುತ್ತಿರುವಾಗ ಏಕಾಂಗಿಯಾಗಿ ನಿಂತು ಅವರನ್ನು ಹಿಮ್ಮೆಟ್ಟಿಸಿದ. ರಾಜಧಾನಿ ಕಾಬೂಲನ್ನು, ಕಂದಹಾರನ್ನು ವಶಪಡಿಸಿಕೊಳ್ಳಲು ಸಾಧ್ಯವಾಗಿರಲಿಕ್ಕಿಲ್ಲ. ಆದರೆ ಹಿಂದುಕುಶ್ ಪರ್ವತ ಶ್ರೇಣಿಯ ಉತ್ತರ ಭಾಗದ ಮೇಲೆ ಸಂಪೂರ್ಣ ಹಿಡಿತ ಸಾಧಿಸಿದ್ದ ಮಸೂದ್ ತಾಲಿಬಾನ್ ಹಾಗೂ ಪಾಕಿಸ್ತಾನದ ವಿಸ್ತರಣಾವಾದಕ್ಕೆ ಕಡಿವಾಣ ಹಾಕಿದ್ದ.

ಈತನನ್ನು ಮುಗಿಸಲು ಒಂದಲ್ಲ, ಎರಡಲ್ಲ ನೂರಾರು ಬಾರಿ ಹುನ್ನಾರ ನಡೆಯಿತು. ಎಲ್ಲದರಲ್ಲೂ ಪಾರಾದ. ಆದರೆ ಆ ಒಂದು ರವಿವಾರ ಯಾಮಾರಿಬಿಟ್ಟ. ಸಂದರ್ಶನ ಮಾಡಿಕೊಳ್ಳುವುದಾಗಿ ಒಂದಿಬ್ಬರು ಯುವಕರು ವಿಡಿಯೋ ಕ್ಯಾಮೆರಾ ಹಿಡಿದುಕೊಂಡು ಬಂದರು. ಇವರು ಬಿನ್ ಲಾದೆನ್ ಕಳಿಸಿದ ಮಾನವ ಬಾಂಬ್‌ಗಳೆಂದು ಮಸೂದ್‌ಗೆ ಗೊತ್ತಿರಲಿಲ್ಲ. ಪತ್ರಕರ್ತರೆಂದು ನಂಬಿ ಸಂದರ್ಶನಕ್ಕೆ ಸಮ್ಮತಿ ನೀಡಿದ. ವಿಡಿಯೋ ಕ್ಯಾಮೆರಾದಲ್ಲಿ ಬಾಂಬ್ ಅಡಗಿಸಿಟ್ಟ ಇವರು ಆಸ್ಫೋಟದಲ್ಲಿ ತಾವೂ ಸತ್ತು ಮಸೂದನನ್ನೂ ಮುಗಿಸಿದರು. ತೀವ್ರ ಗಾಯಗೊಂಡ ಮಸೂದ್ ಆಸ್ಪತ್ರೆಯಲ್ಲಿ ಕೊನೆಯುಸಿರೆಳೆದ.

ಆಫಘಾನಿಸ್ತಾನದಿಂದ ಸೋವಿಯತ್ ಸೇನೆ ವಾಪಸ್ಸಾದ ನಂತರ ಅಸ್ತಿತ್ವಕ್ಕೆ ಬಂದ ರಬ್ಬಾನಿ ನೇತೃತ್ವದ ಇಸ್ಲಾಮಿ ಸರ್ಕಾರದಲ್ಲಿ ರಕ್ಷಣಾ ಮಂತ್ರಿಯಾಗಿದ್ದ ಮಸೂದ್ ತಾಲಿಬಾನ್‌ಗಳಷ್ಟು ಉಗ್ರ ಮತಾಂಧನಲ್ಲ. ಆದರೆ ಆಫಘಾನಿಸ್ತಾನ ಸ್ವತಂತ್ರವಾಗಿರಬೇಕೆಂದು ಈತ ಬಯಸಿದ. ಇಡೀ ದೇಶವನ್ನು ನುಂಗಲು ಬಾಯಿತೆರೆದು ನಿಂತಿದ್ದ ಪಾಕಿಸ್ತಾನವನ್ನು ಕಂಡರೆ ಇವನಿಗಾಗುತ್ತಿರಲಿಲ್ಲ. ಅಂತಲೇ ಆಫಘನ್ ನಿರಾಶ್ರಿತರ ಮಕ್ಕಳಿಗಾಗಿ ನಿರ್ಮಿಸಲಾಗಿದ್ದ ಮದರಸಾಗಳಲ್ಲಿ ಕಲಿಯುತ್ತಿದ್ದ ಮಕ್ಕಳಲ್ಲಿ ಧಾರ್ಮಿಕ ಉನ್ಮಾದ ಕೆರಳಿಸಿದ ಪಾಕಿಸ್ತಾನ ಇವರನ್ನೇ ತಾಲಿಬಾನ್‌ಗಳೆಂದು ಕರೆದು ಮಸೂದನ ಮೇಲೆ ಛೂ ಬಿಟ್ಟಿತು.

ತಾಲಿಬಾನ್‌ಗಳ ಕೈ ಮೇಲಾದಾಗ ರಬ್ಬಾನಿ ಸರ್ಕಾರ ಕಾಬೂಲನ್ನು ಖಾಲಿ ಮಾಡಿತು. ಈ ಸರ್ಕಾರಕ್ಕೆ ಭಾರತವೂ ಸೇರಿದಂತೆ ಹಲವಾರು ದೇಶಗಳು ಹಾಗೂ ವಿಶ್ವ ಸಂಸ್ಥೆ ಮುನ್ನಣೆ ನೀಡಿದ್ದರೂ ಪಾಕಿಸ್ತಾನ ಮಾತ್ರ ತಾಲಿಬಾನ್ ಸರ್ಕಾರಕ್ಕೆ ಮಾನ್ಯತೆ ನೀಡಿತು. ತಾಲಿಬಾನ್ ಮತಾಂಧರು ಧರ್ಮದ ಹೆಸರಿನಲ್ಲಿ ದೇಶವನ್ನೇ ಅಧೋಗತಿಗೆ ತಂದು ನಿಲ್ಲಿಸಿದರು. ಆದರೆ ಸಿ ಐ ಎ ಗರಡಿಯಲ್ಲಿ ತಯಾರಾದ ಅರೇಬಿಯಾದ ಕೋಟ್ಯಾಧಿಪತಿ ಬಿನ್ ಲಾದೆನ್ ಈ ಸರ್ಕಾರಕ್ಕೆ ಆಸರೆಯಾಗಿ ನಿಂತ. ಪಾಕಿಸ್ತಾನ ಸರ್ಕಾರ ಮೂಗುದಾರ ಹಿಡಿಯಿತು.

ಆಫಘಾನಿಸ್ತಾನದಲ್ಲಿ ಕಾಲುಚಾಚಿ ಆ ಮೂಲಕ ಭಾರತ ಉಪಖಂಡದಲ್ಲಿ ಪ್ರಾಬಲ್ಯ ಸಾಧಿಸಲು ಮಸಲತ್ತು ನಡೆಸಿದ ಪಾಕಿಸ್ತಾನಕ್ಕೆ ತಾಲಿಬಾನ್ ಅವಿವೇಕಿಗಳು ಅವಕಾಶ ನೀಡಿದರು. ಇದೇ ಸಮಯದಲ್ಲಿ ಸೌದಿ ಅರೇಬಿಯಾದಿಂದ ಉಚ್ಚಾಟಿಸಲ್ಪಟ್ಟು ಆಫಘಾನಿಸ್ತಾನ್‌ಗೆ ಬಂದು ತಳವೂರಿದ ಬಿನ್ ಲಾದೆನ್ ತನ್ನ ಜಾಲವನ್ನು ಜಗತ್ತಿನ ಎಲ್ಲೆಡೆ ವಿಸ್ತರಿಸಲು ಸನ್ನಾಹ ನಡೆಸಿದ. ಈ ಪಾಕ್-ತಾಲಿಬಾನ್-ಲಾದೆನ್ ದುಷ್ಕೂಟವನ್ನು ನಿರಂತರವಾಗಿ ವಿರೋಧಿಸುತ್ತಾ ಬಂದ ಮಸೂದ್ ಇವರಿಗೆಲ್ಲ ಸಿಂಹಸ್ವಪ್ನವಾದ.

ಮಸೂದ ಭಾರತದ ಆತ್ಮೀಯ ಮಿತ್ರನಾಗಿದ್ದ. ಅಂತಲೇ ಈತನ ಸರ್ಕಾರಕ್ಕೆ ಭಾರತ ಮಾನ್ಯತೆ ನೀಡಿತ್ತು. ಈತನ ಮುಜಾಹಿದಿನ್ ಸೇನೆಗಾಗಿ ರಹಸ್ಯವಾಗಿ ೨೦ ಹಾಸಿಗೆಗಳ ಆಸ್ಪತ್ರೆಯನ್ನು ಭಾರತ - ಆಫಘಾನ್-ಪಾಕಿಸ್ತಾನದ ಗಡಿಯಲ್ಲಿರುವ ಫರ್ಕೂರ ಎಂಬಲ್ಲಿ ನಿರ್ಮಿಸಿಕೊಟ್ಟಿತ್ತು. ಈ ಆಸ್ಪತ್ರೆಯನ್ನು ಕೂಡ ಭಾರತದ ಸೇನೆಯೇ ನಡೆಸುತ್ತಿತ್ತು. ೨೫ಕ್ಕೂ ಹೆಚ್ಚು ಭಾರತೀಯ ವೈದ್ಯರೇ ಇಲ್ಲಿ ಸೇವೆ ಸಲ್ಲಿಸುತ್ತಿದ್ದರು. ತಾಲಿಬಾನ್ ಜೊತೆ ನಡೆಸುತ್ತಿರುವ ಯುದ್ಧದಲ್ಲಿ ಗಾಯಗೊಂಡ ಮಸೂದನ ಪರ ಇದ್ದ ಸೈನಿಕರು ಈ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯುತ್ತಿದ್ದರು.

ಉಪಖಂಡದಲ್ಲಿ ಪ್ರಾಬಲ್ಯ ಸಾಧಿಸಲು ಹವಣಿಸುತ್ತಿದ್ದ ಪಾಕಿಸ್ತಾನ, ತಾಲಿಬಾನ್, ಲಾದೆನ್ ತ್ರಿಕೂಟದ ವಿರುದ್ಧ ಹೋರಾಡಲು ಭಾರತ, ರಷ್ಯಾ, ಇರಾನ್‌ಗಳು ಮಸೂದ್‌ಗೆ ಬೆಂಬಲ ನೀಡುತ್ತಾ ಬಂದಿದ್ದವು. ಪಾಕಿಸ್ತಾನ ಮತ್ತು ತಾಲಿಬಾನ್ ಆಫಘಾನಿಸ್ತಾನದ ಅಂತರಿಕ ಸಮಸ್ಯೆಯ ಸುಳಿಗೆ ಸಿಲುಕಿದರೆ, ಜಮ್ಮು ಕಾಶ್ಮೀರದಲ್ಲಿ ಗಡಿಯಾಚೆಯ ಭಯೋತ್ಪಾದನೆಯ ಒತ್ತಡ ಕಡಿಮೆಯಾಗುತ್ತದೆ ಎಂಬ ಉದ್ದೇಶದಿಂದ ರಬ್ಬಾನಿ ಸರ್ಕಾರಕ್ಕೆ ಬೆಂಬಲ ನೀಡುತ್ತಾ ಬಂದ ಭಾರತಕ್ಕೆ ಮಸೂದ್ ಸಾವಿನಿಂದ ತೀವ್ರ ಹಿನ್ನಡೆ ಉಂಟಾಗಿದೆ.

೧೯೫೩ರಲ್ಲಿ ಆಫಘಾನಿಸ್ತಾನದ ಪಂಜಾಶೇರ್‌ನಲ್ಲಿ ಜನಿಸಿದ್ದ ಮಸೂದನನ್ನು 'ಪಂಜಾಶೇರ್‌ನ ಸಿಂಹ' ಎಂದೇ ಜನ ಕರೆಯುತ್ತಿದ್ದರು. ಸೇನೆಯ ಹಿನ್ನೆಲೆಯಿಂದ ಬಂದರೂ ಜನಸಮೂಹದ ಪ್ರೀತಿಯ ನಾಯಕನಾಗಿದ್ದ ಮಸೂದ ತಾಲಿಬಾನ್ ಮಾದರಿ ಇಸ್ಲಾಂ ಮತಾಂಧತೆಯ ಪ್ರಬಲ ವಿರೋಧಿಯಾಗಿದ್ದ. ಮುಸ್ಲಿಂ ಮಹಿಳೆಯರು ಬುರ್ಖಾ ಧರಿಸಬೇಕು, ಪುರುಷರು ಗಡ್ಡ ಬೋಳಿಸಬಾರದು ಎಂಬಂಥ ವಾದಗಳನ್ನು ಈ ಮಸೂದ ಪ್ರಬಲವಾಗಿ ವಿರೋಧಿಸುತ್ತಾ ಬಂದಿದ್ದ. ಅಂತಲೇ ದೇಶದ ಉತ್ತರ ಭಾಗದ ತಾಲಿಬಾನ್ ವಿರೋಧಿ ಶಕ್ತಿಗಳನ್ನೆಲ್ಲ ಒಂದುಗೂಡಿಸಿ ಧಾರ್ಮಿಕ ಉನ್ಮಾದಕ್ಕೆ ತಡೆಗೋಡೆಯಾಗಿ ನಿಂತಿದ್ದ.

ತಾಲಿಬಾನ್ ಪಡೆಗಳೊಂದಿಗೆ ಹೋರಾಡಲು ಭಾರತ ಮಾತ್ರವಲ್ಲ ಪಾಕಿಸ್ತಾನ, ಇರಾನ್ ಹಾಗೂ ರಷ್ಯಾದಿಂದಲೂ ಶಸ್ತ್ರಾಸ್ತ್ರಗಳ ನೆರವನ್ನು ಪಡೆಯುತ್ತಿದ್ದ ಮಸೂದ ತಾಲಿಬಾನ್ ವಿರುದ್ಧ ಸಂಘರ್ಷಕ್ಕಾಗಿ ಇಪ್ಪತ್ತು ಸಾವಿರ ಜನರ ಪ್ರಬಲ ಸೇನಾಪಡೆಯನ್ನು ಕಟ್ಟಲು ಭಾರತ ಮುಂತಾದ ಮಿತ್ರ ರಾಷ್ಟ್ರಗಳ ನೆರವನ್ನು ಕೋರಿದ್ದ. ಪಾಕಿಸ್ತಾನದ ಬೇಹುಗಾರಿಕೆ ಸಂಸ್ಥೆ ಐ.ಎಸ್.ಐ., ಒಸ್ಮಾ ಲಾದೆನ್ ಹರಿಸಿದ ಹಣದ ಹೊಳೆ, ಹಾಗೂ ತಾಲಿಬಾನ್ ಮತಾಂಧರ ದುರಾಕ್ರಮಣವನ್ನು ಎದುರಿಸುವ ಶಕ್ತಿ ಸಾಲದೆ ಮಸೂದ ಇತ್ತೀಚೆಗೆ ತುಂಬಾ ಸುಸ್ತಾಗಿದ್ದ.

ಈಗ ಮಸೂದ ಇದ್ದಿದ್ದರೆ ಆತ ಬದಲಾದ ರಾಜಕೀಯ ಸನ್ನಿವೇಶದಲ್ಲಿ ಪ್ರಮುಖ ಪಾತ್ರ ವಹಿಸುತ್ತಿದ್ದ. ಬಿನ್ ಲಾದೆನ್ ವಿರುದ್ಧ ಹೋರಾಡಲು ಅಮೆರಿಕ ಆತನಿಗೆ ಸಕಲ ನೆರವನ್ನು ನೀಡುತ್ತಿತ್ತು. ಅಮೆರಿಕ ತಾಲಿಬಾನ್‌ಗಳ ಮೇಲೆ ವೈಮಾನಿಕ ದಾಳಿ ನಡೆಸಿದರೆ ಈ ಮಸೂದ ಆಫಘಾನ್ ಗುಡ್ಡಗಾಡಿನಲ್ಲಿ ನೇರವಾಗಿ ಈ ಭಯೋತ್ಪಾದಕರನ್ನು ಎದುರಿಸಿ ಹಣ್ಣುಗಾಯಿ ಮಾಡುತ್ತಿದ್ದ.

ಆದರೆ ಇಂಥ ಮಸೂದನನ್ನು ತಾಲಿಬಾನ್-ಲಾದೆನ್ ಪಾಕಿಸ್ತಾನ ದುಷ್ಟಕೂಟ ವಂಚನೆಯಿಂದ ಹೊಸಕಿಹಾಕಿವೆ. ಆದರೆ ಆತನ ಅನುಯಾಯಿಗಳು ಇಂದಿಗೂ ತಾಲಿಬಾನ್ ಪಡೆಗಳ ವಿರುದ್ಧ ಸೆಣೆಸುತ್ತಲೇ ಇದ್ದಾರೆ. ಅದೇ ಈ ಯುದ್ಧದಲ್ಲಿ ನಿರ್ಣಾಯಕ ಅಂಶವಾಗಲಿದೆ.

**ಸನತ್ ಕುಮಾರ ಬೆಳಗಲಿ**
ಎಲ್. ಎಫ್. ೧೭/೬, ಬಿಡಿಎ ಫ್ಲಾಟ್ಸ್, ಬಿ.ಟಿ.ಎಂ. ಲೇಔಟ್
ಬೆಂಗಳೂರು-೫೬೦ ೦೭೬



# ನೀಲಾ ಕಾವ್ಯಾತ್ಮಕ ಅನುಭವ



**ಕ**ನ್ನಡ ಚಿತ್ರರಂಗದಲ್ಲಿ ನಿರ್ದೇಶಕ ನಾಗಾಭರಣರಿಗೆ ವಿಶಿಷ್ಟ ಸ್ಥಾನ ದೊರಕಿರುವುದು ಅವರ ಸೃಜನಶೀಲತೆ ಹಾಗೂ ಪ್ರತಿಭೆಗೆ ಸಂದಿರುವ ಪುರಸ್ಕಾರವೆಂದೇ ಹೇಳಬಹುದು. ಸದಾ ಹೊಸತನ್ನು ಬಯಸುವ ನಾಗಾಭರಣ, ತಮ್ಮ ದೈನಿಕ ಧಾರಾವಾಹಿ 'ಸಂಕ್ರಾಂತಿ'ಯ ನಂತರ 'ನೀಲಾ' ಎಂಬ ಚಲನಚಿತ್ರವನ್ನು ಸಿದ್ಧಪಡಿಸಿದ್ದಾರೆ. ಈಗಾಗಲೇ ಈ ಚಿತ್ರವು ಬೆಂಗಳೂರಿನಲ್ಲಿ ನಡೆಯಲಿದ್ದ ಅಂತರರಾಷ್ಟ್ರೀಯ ಚಲನಚಿತ್ರೋತ್ಸವಕ್ಕೆ ಆಯ್ಕೆಯಾಗಿತ್ತು ಎಂಬುದು ಹೆಮ್ಮೆಯ ಸಂಗತಿ.

ಮೈಸೂರಿನ ಭಾರತ್ ಕ್ಯಾನ್ಸರ್ ಆಸ್ಪತ್ರೆಯ ಸಂಸ್ಥಾಪಕರಾದ ಡಾ॥ ಅಜಯ್‌ಕುಮಾರ್ ಅವರು ನಿರ್ಮಿಸಿರುವ ನೀಲಾ ಚಿತ್ರದ ಪ್ರಧಾನ ಕಥೆಗಾರರು ಸಂಕ್ರಾಂತಿ ಖ್ಯಾತಿಯ ಕೋಟಿಗಾನಹಳ್ಳಿ ರಾಮಯ್ಯನವರು. ಸಾಮಾನ್ಯರಲ್ಲಿ ಕ್ಯಾನ್ಸರ್ ರೋಗದ ಬಗ್ಗೆ ಇರುವ ಭಯ, ಭೀತಿ, ಅಪನಂಬಿಕೆಗಳನ್ನು ಹೋಗಲಾಡಿಸುವ ಉದ್ದೇಶ ಹೊಂದಿರುವ ಈ ಚಿತ್ರಕ್ಕೆ ಉತ್ತರ ಕರ್ನಾಟಕದ ಅಲೆಮಾರಿ ಜನಾಂಗವಾದ ನೀಲಗಾರರ ಜೀವನ ಶೈಲಿಯನ್ನು ಆಧರಿಸಿ ಕಥೆ ರಚಿಸಲಾಗಿದೆ. ನೀಲಗಾರ ಕುಟುಂಬದಲ್ಲಿ ಜನಿಸಿ ಉತ್ತಮ ಗಾಯಕಿಯಾಗಿ ಹೊರಹೊಮ್ಮುವ ಹುಡುಗಿಯೊಬ್ಬಳು ಕ್ಯಾನ್ಸರ್ ರೋಗಕ್ಕೆ ತುತ್ತಾಗಿ, ಹಾಡಲಾರದೆ, ಪುನಃ ಜೀವ ಪಡೆಯುವ ಸುತ್ತ ಕಥೆ ಹಮ್ಮಿಕೊಳ್ಳುತ್ತದೆ. ಕನ್ನಡ ಚಿತ್ರರಂಗದ ವಾರಸುದಾರರಿಂದ, ದಿಗ್ಗಜರಿಂದ ನಿರ್ಲಕ್ಷ್ಯಕ್ಕೊಳಗಾಗಿರುವ ಸಂಗೀತ ಸಾಮ್ರಾಟ್ ವಿಜಯಭಾಸ್ಕರ್ ಸಂಗೀತ ನೀಡಿರುವುದು ಈ ಚಿತ್ರದ ವೈಶಿಷ್ಟ್ಯಗಳಲ್ಲೊಂದು. ಜನಪದ-ಆಧುನಿಕ ಸಂಗೀತಗಳ ಮಿಶ್ರಣವಿರುವ 'ನೀಲಾ' ಚಿತ್ರದ ಸಂಗೀತ ಒಂದು ಹೊಸ ಅನುಭವ ನೀಡುತ್ತದೆ. ಒಟ್ಟು ಒಂಬತ್ತು ಹಾಡುಗಳಿದ್ದು ಎರಡು ಹಾಡುಗಳು ಪುನರಾವರ್ತನೆಯಾಗುತ್ತವೆ.

ಇದು ಈ ಚಿತ್ರದ ಹಾಡುಗಳ ಬಗೆಗಿನ ವಿಮರ್ಶಾತ್ಮಕ ಇಣುಕು ನೋಟ.

ಕೋಟಿಗಾನಹಳ್ಳಿ ರಾಮಯ್ಯ ವಿರಚಿತ "ಆ ಮೇರು ಈ ಮೇರು ಆಸೆಯ ಹೂ ತೇರು,

ಎಳೆ ಎಳೆಯೋ ಬಸವಣ್ಣ ತುಂಬೈತೆ ಕಣ್ಣ ಎಷ್ಟೊಂದು ಬಣ್ಣ" ಎಂಬ ಹಾಡಿನಲ್ಲಿ ತವರು ಮನೆಗೆ ಹೊರಟಿರುವ ಹೆಣ್ಣು ಮಗಳ ಮನದಾಳದಲ್ಲಿ ಸುಪ್ತವಾಗಿರುವ ಆತಂಕ, ಆಸೆ, ಆಕಾಂಕ್ಷೆ ಹಾಗೂ ಭಾವನೆಗಳನ್ನು ಕವಿ ಸುಂದರವಾಗಿ ಚಿತ್ರಿಸಿದ್ದಾರೆ. ಇದೇ ಹಾಡಿನ - "ಆ ಊರು ಈ ಊರು ತಿರುಗಿದರೂ ಏಸೂರು ಎಲ್ಲೈತೋ ನಮ್ಮೂರು ಸಿಗದಲ್ಲ ತವರೂರು" ಎಂಬ ಸಾಲುಗಳಲ್ಲಿ ತವರು ಮನೆಯನ್ನು ಗಾಢವಾಗಿ ಪ್ರೀತಿಸುವ ಹೆಣ್ಣು ಮಗಳ ಹುಡುಕಾಟ ಅಡಗಿದ್ದರೆ "ಊರೂರು ತವರೂರು ಎಲ್ಲಾರು ನಮ್ಮೋರು" ಎಂಬಲ್ಲಿ ಕವಿ ಸಾಮುದಾಯಿಕ ಚಿಂತನೆಯನ್ನು ವ್ಯಕ್ತಪಡಿಸಿದ್ದಾರೆ.

ಊರಿನ ಹೆಣ್ಣುಮಗಳನ್ನು ಇಡೀ ಗ್ರಾಮವೇ ಮನೆಯ ಮಗಳಂತೆ ಪರಿಗಣಿಸುವ ಸಂಸ್ಕೃತಿ ಈ ಹಾಡಿನಲ್ಲಿ ವ್ಯಕ್ತವಾಗುತ್ತದೆ. ಈ ಸಂಸ್ಕೃತಿ ಇಂದು ನಶಿಸಿ ಹೋಗುತ್ತಿದ್ದರೂ ಎಲ್ಲೋ ಒಂದು ಕಡೆ ಅದರ ಸುಳಿವು ಕಾಣಬಹುದೆಂಬುದೆ ಕವಿಯ ಆಶಯವಾಗಿದೆ. ವಾಣಿ ಜಯರಾಂ ಮತ್ತು ರಾಜೇಶ್ ಈ ಹಾಡನ್ನು ಸುಶ್ರಾವ್ಯವಾಗಿ ಹಾಡಿದ್ದಾರೆ.

ಲಕ್ಷ್ಮೀಪತಿ ಕೋಲಾರ ಅವರು "ಕಣ್ಣನು ಮುಚ್ಚಬಹುದು ಚಂದಮಾಮ, ಕನಸನು ಬಚ್ಚಿಡಬಹುದೇ ಚಂದಮಾಮ" ಎಂಬ . ಗೀತೆಯಲ್ಲಿ ಮಾನವನ ಜೀವನದಲ್ಲಿ ಕನಸುಗಳ ಮಹತ್ವವನ್ನು ಕಾವ್ಯಮಯವಾಗಿ ವ್ಯಕ್ತಪಡಿಸಿದ್ದಾರೆ. ಇದೇ ಹಾಡಿನ,

"ಗೆದ್ದೇ ಗೆಲ್ಲುವೆ ಎಲ್ಲಾ ಹೂ ನಗೆಯಲ್ಲಿ  
ಲೋಕವೇ ಅಡಗುವುದಿಲ್ಲವೇ ಇಬ್ಬನಿಯಲ್ಲಿ  
ಬೊಗಸೆ ಪ್ರೀತಿಯೆ ಕಡಲು  
ಸಾಕು ನಗುತ ಬಾಳಲು" ಎಂಬ ನುಡಿಯಲ್ಲಿ ಲಕ್ಷ್ಮೀಪತಿಯವರು ಜೀವನದ ಪ್ರೀತಿ ವಾತ್ಸಲ್ಯಗಳ ಮೌಲ್ಯಗಳನ್ನು ಎತ್ತಿಹಿಡಿದಿದ್ದಾರೆ. ಸಾಧಿಸುವ ಛಲ, ವಿಶಾಲ ಹೃದಯ, ಸಮಷ್ಟಿ ವಾತ್ಸಲ್ಯ ಇವುಗಳಿದ್ದರೆ ಲೋಕವನ್ನೇ ಗೆಲ್ಲಬಹುದೆಂಬ ಕವಿಯ ಆಶಯ ಇಲ್ಲಿ ವ್ಯಕ್ತವಾಗಿದೆ. ಮುಂದಿನ ಸಾಲುಗಳಲ್ಲಿ -

"ಒದ್ದೆ ಕಣ್ಣಲು ಕೋಟಿ ಕಾಮನ ಬಿಲ್ಲು  
ಗೀತೆಯೆ ಮಿಡಿಯುವುದಿಲ್ಲವೇ ಚಿಲಿಪಿಲಿಯಲ್ಲೂ  
ಉದುರಿ ಹೋದರೂ ತರಗೆಲೆ  
ನಾಳೆ ಮೂಡದೆ ಚಿಗುರೆಲೆ" ಎಂದು ಹೇಳುತ್ತಾ ಭವಿಷ್ಯದತ್ತ ಆಶಾಭಾವನೆಯಿಂದ ನೋಡುವ ಒಂದು ದೂರದೃಷ್ಟಿ ಅಡಗಿದೆ. ದುಃಖತಪ್ತ ಕಣ್ಣಲ್ಲಿ ಕಾಮನಬಿಲ್ಲಿನ ರಂಗುಗಳನ್ನು ಕಾಣುವ ಕವಿಗೆ ಭವಿಷ್ಯದ ಬಾಗಿಲು ಎಂದಿಗೂ ಆಶಾದಾಯಕವಾಗಿರುತ್ತದೆಂಬ ಭಾವನೆ ಇರುವುದು ಕೊನೆಯ ಸಾಲುಗಳಲ್ಲಿ ವ್ಯಕ್ತವಾಗಿದೆ. ಯಥಾಸ್ಥಿತಿವಾದಿಗಳಿಗೂ, ನಿರಾಶಾವಾದಿಗಳಿಗೂ ಈ ಸಾಲುಗಳು ಉತ್ಸಾಹ ಭರಿಸುವಂತಿದೆ. ವಾಣಿ ಜಯರಾಂ ಅವರು ಈ ಹಾಡನ್ನು ಸುಶ್ರಾವ್ಯವಾಗಿ ಹಾಡಿದ್ದಾರಾದರೂ ಇನ್ನೂ ಸ್ವಲ್ಪ ಶ್ರಮ ವಹಿಸಬಹುದಿತ್ತು ಎನಿಸುತ್ತದೆ.

ಈ ಚಿತ್ರದ ಕಥಾವಸ್ತುವನ್ನು ಕಾವ್ಯಾತ್ಮಕವಾಗಿ ಭಾವನಾತ್ಮಕವಾಗಿ "ಎದೆಯಾಗ ಎಕತಾರಿ ನರನರವೂ ತಿನ್ನೂರಿ" ಎಂಬ ಗೀತೆಯಲ್ಲಿ ಸೆರೆಹಿಡಿಯಲಾಗಿದೆ.

"ಎದೆಯಾಗ ಎಕತಾರಿ ನರನರವೂ ತಿನ್ನೂರಿ  
ಕಲ್ಲರಳಿ ಹೂವಾಗಿ ಚಂದುಳ್ಳಿ ಪದವಾಗಿ  
ಒಲಿದೊಲಿದು ಓ ಮಾಯೆ ಹಾಡಾಗು ಬಾ ತಾಯೆ"

ಎಂಬ ಆರಂಭದ ಸಾಲುಗಳಲ್ಲಿ ಮನದಾಳದ ವೇದನೆಯನ್ನು "ಎಕತಾರಿ" "ತಿನ್ನೂರಿ" ಎಂಬ ಜನಪದ ಸಂಗೀತ ವಾದ್ಯಗಳೊಡನೆ ಸಮೀಕರಿಸುವ ಕವಿ ಲಕ್ಷ್ಮೀಪತಿಯವರು ಒಬ್ಬ ಗಾಯಕಿ ತನ್ನ ಗಾಯನ ಸಾಮರ್ಥ್ಯವನ್ನು ಕಳೆದುಕೊಂಡಾಗ ಉಂಟಾಗುವ ತಳಮಳವನ್ನು ಹೃದಯ ವೇದನೆಯನ್ನು ಸಂವೇದನಾತ್ಮಕವಾಗಿ ವ್ಯಕ್ತಪಡಿಸಿದ್ದಾರೆ.

"ಕಣ್ಣಾವ್ರ ನಾಳೆಗೆ ದನಿಯಾಗು ನೋವಿಗೆ  
ಮನಮನವು ಚಿಗುರುವ ಅರಿವಿದುವೆ ಓ ಕಂದ  
ಪದಪದವು ಹಾಡಿರುವ ಇದನಂಬಿ ಬಾಳವ್ವ" ಎಂಬ

ಮುಂ. ಪುಟಕ್ಕೆ

ನಾ. ದಿವಾಕರ್

# ಬೆನಗಲ್‌ರ ಕೂಸು 'ಜುಬೇದಾ'ಳಿಗೆ ಪ್ರಶಸ್ತಿಯ ಮೆರಗು



ಇಡೀ ಭಾರತೀಯ ಚಿತ್ರರಂಗವೇ ಹುಬ್ಬೇರಿಸಿತ್ತು– ಎಪ್ಪತ್ತರ ದಶಕದ ಆರಂಭದಲ್ಲಿ ಭಾರತೀಯ ಚಿತ್ರರಂಗದಲ್ಲಿ ಕಲಾತ್ಮಕ ಚಿತ್ರಗಳ ನಿರ್ಮಾಣಕ್ಕೆ ಹೊಸ ತಿರುವು ನೀಡಿದ ಯಶಸ್ವಿ ನಿರ್ದೇಶಕ ಶ್ಯಾಮ ಬೆನಗಲ್ ಇತ್ತೀಚೆಗೆ 'ಜುಬೇದಾ' ಚಿತ್ರವನ್ನು ನಿರ್ದೇಶಿಸಲು ಹೊರಟಾಗ. ಕಾರಣವಿಷ್ಟೆ - ಬೆನಗಲ್ ತಮ್ಮ ಜುಬೇದಾ ಚಿತ್ರಕ್ಕೆ ನಾಯಕನನ್ನಾಗಿ ಆಯ್ಕೆ ಮಾಡಿಕೊಂಡಿದ್ದು ಮನೋಜ್ ಬಾಜಪೇಯಿ ಎಂಬ ಕಮರ್ಷಿಯಲ್ ನಟನನ್ನು! ಅದಕ್ಕಿಂತ ಹೆಚ್ಚಾಗಿ ನಾಯಕಿಯಾದದ್ದು ಥಳುಕು ಬಳುಕಿನ ನಟಿ ಕರೀಷ್ಮಾ ಕಪೂರ್ !! ನೋಡಿದರೆ ಸಂಗೀತ ಎ. ಆರ್. ರೆಹಮಾನ್‌ರದ್ದು! ಅದೇನೋ 'ರೇಖಾ' ಎಂಬ ಮೆರುಗಿನ ಪ್ರಬುದ್ಧ ನಟಿ ಬೇರೆ... ಬೆನಗಲ್‌ರ 'ಜುಬೇದಾ' ಕಲಾತ್ಮಕ ಚಿತ್ರಲೋಕಕ್ಕೆ ಹೊಸದೊಂದು ಆಯಾಮವನ್ನು ನೀಡುತ್ತದೆಂದು ಎಲ್ಲರೂ ನಿರೀಕ್ಷಿಸಿದ್ದರು. ನಿರೀಕ್ಷೆ ಹುಸಿಯಾಗಲಿಲ್ಲ. 'ಜುಬೇದಾ' ಒಂದು ಉತ್ತಮ ಚಿತ್ರವಾಗಿ ಯಶಸ್ವಿಯಾಯಿತು. ಎಲ್ಲರ ಮೆಚ್ಚುಗೆ ಗಳಿಸಿತು. ಸಹಜವಾಗಿಯೇ ಪ್ರಶಸ್ತಿಯು ಅದನ್ನರಸಿಕೊಂಡು ಬಂತು. ಭಾರೀ ವಿವಾದಕ್ಕೆಡೆ ಮಾಡಿದ ೪೮ನೇ ರಾಷ್ಟ್ರೀಯ ಚಲನಚಿತ್ರ ಪ್ರಶಸ್ತಿ ಪ್ರಕಟಣೆಯಲ್ಲಿ, ಶ್ಯಾಮ್ ಬೆನಗಲ್‌ರ 'ಜುಬೇದಾ' ಪ್ರಾದೇಶಿಕ ಚಿತ್ರ ವಿಭಾಗದಲ್ಲಿ ಅತ್ಯುತ್ತಮ ಹಿಂದಿ ಚಿತ್ರ ಎಂಬ ಪ್ರಶಸ್ತಿಯನ್ನು ತನ್ನದಾಗಿಸಿಕೊಂಡಿದೆ.

೧೯೬೯ರ ಸಂದರ್ಭವದು. ಶ್ಯಾಮ್ ಬೆನಗಲ್‌ರಿಗೆ ಚಿತ್ರವೊಂದನ್ನು ನಿರ್ದೇಶಿಸುವ ಹಂಬಲ. ಅದಕ್ಕಾಗಿ ಹಗಲಿರುಳು ಶ್ರಮ. ನಿಜಾಮರ ಕಾಲದ ಹೈದರಾಬಾದ್ ಸಂಸ್ಥಾನದಲ್ಲಿ ಜಮೀನ್ದಾರರು ದಲಿತ ವರ್ಗದ ಮೇಲೆ ನಡೆಸುತ್ತಿದ್ದ ದೌರ್ಜನ್ಯವನ್ನು ಕಥಾವಸ್ತುವಾಗುಳ್ಳ ಚಿತ್ರಕತೆಯೊಂದನ್ನು ಸಿದ್ಧಪಡಿಸಿಕೊಂಡ ಬೆನಗಲ್‌ರು ನಿರ್ಮಾಪಕರ ಮನೆ ಮನೆ ಅಲೆದರು. ಆದರೆ ಹೊಸ ನಿರ್ದೇಶಕನಿಗೆ ಅವಕಾಶ ನೀಡಿ, ತಮ್ಮ ಅದೃಷ್ಟವನ್ನು ಪರೀಕ್ಷಿಸಿಕೊಳ್ಳಲು ಯಾವ ನಿರ್ಮಾಪಕನೂ ತಯಾರಿರಲಿಲ್ಲ. ಆರು ವರ್ಷಗಳ ಕಾಲ ಅದೇ ಕತೆಯನ್ನು ಹಿಡಿದುಕೊಂಡು ಓಡಾಡಿದ ಬೆನಗಲ್‌ರ ಶ್ರಮ ವ್ಯರ್ಥವಾಗಲಿಲ್ಲ. ಕೊನೆಗೂ 'ಬ್ಲೇಜ್ ಫಿಲಂ ಎಂಟರ್ ಪ್ರೈಸಸ್ ಲಿಮಿಟೆಡ್'ಎಂಬ ಜಾಹೀರಾತು ನಿರ್ಮಾಣದ ಸಂಸ್ಥೆ ಬೆನಗಲ್‌ರ ನಿರ್ದೇಶನದಲ್ಲಿ ಅವರ ಕಥೆಯನ್ನು ಸಿನಿಮಾವನ್ನಾಗಿಸಲು ಮುಂದಾಯಿತು. ಬೆನಗಲ್ ತಮ್ಮ ಕನಸಿನ ಕೂಸನ್ನು ಕ್ಯಾಮರದೆದುರು ತರಲು ಪಟ್ಟ ಶ್ರಮ, ನೆನಪಿನಲ್ಲಿ 'ಅಂಕುರ್' ಎಂಬ ಹೆಸರಿನಲ್ಲಿ ಸಿನಿಮಾವಾಯಿತು. ೧೯೭೪ರಲ್ಲಿ ಬೆನಗಲ್‌ರ 'ಅಂಕುರ್' ಬಿಡುಗಡೆಯಾಗಿ ಅಪಾರವಾದ ಯಶಸ್ಸು ಗಳಿಸಿತು; ಬಾಕ್ಸಾಫೀಸಿನಲ್ಲೂ ವಿಜಯಿಯಾಯಿತು; ಎಲ್ಲದಕ್ಕಿಂತ

ಕೆ. ಗಣೇಶ ಕೋಡೂರು

ಮುಖ್ಯವಾಗಿ ಕಲಾತ್ಮಕ ಚಿತ್ರಗಳಿಗೆ ಹೊಸ ಪ್ರೇಕ್ಷಕ ವರ್ಗವನ್ನು ಹುಟ್ಟುಹಾಕಿತು. ಅಂಕುರ್‌ನ ಯಶಸ್ಸಿನೊಂದಿಗೆ, ಭಾರತೀಯ ಸಿನಿಮಾರಂಗದಲ್ಲಿ 'ಶ್ಯಾಮ್ ಬೆನಗಲ್' ಎಂಬ ಹೊಸ ಪ್ರತಿಭೆಯೊಂದು ಅಂಕುರಿಸಿತು. ಮೂರು ರಾಷ್ಟ್ರೀಯ ಪುರಸ್ಕಾರಗಳೊಂದಿಗೆ ಒಟ್ಟು ೪೩ ಪ್ರಶಸ್ತಿಗಳನ್ನು ಗಳಿಸಿದ ಬೆನಗಲ್‌ರ 'ಅಂಕುರ್' ಭಾರತೀಯ ಕಲಾತ್ಮಕ ಚಿತ್ರಲೋಕಕ್ಕೆ ಹೊಸ ಭಾಷ್ಯ ಬರೆಯಿತು.

ಅಂಕುರ್ ಯಶಸ್ಸಿನ ನಂತರ, ಬೆನಗಲ್ ಭಾರತೀಯ ಸಿನಿಮಾ ರಂಗದ ಪ್ರಸಿದ್ಧ ಚಿತ್ರ ನಿರ್ದೇಶಕರಾಗಿ ಬೆಳಕಿಗೆ ಬಂದರು. ಒಂದರ ಹಿಂದೆ ಒಂದರಂತೆ ಬಂದ ಕಲಾತ್ಮಕ ಚಿತ್ರಗಳ ಯಶಸ್ಸು ಶ್ಯಾಮ್ ಬೆನಗಲ್‌ರನ್ನು ಕೀರ್ತಿಯ ಶಿಖರಕ್ಕೇರಿಸಿತ್ತು. ಮೂಲತಃ ಕನ್ನಡಿಗರಾದ ಶ್ಯಾಮ್ ಬೆನಗಲ್ ಹುಟ್ಟಿ ಬೆಳೆದದ್ದು ಹೈದರಾಬಾದಿನಲ್ಲಿ. ಆರು ಜನ ಹೆಣ್ಣು ಮಕ್ಕಳನ್ನು, ನಾಲ್ಕು ಗಂಡು ಮಕ್ಕಳನ್ನು ಹೊಂದಿದ್ದ ಸಾರಸ್ವತ್ ಕುಟುಂಬದಲ್ಲಿ ಶ್ಯಾಮ್ ಬೆನಗಲ್ ಒಬ್ಬರು. ಬೆನಗಲ್‌ರ ತಂದೆ ವೃತ್ತಿಯಲ್ಲಿ ಛಾಯಾಚಿತ್ರಗ್ರಾಹಕರಾಗಿದ್ದರು. ಸಾಹಿತ್ಯದಲ್ಲಿ ಅಪಾರವಾದ ಆಸಕ್ತಿ ಹೊಂದಿದ್ದ ಶ್ಯಾಮ್ ಬೆನಗಲ್ ಕೆಲಕಾಲ ಹೈದರಾಬಾದಿನಲ್ಲಿ ಶಿಕ್ಷಕರಾಗಿ ಸೇವೆ ಸಲ್ಲಿಸಿದರು. ಶಿಕ್ಷಕರಾಗಿದ್ದಾಗಲೂ ಶ್ಯಾಮ್ ಬೆನಗಲ್ ಅವರನ್ನು ತಂದೆಯವರ ಕ್ಯಾಮರಾ ಸೆಳೆಯುತ್ತಿತ್ತು; ಹೃದಯದೊಳಗೆಲ್ಲೋ ಸಿನಿಮಾದ ಆಕರ್ಷಣೆ ಹೆಚ್ಚುತ್ತಿತ್ತು. ಬೆನಗಲ್ ೨೨ನೇ ವಯಸ್ಸಿನವರಾಗುವ ಹೊತ್ತಿಗೆ, ಸಿನಿಮಾದ ಆಕರ್ಷಣೆ ಅವರನ್ನು ಮುಂಬೈಗೆ ಎಳೆದು ತಂದಿತು. ತಂದೆಯ ಕ್ಯಾಮರಾದೊಂದಿಗೆ ಹೈದರಾಬಾದ್ ಬಿಟ್ಟು ಮುಂಬೈಗೆ ಓಡಿಬಂದಾಗ, ಬೆನಗಲ್‌ರ ಜೇಬಿನಲ್ಲಿದ್ದುದ್ದು ಕೇವಲ ೫ ರೂಪಾಯಿ ! ಐದು ರೂಪಾಯಿ ಜೇಬಿನಲ್ಲಿರಿಸಿಕೊಂಡು, ಕ್ಯಾಮರವನ್ನು ಕೊರಳಿಗೆ ನೇತಾಡಿಸಿಕೊಂಡು ಕೆಲಸ ಹುಡುಕಲಾರಂಭಿಸಿದ ಬೆನಗಲ್‌ರಿಗೆ ಮೊದಲು ಕೆಲಸ ಕೊಟ್ಟಿದ್ದು 'ನ್ಯಾಶನಲ್ ಅಡ್ವರ್‌ಟೈಸಿಂಗ್ ಸರ್ವೀಸ್' ಎಂಬ ಜಾಹೀರಾತು ಸಂಸ್ಥೆ. ಜಾಹೀರಾತುಗಳಿಗೆ ಕೆಲಸ ಮಾಡುತ್ತಲೇ ಸಿನಿಮಾರಂಗಕ್ಕೆ ಹತ್ತಿರವಾದ ಬೆನಗಲ್ ತಮ್ಮ ಮೊದಲ ಚಿತ್ರವನ್ನು ನಿರ್ದೇಶಿಸಲು ಏಳೆಂಟು ವರ್ಷ ಕಾಯಬೇಕಾಯಿತು.

'ಅಂಕುರ್' ನಂತರ ಬೆನಗಲ್ ನಿರ್ದೇಶಿಸಿದ ಎರಡನೇ ಚಿತ್ರ 'ನಿಶಾಂತ್'. ಜಮೀನ್ದಾರರ ಕ್ರೌರ್ಯವನ್ನು ಸಹಿಸಲಾಗದೆ ಎಚ್ಚೆತ್ತ ದಲಿತರು, ಜಮೀನ್ದಾರರ ವಿರುದ್ಧವೇ ಬಂಡೇಳುವ ಕಥೆಯನ್ನು ಹೊಂದಿದ್ದ ನಿಶಾಂತ್ ಕೂಡ ಯಶಸ್ವಿ ಚಿತ್ರವಾಯಿತು. 'ಮಂಥನ್' ಬೆನಗಲ್‌ರ ಮತ್ತೊಂದು ವಿಶಿಷ್ಟ ಚಿತ್ರ. ಹಾಲಿನ ಸಹಕಾರಿ ಸಂಘಟನೆಗಳ ಮೂಲಕಥೆಯುಳ್ಳ ಮಂಥನ್‌ಗೆ ಸ್ಫೂರ್ತಿ ದೊರೆತದ್ದು 'ಅಮುಲ್' ಖ್ಯಾತಿಯ ಕುರಿಯನ್ ಅವರಿಂದ. ಸಹಕಾರಿ ಕ್ಷೀರ ಚಳುವಳಿಯ ಕಥೆಯುಳ್ಳ ಈ ಚಿತ್ರವನ್ನು ಗುಜರಾತಿನ ಐದು ಲಕ್ಷ ಕೃಷಿಕರಿಂದ ತಲಾ ಒಂದು ರೂಪಾಯಿಯಂತೆ ಹಣವನ್ನು ಸಂಗ್ರಹಿಸಿ, ಗುಜರಾತ್ ಕೋ ಆಪರೇಟಿವ್ ಮಿಲ್ಕ್ ಮಾರ್ಕೆಟಿಂಗ್ ಫೆಡರೇಶನ್ ನಿರ್ಮಿಸಿತು. ನಾಸಿರುದ್ದೀನ್ ಷಾ, ಗಿರೀಶ್ ಕಾರ್ನಾಡ್, ಸ್ಮಿತಾ ಪಾಟೀಲ್‌ರಂತಹ ಪ್ರಸಿದ್ಧ ನಟ-ನಟಿಯರು, ವನರಾಜ್ ಭಾಟೀಯಾರ ಸಂಗೀತ, ಗೋವಿಂದ ನಿಹಲಾನಿಯವರ ಕಣ್ಮನ ಸೆಳೆಯುವ ಛಾಯಾಗ್ರಹಣ, ಇವೆಲ್ಲಕ್ಕೂ ಕುಂದಣವಿರಿಸಿದಂತೆ ಬೆನಗಲ್‌ರ ಕಲಾತ್ಮಕ ನಿರ್ದೇಶನ.. ಮಂಥನ್ ಯಶಸ್ವಿಯಾಗದಿರಲು ಸಾಧ್ಯವೇ ?

ಶ್ಯಾಮ್ ಬೆನಗಲ್ ಹೈದರಾಬಾದಿನಲ್ಲಿ ಹುಟ್ಟಿ ಬೆಳೆದಿದ್ದರಿಂದ, ಬೆನಗಲ್‌ರ ಹೆಚ್ಚಿನ ಚಿತ್ರಗಳಲ್ಲಿ ಹೈದರಾಬಾದಿನ ಪ್ರಭಾವವನ್ನು ಕಾಣಬಹುದು. ಈವರೆಗೆ ಸುಮಾರು ಹತ್ತೊಂಭತ್ತು ಚಿತ್ರಗಳನ್ನು ನಿರ್ದೇಶಿಸಿರುವ ಬೆನಗಲ್, ಪ್ರತಿ ಚಿತ್ರದ ಮೂಲಕವೂ ಜನರನ್ನು ತಲುಪಿದ್ದಾರೆ : ಯಶಸ್ವಿಯಾಗಿದ್ದಾರೆ. ಬೆನಗಲ್‌ರ ಪ್ರತಿ ಚಿತ್ರದ ಹೈಲೈಟ್ ಎಂದರೆ ಚಿತ್ರಗಳಲ್ಲಿನ ದೃಶ್ಯ ವೈಭವ ಹಾಗೂ ವಿಶಿಷ್ಟ ತೆರನಾದ ನಿರೂಪಣಾ ಕೌಶಲ್ಯ. 'ಭೂಮಿಕಾ', 'ಕೊಂಡೂರಾ', 'ಜುನೂನ್', 'ಕಲಿಯುಗ್', 'ಆರೋಹಣ್', 'ಮಂಡಿ', 'ತ್ರಿಕಾಲ್', 'ಸುಸಮನ್', 'ಅಂತರ್ನಾದ್', 'ಸೂರಜ್ ಕೀ ಸಾತ್ವಾ ಗೋಡಾ', 'ಮಾಮೂ', 'ಮೇಕಿಂಗ್ ಆಫ್ ದಿ ಮಹಾತ್ಮ', ತೆಲುಗಿನ 'ಅನುಗ್ರಹಮ್', ಮಕ್ಕಳ ಚಿತ್ರ 'ಚರಣ್‌ದಾಸ್ ಚೋರ್', ಹೀಗೆ ಒಂದಕ್ಕಿಂತ ಒಂದು ವಿಭಿನ್ನ ಚಿತ್ರಗಳನ್ನು ನಿರ್ದೇಶಿಸಿದ ಬೆನಗಲ್ ಗಳಿಸಿದ ರಾಷ್ಟ್ರೀಯ-ಅಂತರರಾಷ್ಟ್ರೀಯ ಪುರಸ್ಕಾರಗಳಿಗೆ ಲೆಕ್ಕವಿಲ್ಲ. ಮೋಹನ್‌ದಾಸ್ ಕರಮಚಂದ್ ಗಾಂಧಿಯವರನ್ನು ಮಹಾತ್ಮನನ್ನಾಗಿಸಲು ಕಾರಣವಾದ, ಅವರ ಬದುಕಿನ ಮಹತ್ವದ ಘಟನೆಗಳನ್ನಾಧರಿಸಿ ಬೆನಗಲ್ ನಿರ್ದೇಶಿಸಿದ 'ಮೇಕಿಂಗ್ ಆಫ್ ದಿ ಮಹಾತ್ಮ' ಭಾರತೀಯ ಚಿತ್ರರಂಗದ

'ಮಹತ್ವದ ಚಿತ್ರ' ಎಂದು ಹೆಸರು ಗಳಿಸಿತು.

ಬೆಳ್ಳಿ ತೆರೆಗೆ ಮಾತ್ರ ತಮ್ಮನ್ನು ಸೀಮಿತಗೊಳಿಸಿಕೊಳ್ಳದ ಬೆನಗಲ್ ಕಿರುತೆರೆಯಲ್ಲೂ ಕೆಲವು ಪ್ರಮುಖ ಧಾರಾವಾಹಿಗಳನ್ನು ನಿರ್ದೇಶಿಸಿ, ಭಾರತದ ಮನೆ-ಮನೆಯನ್ನೂ ತಲುಪಿದರು. ಐದು ಟಿ.ವಿ. ಸರಣಿಗಳನ್ನು ನಿರ್ದೇಶಿಸಿದ ಬೆನಗಲ್ ಕಿರುತೆರೆಯಲ್ಲೂ ತಮ್ಮ ಛಾಪನ್ನೊತ್ತಿದರು. 'ಯಾತ್ರಾ' ಎಂಬ ಸರಣಿ ರೈಲು ಪ್ರಯಾಣದ ವಿವಿಧ ಮುಖಗಳನ್ನು ಹಿಡಿದಿಟ್ಟರೆ, 'ಭಾರತ್ ಏಕ್ ಖೋಜ್' ನೆಹರೂರವರ 'ಡಿಸ್ಕವರಿ ಆಫ್ ಇಂಡಿಯಾ' ಕೃತಿಯನ್ನು ಆಧರಿಸಿದ ಸರಣಿಯಾಗಿತ್ತು. ಇದು ಈಗ ದೂರದರ್ಶನದಲ್ಲಿ ಪ್ರಸಾರಗೊಳ್ಳುತ್ತಿದೆ. ತೆಲುಗು ಕಥೆಗಳನ್ನು ಆಧರಿಸಿದ 'ಅಮರಾವತಿ ಕಿ ಕಥಾಯೇಂ', ವಿಶ್ವಪ್ರಸಿದ್ಧ ಕಥೆಗಾರರ ಕಥೆಗಳನ್ನು ಆಧರಿಸಿದ 'ಕಥಾ ಸಾಗರ್' ಸರಣಿ ಮತ್ತು ಸ್ವಾತಂತ್ರ್ಯದ ಸುವರ್ಣ ಮಹೋತ್ಸವದ ಸ್ಮರಣೆಗಾಗಿ ನಿರ್ದೇಶಿಸಿದ 'ಸಂಕ್ರಾಂತಿ' ಎಂದಿಗೂ ಮರೆಯಲಾಗದ ಕಿರುತೆರೆಯ ಸರಣಿಗಳು. ಈ ಐದೂ ಸರಣಿಗಳು ತಮ್ಮ ಗುಣಮಟ್ಟ ಮತ್ತು ಕಲಾತ್ಮಕತೆಯಿಂದ ಗಳಿಸಿದ ಜನಪ್ರಿಯತೆ ಅಪಾರ.

ಚಿತ್ರರಂಗಕ್ಕೆ ತಮ್ಮ ಜೀವನದ ಇಪ್ಪತ್ತೈದಕ್ಕೂ ಹೆಚ್ಚು ವರ್ಷಗಳನ್ನು ಅರ್ಪಿಸಿರುವ ಶ್ಯಾಮ್ ಬೆನಗಲ್, ತಮ್ಮ ಚಿತ್ರಗಳ ಮೂಲಕ ಅನೇಕ ಪ್ರತಿಭಾವಂತರನ್ನು ಚಿತ್ರರಂಗಕ್ಕೆ ಕೊಡುಗೆಯಾಗಿ ನೀಡಿದ್ದಾರೆ; ಚಿತ್ರರಂಗವನ್ನು ಶ್ರೀಮಂತಗೊಳಿಸಿದ್ದಾರೆ. ಭಾರತದ ಪ್ರಸಿದ್ಧ ಶ್ರೇಷ್ಠ ನಟಿ, ಶಬಾನಾ ಅಜ್ಮಿ ಚಿತ್ರರಂಗವನ್ನು ಪ್ರವೇಶಿಸಿದ್ದೇ ಬೆನಗಲ್‌ರ ಮೊದಲ ಚಿತ್ರ 'ಅಂಕುರ್' ಮೂಲಕ. ಸ್ಮಿತಾ ಪಾಟೀಲ್, ನಾಸಿರುದ್ದೀನ್ ಶಾ, ಓಂಪುರಿ, ಗಿರೀಶ್ ಕಾರ್ನಾಡ್, ಅಮರೀಶ್ ಪುರಿ, ಇನ್ನೂ ಮುಂತಾದ ಪ್ರಸಿದ್ಧ ನಟ-ನಟಿಯರು, ಶ್ಯಾಮ್ ಬೆನಗಲ್ ಕೆತ್ತಿದ ಜೀವಂತ ಶಿಲ್ಪಗಳು. ಬೆನಗಲ್‌ರ ಚಿತ್ರಗಳ ಮೂಲಕವೇ ಚಿತ್ರರಂಗಕ್ಕೆ ಪರಿಚಯಿಸಲ್ಪಟ್ಟ ಮತ್ತಿಬ್ಬರು ಪ್ರತಿಭಾವಂತರೆಂದರೆ, ಸಂಗೀತ ನಿರ್ದೇಶಕ ವನರಾಜ್ ಭಾಟೀಯಾ ಮತ್ತು ಛಾಯಾಗ್ರಾಹಕ ಹಾಗೂ ನಿರ್ದೇಶಕ ಗೋವಿಂದ ನಿಹಲಾನಿ. ಭಾರತೀಯ ಚಿತ್ರರಂಗಕ್ಕೆ ಶ್ಯಾಮ್ ಬೆನಗಲ್ ಕೊಟ್ಟ ಒಟ್ಟಾರೆ ಕೊಡುಗೆ ಅಪಾರವಾದದ್ದು ಬೆಲೆಕಟ್ಟಲಾಗದ್ದು.

ಶ್ಯಾಮ್ ಬೆನಗಲ್ ತಮ್ಮ ಪ್ರಥಮ ಚಿತ್ರ 'ಅಂಕುರ್'ನ್ನು ನಿರ್ದೇಶಿಸುವುದಕ್ಕೆ ಮೊದಲು, ಭಾರತೀಯ ಚಿತ್ರರಂಗದಲ್ಲಿ ಸತ್ಯಜಿತ್ ರೇ, ಮೃಣಾಲ್ ಸೇನ್‌ರಂತಹವರು ಕಲಾತ್ಮಕ ಚಿತ್ರಗಳನ್ನು ನಿರ್ದೇಶಿಸಿದ್ದರಾದರೂ, ಅದು ಒಂದು ವರ್ಗಕ್ಕೆ ಮಾತ್ರ ಸೀಮಿತವಾಗಿದ್ದ ಚಿತ್ರಗಳಾಗಿದ್ದವು ಎಂಬ ಮಾತಿದೆ. ಅಂತಹ ಸಂದರ್ಭದಲ್ಲಿ ತಮ್ಮ ಅಂಕುರ್ ಮೂಲಕ, ಶ್ಯಾಮ್ ಬೆನಗಲ್ ಕಲಾತ್ಮಕ ಚಿತ್ರಗಳಿಗೆ ಹೊಸ ಪ್ರೇಕ್ಷಕ ವರ್ಗವನ್ನೇ ಹುಟ್ಟುಹಾಕಿದರು. ಆ ಮೂಲಕ ಕಲಾತ್ಮಕ ಚಿತ್ರಗಳ ಸ್ವರೂಪವನ್ನೇ ಬದಲಿಸಿದವರಲ್ಲಿ ಬೆನಗಲ್ ಅವರ ಪಾತ್ರ ಹೆಚ್ಚಿನದು. ಕಲಾತ್ಮಕ ಚಿತ್ರಗಳೆಂದರೆ ಕೇವಲ ಬುದ್ಧಿಜೀವಿಗಳಿಗೆ ಮಾತ್ರ ಎನ್ನುವಂತಿದ್ದ ಕಾಲದಲ್ಲಿ, ಅವುಗಳನ್ನು ಜನಸಾಮಾನ್ಯರ ಗ್ರಹಿಕೆಗೆ ನಿಲುಕುವಂತೆ ಮಾಡಿದ್ದರಿಂದಲೇ, ಶ್ಯಾಮ್ ಬೆನಗಲ್ 'ಭಾರತೀಯ ಕಲಾತ್ಮಕ ಚಿತ್ರಗಳ ಜನಕ' ಎಂದೆನಿಸಿಕೊಂಡಿದ್ದಾರೆ.

**ಕೆ. ಗಣೇಶ ಕೋಡೂರು**
c/o. ಡಾ. ಕೆ. ಶಿವರಾಂ. ಕೋಡೂರು-೫೭೭ ೪೪೫,
ಹೊಸನಗರ(ತಾ) ಶಿವಮೊಗ್ಗ (ಜಿ)

---

*೫೭ನೇ ಪುಟದಿಂದ*

ಸಾಲುಗಳಲ್ಲಿ ಗಾಯಕಿಯ ಧ್ಯೇಯ ಆದರ್ಶಗಳು ವ್ಯಕ್ತವಾಗಿವೆ.

ಈ ಹಾಡಿನಲ್ಲಿ ಬರುವ ಅಂತಿಮ ಸಾಲುಗಳು ಒಂದು ರೀತಿಯಲ್ಲಿ ಕಾವ್ಯಾತ್ಮಕ ಪರಾಕಾಷ್ಠೆ ತಲುಪಿದೆ ಎಂದು ಹೇಳಬಹುದು.

''ಸುತ್ತಲಿರಲೋ ಕೂಸ ಮೇಲೆ
ಕವಿದ ಕತ್ತಲು ಕಳೆವ ಲೀಲೆ
ಅರಿವು ನೀನೆ ಗುರುವು ನೀನೇ
ನಾದ ಢಮರು ನುಡಿವೆ ನೀನೇ
ಮಂಟೇಸ್ವಾಮಿ ಮಾಯಗಾರ
ಬಾರೋ ಈ ಮಗಳೆಡೆಗೆ ಬಾರ'' ಎಂಬ ಸಾಲುಗಳಲ್ಲಿ ಗಾಯಕಿಯು ಪುನಃ ಹಾಡುವಂತೆ ಮಾಡಲು ಪ್ರಾರ್ಥಿಸುವ ಪರಿ ವ್ಯಕ್ತವಾಗಿದ್ದರೆ ನಂತರದ ಸಾಲುಗಳಲ್ಲಿ ಮಾನವ ಸಂವೇದನೆ ಹೃದಯಂಗಮವಾಗಿ ವ್ಯಕ್ತವಾಗಿದೆ.

''ಏರಿಕೆರೆಯ ತಡೆದಂತೆ ನನ್ನ ತಡೆದೆ
ಎಲೆ ಜೀವವೆ, ಜೀವಕ್ಕಿದುವೆ ಸಂಜೀವ ॥೨॥
ಏರಿ ಒಡೆದು ನೀರ್ ಹರಿಯುವಾಗ
ತನ್ನ ಬಯಲಿಗೂ, ಹೇಳದೆ ಸಾಗಿ...
ಹರಿಯಿತವ್ವ ನೀರೆ ರಭಸ
ಹಾರಿ ಹೋಯಿತೆ ದೂರ ಹಂಸ,
ತನುವಿನೊಳಗನುದಿನವೂ ಇದ್ದು
ಎನ್ನ ಮನಕ್ಕೊಂದು ಮಾತು
ಹೇಳದೆ ಹೋದೆ ಹಂಸ'' ॥೩॥

ಎಂಬ ಸಾಲುಗಳಲ್ಲಿ ಕವಿ ಲಕ್ಷ್ಮೀಪತಿಯವರು ಸಹಜ ಭಾವನೆಗಳನ್ನು ಪ್ರತಿಬಿಂಬಿಸುವಲ್ಲಿ ಯಶಸ್ವಿಯಾಗಿರುವುದಲ್ಲದೆ ಭಾವನೆ-ಚಿಂತನೆಗಳ ಹಾಗೂ ಮನುಜ ಸಂಬಂಧಗಳ ಸೂಕ್ಷ್ಮತೆಗಳನ್ನು ಸೆರೆಹಿಡಿಯುವಲ್ಲಿ ಸಹ ಯಶಸ್ವಿಯಾಗಿದ್ದಾರೆ. ಈ ಹಾಡನ್ನು ವಾಣಿ ಜಯರಾಂ ಮತ್ತು ಹೇಮಂತರವರು ಅದ್ಭುತವಾಗಿ ಹಾಡಿದ್ದಾರೆ. ರಾಗಸಂಯೋಜನೆ ಸಹ ಉತ್ತಮವಾಗಿದೆ. ಈ ಹಾಡು ನೀಲಾ ಚಿತ್ರದ ಮುಖ್ಯ ಆಕರ್ಷಣೆ ಎಂದರೆ ತಪ್ಪಾಗಲಾರದು.

ಪಾಳೆಗಾರರ ವಂಶದ ಬಗ್ಗೆ ಜನಪದ ಶೈಲಿಯಲ್ಲಿ ಮೂಡಿಬಂದಿರುವ - ''ಧರಗೇನೆ ದೊಡ್ಡ ವಂಶ ಹತ್ತೂರ ಹೊನ್ನ ಕಳಶ'' ಎಂಬ ಹಾಡು ಪಾಳೆಯಗಾರರ ಜೀವನಶೈಲಿ, ಅವರ ಅಟ್ಟಹಾಸ, ಇತಿಹಾಸಗಳ ಬಗ್ಗೆ ಪರಿಚಯ ನೀಡುವಲ್ಲಿ ಸಫಲವಾಗಿದೆ. ಎರಡು ಬಾರಿ ಮೂಡಿಬರುವ ಲಕ್ಷ್ಮೀಪತಿಯವರ ಈ ಗೀತೆ ಪಿಚ್ಚಳ್ಳಿ ಶ್ರೀನಿವಾಸ ಅವರ ಕಂಠಸಿರಿಯಲ್ಲಿ ಉತ್ತಮವಾಗಿ ಮೂಡಿಬಂದಿದೆ.

ಇದೇ ಧಾಟಿಯ ಇನ್ನೊಂದು ಗೀತೆ ಲಕ್ಷ್ಮೀಪತಿ ಹಾಗೂ ಸಿದ್ದಯ್ಯನವರು ರಚಿಸಿರುವ ''ಈ ನಾಡ ಮಣ್ಣಿನಲ್ಲಿ ಮಣ್ಣಾದ ಜನಗಳ ಕಥೆಯ'' ಎಂಬ ಹಾಡಿನಲ್ಲಿಯೂ ಸಹ ಇತಿಹಾಸದ ಸಂಸ್ಕೃತಿಯ ಸ್ಥೂಲ ಪರಿಚಯ ಅಡಗಿದೆ. ವಸುಂಧರಾ ದಾಸ್ ಈ ಹಾಡನ್ನು ಇಂಪಾಗಿ ಹಾಡಿದ್ದಾರೆ.




ರಾಮಯ್ಯನವರು ರಚಿಸಿರುವ - ''ಧೋ ಧೋ ಸುರಿಮಳೆಯೇ'' ಹಾಡು ದುರಂತ ಪ್ರೇಮ ಕಥೆಯನ್ನು ಕಾವ್ಯರೂಪದಲ್ಲಿ ಜನಪದ ಶೈಲಿಯಲ್ಲಿ ಹೇಳುವ ಪ್ರಯತ್ನವಾಗಿದ್ದು ಉತ್ತಮವಾಗಿ ಮೂಡಿಬಂದಿದೆ. ಇವರ ಇನ್ನೊಂದು ಗೀತೆ ''ಹೆಜ್ಜೆ ಹೆಜ್ಜೆ ಮಾತಾಡು'' ಸಹ ಜನಪದ-ಆಧುನಿಕ ಸಂಗೀತದ ಮಿಶ್ರಣದಿಂದ ಮನಸೂರೆಗೊಳ್ಳುತ್ತದೆ. ಗೀ ಗೀ ಪದವು ಸೇರಿದಂತೆ ವಿವಿಧ ಜನಪದ ಶೈಲಿಯ ಪರಿಚಯ ಈ ಹಾಡಿನಲ್ಲಿದೆ. ಆದರೆ ಈ ಹಾಡಿನ ರಾಗ ಈಗಾಗಲೇ ಎಲ್ಲೋ ಕೇಳಿದಂತಿದೆ.

ಒಟ್ಟಾರೆ ಹೇಳುವುದಾದರೆ 'ನೀಲಾ' ಚಿತ್ರದ ಹಾಡುಗಳು ಸಂಗೀತದ ಆಸ್ವಾದಕರಿಗೆ ಒಂದು ಹೊಸ ಅನುಭವ ನೀಡುತ್ತವೆ. ಲಕ್ಷ್ಮೀಪತಿ ಹಾಗೂ ರಾಮಯ್ಯನವರ ಕವಿತಾ ಪ್ರತಿಭೆ, ವಿಜಯಭಾಸ್ಕರ್ ಅವರ ಉತ್ತಮ ರಾಗ ಸಂಯೋಜನೆ, ಎಲ್ಲಾ ಗಾಯಕರ ಉತ್ತಮ ಗಾಯನ ಸಂಗೀತ ಪ್ರಿಯರಿಗೆ ಮುದನೀಡುತ್ತದೆ. ''ಜಂಬೋಲೆ, ಜಂಬೋಲೆ'', ''ಕಾರ್, ಕಾರ್'', ''ಲವ್ವೋ ಲವ್ವೋ'' ಅಂತಹ ಅರ್ಥಹೀನ-ಅಬ್ಬರದ ಸಂಗೀತದಿಂದ ವಿಭಿನ್ನವಾಗಿರುವ 'ನೀಲಾ' ಚಿತ್ರದ ಹಾಡುಗಳು ಕನ್ನಡದಲ್ಲಿ ಕವಿತಾ ಪ್ರತಿಭೆಗೆ ಇನ್ನೂ ಬರ ಬಂದಿಲ್ಲವೆಂಬ ಅಂಶವನ್ನು ಸಾಬೀತು ಮಾಡುತ್ತದೆ. ಲಕ್ಷ್ಮೀಪತಿಯವರ ಕವಿತಾ ಪ್ರತಿಭೆ ಇಲ್ಲಿ ಎದ್ದುಕಾಣುತ್ತದೆ. ''ನೀಲಾ'' ಚಿತ್ರದ ಹಾಡುಗಳು ಒಂದು ಕಾವ್ಯಾತ್ಮಕ ಅನುಭವ.

ಸಾ. ದಿವಾಕರ್
ಕೆನರಾ ಬ್ಯಾಂಕ್, ಬೆಳ್ಳೂರು

# ನಾಸ್ತಿಕ ಕೃತಿಗಳು ಹಾಗೂ ನಾಸ್ತಿಕತೆಯ ಅಗತ್ಯ

**ಚಿ**ಕ್ಕಂದಿನಿಂದಲೂ ನನ್ನನ್ನು ಕಾಡುತ್ತಿದ್ದ ವಿಷಯವೆಂದರೆ ದೇವರ ಅಸ್ತಿತ್ವದ ಕುರಿತಾದ ಜಿಜ್ಞಾಸೆ. ಈ ಕುರಿತಾದ ನನ್ನ ಅಧ್ಯಯನ ಹಾಗೂ ಆಲೋಚನೆಗಳು ನನ್ನನ್ನು ನಾಸ್ತಿಕವಾದದ ಕಡೆಗೇ ನೂಕುತ್ತಿದ್ದವು. ನಾಸ್ತಿಕವಾದದ ಕುರಿತಾದ ವೈಚಾರಿಕ ಪುಸ್ತಕಗಳು ನನ್ನನ್ನು ಹೆಚ್ಚು ಆಕರ್ಷಿಸಿದವು. ನಾಸ್ತಿಕವಾದದ ಕುರಿತಾಗಿ ನನಗೆ ಕನ್ನಡದಲ್ಲಿ ಮೂರು ಮುಖ್ಯ ಕೃತಿಗಳು ದೊರೆತವು. ಅವುಗಳೆಂದರೆ ೧. ದೇವರು ಸತ್ತ- ವಸುದೇವ ಭೂಪಾಲಂ, ೨) ನಾಸ್ತಿಕನು ಮತ್ತು ದೇವರು - ಗೌರೀಶ ಕಾಯ್ಕಿಣಿ, ೩) ದೇವರು- ಎ. ಎನ್. ಮೂರ್ತಿರಾವ್.

''ದೇವರು ಸತ್ತ'' ಪುಸ್ತಕದಲ್ಲಿ ಲೇಖಕರಾದ ವಸುದೇವ ಭೂಪಾಲಂರವರು ಈ ರೀತಿ ಹೇಳಿದ್ದಾರೆ - ''ದೇವರು ಹುಟ್ಟಿದುದು ಮನುಷ್ಯನ ಕಲ್ಪನೆಯಲ್ಲಿ, ಸಾಯುವುದೂ, ಸಾಯಬೇಕಾಗುವುದೂ ಅಲ್ಲಿಯೇ.'' ದೇವರು ಮಾನವ ಕೃತ ಎಂಬುದು ಇವರ ಖಚಿತ ನಿಲುವು. ದೇವರಿಗೆ ಮಾನವರಂತೆಯೇ ಅಂಗಾಂಗಗಳೂ, ಮಾತೂ ಇರುವುದೇ ಇದಕ್ಕೆ ಪ್ರಮಾಣವೆಂದು ಅವರು ಹೇಳುತ್ತಾರೆ. ಮಾನವನ ಮೌಢ್ಯ, ಭಯ, ಸ್ವಾರ್ಥಗಳೇ ದೇವರನ್ನು ಕಲ್ಪಿಸಲು ಕಾರಣವಾದವೆಂದು ಅವರು ತಿಳಿಸುತ್ತಾರೆ. ಮೂರ್ತಿರಾಯರ 'ದೇವರು' ಕೃತಿಯಲ್ಲಿ ಸರಿಸುಮಾರು ಇದೇ ಅಭಿಪ್ರಾಯ ಕಂಡುಬರುತ್ತದೆ. 'ದೇವರು' ಎಂಬ ಕಲ್ಪನೆಯ ಹಿಂದೆ ಭಯ, ಆಶ್ಚರ್ಯ, ರಕ್ಷಣೆಯನ್ನು ಬೇಡುವ ಮನೋವೃತ್ತಿ ಇವೆಲ್ಲವನ್ನೂ ಗುರುತಿಸಬಹುದೆಂದು ತಿಳಿಸುತ್ತಾರೆ. ಇದನ್ನೇ ಗೌರೀಶ ಕಾಯ್ಕಿಣಿಯವರು ತಮ್ಮ ''ನಾಸ್ತಿಕನು ಮತ್ತು ದೇವರು'' ಕೃತಿಯಲ್ಲಿ ಈ ರೀತಿ ಹೇಳುತ್ತಾರೆ - ''ಇತಿಹಾಸದ ಆರಂಭದಲ್ಲಿ ಮಾನವನ ಕುತೂಹಲ ಮತ್ತು ಜಿಜ್ಞಾಸೆ ವಿಶ್ವಪ್ರಪಂಚದ ವಸ್ತು ವ್ಯಾಪಾರಗಳ ಮೂಲವನ್ನು ಅರಸುತ್ತ ಹೋದಂತೆ, ಆತ ಪ್ರಕೃತಿಯ ಸಂಘಟನೆಯ ಹಿಂದೆ ಭವ್ಯ ಅವ್ಯಕ್ತ ಶಕ್ತಿಗಳು ಕೆಲಸ ಮಾಡುತ್ತಿರುವಂತೆ ಭಾವಿಸುವನು. ಹೀಗೆ ದೇವರೆಂಬುದು ಮಾನವನ ವೈಚಾರಿಕತೆಯೇ ತನ್ನ ಸಮಾಧಾನಕ್ಕಾಗಿ ಕಲ್ಪಿಸಿಕೊಂಡ ಒಂದು ಸತ್ತೆ - ಮಕ್ಕಳು ಹೆದರುವ 'ಗುಮ್ಮ'ನಂತೆ.'' ಹೀಗೆ ಪ್ರತಿಯೊಂದು ನಾಸ್ತಿಕವಾದದ ಕೃತಿಗಳಲ್ಲಿ ಕಂಡುಬರುವ ಪ್ರಮುಖ ಅಂಶವೆಂದರೆ ದೇವರು ಕಾಲ್ಪನಿಕ ಭೀತಿಯಿಂದ ಉಂಟಾದ ಒಂದು ಮಾನಸಿಕ ಸೃಷ್ಟಿ ಎಂದು.

ಮನುಕುಲಕ್ಕೆ ಕರುಣಾದ್ರ್ರಹೃದಯನೂ, ಪ್ರೇಮ ಸ್ವರೂಪಿಯೂ ಆದ ದೇವರು ಬೇಕು ಎನ್ನುವುದು ಮೂರ್ತಿರಾಯರ ನಿಲುವು. ಆದರೆ ಅವರು ಹೇಳುತ್ತಾರೆ : ''ದೇವರಿದ್ದರೆ ಲೋಕಹಿತಕ್ಕಾಗಿ ಇರಬೇಕು. ಅದರಲ್ಲಿ ಆಸಕ್ತಿಯಿಲ್ಲದ ದೇವರನ್ನು ಕಟ್ಟಿಕೊಂಡು ನಮಗೆ ಆಗಬೇಕಾದದ್ದೇನು !'' ದೇವರನ್ನು ಕುರಿತ ನಂಬಿಕೆಯಿಂದ ಲೋಕದಲ್ಲಿ ಕ್ರೌರ್ಯ, ದ್ವೇಷಗಳು ಹೆಚ್ಚಿವೆ ಎಂದೂ ತಿಳಿಸುತ್ತಾರೆ. ಜಿ. ಟಿ. ನಾರಾಯಣರಾಯರು ತಮ್ಮ ''ವೈಜ್ಞಾನಿಕ ಮನೋಧರ್ಮ'' ಕೃತಿಯಲ್ಲಿ ದೇವರು ಏಕೆ ಬೇಡವೆಂದು ಈ ರೀತಿ ಹೇಳಿದ್ದಾರೆ : ವೈಜ್ಞಾನಿಕ ಮನೋಧರ್ಮದ ಪ್ರಥಮ ಹಾಗೂ ಪ್ರಬಲ ಶತ್ರು, ಜನರಿಂದ ಲಂಚ ಪಡೆದು ಅವರಿಗೆ ಕೋರಿದ ವರಗಳನ್ನು ಕರುಣಿಸುವ ದೇವರು. ಈ ಸ್ವಾರ್ಥಾತೀತನಲ್ಲದ ಮತ್ತು ಮಾನವ ಸೃಷ್ಟಿಯಾದ ದೇವರ ಸುತ್ತ, ಗುರು, ಮಠ, ಮಂದಿರ, ಜಾತಿ, ಮತ, ಅಂಧಶ್ರದ್ಧೆ ಮುಂತಾದ ವಿಗತಿಗಾಮಿ ಬಲಗಳೆಲ್ಲವೂ ನೇಯ್ದುಕೊಂಡು ಬದುಕನ್ನು ಕಳ್ಳದಾರಿಯಲ್ಲಿ ತಳ್ಳಿಕೊಂಡು ಹೋಗುತ್ತಿವೆ. ವೈಜ್ಞಾನಿಕ ಮನೋಧರ್ಮದ ತಾಯಿ ಬೇರಿಗೆ ಹಿಡಿದಿರುವ ಗೆದ್ದಲು ಈ ದೇವರು. ರೂಪ, ಗುಣ, ಭಾವನೆ, ಲಹರಿ, ಸಂತೋಷ, ದುಃಖ, ಕೋಪ, ಮತ್ಸರ, ಕಾಮ ಮುಂತಾದ ಸಕಲ ಮಾನವೀಯ ಸದ್ಗುಣ, ದುರ್ಗುಣಗಳಿಂದ ಬಾಧಿತನಾಗಿರುವ, ಜನರ ಅದೃಷ್ಟದ ಜೊತೆ ಚಕ್ಕಂದವಾಡುತ್ತಿರುವ ಮತ್ತು ಅವರಲ್ಲಿ ನಿಷ್ಕ್ರಿಯತೆ ಪ್ರೇರಿಸುತ್ತಿರುವ ಈ ವಿಕರ್ಷಕ ದೇವರನ್ನು ನಿವಾರಿಸಿದ ವಿನಾ ವೈಜ್ಞಾನಿಕ ಮನೋಧರ್ಮ ಅಭಿವರ್ಧಿಸಲಾರದು. ನಾನು ಚಿಂತಿಸುವ ವಿಧಾನವೇ ನನ್ನನ್ನು ನಾಸ್ತಿಕನನ್ನಾಗಿ ಮಾಡಿದೆ ಎಂದು ಹೇಳುವ ಭಗತ್ ಸಿಂಗ್ (ಕೃತಿ : ನಾನೇಕೆ ನಾಸ್ತಿಕ) ದೇವರಲ್ಲಿ ನಂಬಿಕೆಯಿಡುವುದು ಮತ್ತು ಪ್ರತಿದಿನ ಪ್ರಾರ್ಥನೆ ಸಲ್ಲಿಸುವುದು ಮಾನವನ ಮಟ್ಟಿಗೆ ಅತ್ಯಂತ ಸ್ವಾರ್ಥಪರವಾದ ಹೀನಾಯವಾದ ಕ್ರಿಯೆಯೆಂದು ಹೇಳುತ್ತಾರೆ.

ಹೀಗೆ ದೇವರನ್ನು ಪ್ರಬಲವಾಗಿ ನಿರಾಕರಿಸುವ ಇನ್ನೊಬ್ಬ ವ್ಯಕ್ತಿ ಗೋರಾ (ಗೋಪರಾಜು ರಾಮಚಂದ್ರರಾವ್). ಸಮಾಜದಲ್ಲಿ ಶೋಷಣೆ ಅಂತ್ಯಗೊಂಡು ಎಲ್ಲರಿಗೂ ಸಮಾನ ಅವಕಾಶ ದೊರೆಯುವಂತಾಗಲು, ಜಾತಿಪದ್ಧತಿ ನಿರ್ಮೂಲನಗೊಳಿಸಲು ನಾಸ್ತಿಕವಾದವೊಂದೇ ಮಾರ್ಗ ವೆಂದು ಅವರು ಹೇಳುತ್ತಾರೆ. (ಗೋರಾ : *ನಾಸ್ತಿಕವಾದಿಯೊಬ್ಬನ ಜೀವನ ಚರಿತ್ರೆ*). ಅಜ್ಞಾನ, ಅಭದ್ರತೆಗಳು ಆದಿಮಾನವನನ್ನು ಕಾಲ್ಪನಿಕ ದೇವರ ಮೊರೆ ಹೋಗುವಂತೆ ಮಾಡಿದವು ಎನ್ನುವ ಅವರು - ಪ್ರಾಮಾಣಿಕ ಮನುಷ್ಯ ಯಾವ ದೇವರಿಗೂ, ಯಾವ ಧರ್ಮಕ್ಕೂ ಅಂಜಬೇಕಾಗಿಲ್ಲ; ಮನುಷ್ಯನ ಕಲ್ಪನೆಯ ಕೂಸಾದ ದೇವರು ಸಮಾಜದ ಮುನ್ನಡೆಗೆ ಅಗತ್ಯವಿಲ್ಲವೆಂದು ತಿಳಿಸುತ್ತಾರೆ. ಆಸ್ತಿಕತ್ವವೆಂದರೆ ಮನುಷ್ಯನಲ್ಲಿರುವ ಪರಾಧೀನತೆ ಪ್ರವೃತ್ತಿ ಎನ್ನುತ್ತಾರೆ. ಆಸ್ತಿಕರ ಬಗ್ಗೆ ಗೌರೀಶ್ ಕಾಯ್ಕಿಣಿಯವರು ತಮ್ಮ ''ನಾಸ್ತಿಕನು ಮತ್ತು ದೇವರು'' ಕೃತಿಯಲ್ಲಿ ಹೇಳುವ ಮಾತುಗಳು ಕುತೂಹಲಕಾರಿಯಾಗಿವೆ. ''ಲಕ್ಷಾಂತರ ಆಸ್ತಿಕರು ಸಾಮಾನ್ಯವಾಗಿ, ಸಾರ್ವತ್ರಿಕವಾಗಿ ಕೇವಲ ಸಂಸ್ಕಾರ ಬಲದಿಂದ, ರೂಢಿಯ ಬಲದಿಂದ, ಗತಾನುಗತಿಯ ಬಹುಜನಾಭಿಪ್ರಾಯದ ಸೆಳವಿನಿಂದ, ದೇವರಲ್ಲಿ ನಂಬಿಕೆ ಯಾಂತ್ರಿಕವಾಗಿ, ಒಂದು ಚಟವಾಗಿ ಹಾಗೆ 'ಆಸ್ತಿಕ'ರಾಗಿರುತ್ತಾರೆ. ಅವರ ಬದುಕಿನ ಮುಕ್ಕಾಲು ಪಾಲು ವ್ಯವಹಾರಗಳೆಲ್ಲ ದೇವರ ಹಂಬಲವಿಲ್ಲದೆ ಬೆಂಬಲಕ್ಕಾಗಿ ಕಾಯದೆ ಸುಸೂತ್ರವಾಗಿ ನಡೆದಿರುತ್ತವೆ.'' ಇವೆಲ್ಲವನ್ನೂ ಗಮನಿಸಿದರೆ ಒಂದು ಮಾತಂತೂ ಸ್ಪಷ್ಟವಾಗುತ್ತದೆ: ದೇವರು ಎಂಬ ಕಲ್ಪನೆಯ ಅಗತ್ಯವಿರುವುದು ದುರ್ಬಲರಿಗೆ ಮತ್ತು ಈ ದುರ್ಬಲರನ್ನು ಶೋಷಿಸುವವರಿಗೆ ಮಾತ್ರ. ಮಾನವ ಮನಸ್ಸಿನ ದೌರ್ಬಲ್ಯದ ಪ್ರತೀಕವೇ ದೇವರು ಎಂಬ ಪರಿಕಲ್ಪನೆ.

ಬೀಚಿಯವರು ತಮ್ಮ ಕೃತಿ ''ದೇವರಿಲ್ಲದ ಗುಡಿ''ಯಲ್ಲಿ ದೇವರ ಕಲ್ಪನೆ ಸಾಮಾಜಿಕ ಜೀವನಕ್ಕೆ ಗಂಡಾಂತರಕಾರಿಯಾದುದು; ನಮ್ಮ ನಮ್ಮಲ್ಲಿಯೇ ಕೆಲವರು ಮೇಲು, ಕೆಲವರು ಕೀಳು ಎಂಬ ಭಾವನೆಗೆ ಅದು ಇಂಬು ಮಾಡಿಕೊಡುತ್ತದೆ; ಆರೋಗ್ಯಕರವಾದ ಸಮಾಜದ ಸೃಷ್ಟಿಗೆ ದೇವರ ಕಲ್ಪನೆ ಅಪಾಯಕಾರಿ ಎನ್ನುತ್ತಾರೆ. ತಮ್ಮ ಜೀವನ ಚರಿತ್ರೆಯಾದ ''ನನ್ನ ಬಯಾಗ್ರಫಿ'' ಯಲ್ಲೂ ಅವರು ದೇವರ ಕುರಿತಾಗಿ ಬರೆದಿದ್ದಾರೆ. ''ದೇವರಿದ್ದಾನೆಂದು ಭ್ರಮಿಸುವುದು ನನಗೆ ಸಾಧ್ಯವಿಲ್ಲ, ನನ್ನ ಪಾಲಿಗೆ ಇದು ಆತ್ಮವಂಚನೆ. ವೈಯಕ್ತಿಕ ದೇವರು ಇದ್ದಾನೆ ಎಂಬುದನ್ನಂತೂ ನನ್ನ ತಿಳುವಳಿಕೆ ಎಂದಿಗೂ ಒಪ್ಪಲಾರದು. ಇಲ್ಲ ಎಂದು ದೇವರನ್ನು ನನ್ನ ತಲೆಯಿಂದ ಹೊರದೂಡುವುದೂ ಸುಲಭವಲ್ಲ. ನಾನು ಬೆಳೆದುಬಂದ ವಾತಾವರಣ ಮತ್ತು ನನ್ನ ಸ್ವತಂತ್ರ ವಿಚಾರಪರತೆ ಪರಸ್ಪರ ವಿರುದ್ಧವಾಗಿ ಯುದ್ಧ ಮಾಡಿವೆ. ಕಡೆಯಲ್ಲಿ ನನ್ನ ನಿರ್ಧಾರ ದೇವರಿಲ್ಲ, ಇದು ನನಗೆ ತೃಪ್ತಿ ಕೊಟ್ಟಿದೆ.'' ! ''ತಮ್ಮ ತಲೆದಿಂಬು ಮಾತ್ರವೇ ತಮಗೆ ದೇವರು. ತಲೆ ದಿಂಬು ಇಲ್ಲದೇ ಮಲಗಿದರೆ ಯಾರಿಗೂ ನಿದ್ರೆಬಾರದು. ನಿದ್ರೆಯಲ್ಲಿದ್ದಾಗ ಅವನ ತಲೆದಿಂಬು ಅವನನ್ನು ಅದೆಷ್ಟು ರಕ್ಷಿಸಬಲ್ಲದೋ ಜೀವನದಲ್ಲಿ ದೇವರೂ ಅಷ್ಟೇ ರಕ್ಷಿಸಬಲ್ಲ; ಇಲ್ಲದ ದೇವರು ಅದೆಂತು ರಕ್ಷಿಸಬಲ್ಲ? ಭಯಪೀಡಿತವಾದ ಮಗು ಬಾಯಲ್ಲಿ ಬೆರಳನ್ನಿಟ್ಟುಕೊಂಡು ಮಲಗುವಂತೆ ಮಾನವನೂ ಒಂದು ದೇವರನ್ನು ತಲೆಯಲ್ಲಿಟ್ಟುಕೊಂಡು ಬಾಳುತ್ತಿದ್ದಾನೆ. ನೀನು ಹೇಡಿ ಎಂದು ಇದ್ದುದನ್ನು ಇದ್ದಂತೆ ಹೇಳಿದಾಗ ಅವನಿಗೆ ಬರುವುದು ಕೋಪವೊಂದೇ !''

ಬಿ. ವಿ. ವೀರಭದ್ರಪ್ಪನವರು ತಮ್ಮ ಪುಸ್ತಕ 'ವೇದಾಂತ ರೆಜಿಮೆಂಟ್'ನಲ್ಲಿ ಹೀಗೆ ಹೇಳಿದ್ದಾರೆ: ''ಪ್ರತಿಯೊಂದು ಮಗುವೂ ವಿಚಾರ ಮಾಡುವ ಪ್ರೌಢವಯಸ್ಸನ್ನು ತಲುಪುವವರೆಗೆ ಎಲ್ಲ ಧಾರ್ಮಿಕ ನಂಬಿಕೆಗಳಿಂದ ದೂರವಿದ್ದುದಾದರೆ, ಅನಂತರ ಎಲ್ಲ ಧರ್ಮಗಳನ್ನು ಮತ್ತು ಅವುಗಳ ವಿರುದ್ಧವಾದ ಎಲ್ಲ ವಿಚಾರಗಳನ್ನು ಬೋಧಿಸುವಂತಾದರೆ ಆಗ ಆಸ್ತಿಕರಾಗುವವರ ಸಂಖ್ಯೆ ತೀರ ವಿರಳವಾದೀತು.'' ಎಚ್. ನರಸಿಂಹಯ್ಯನವರು ತಮ್ಮ ''ತೆರೆದ ಮನ''ದಲ್ಲಿ ಹೇಳಿದ್ದಾರೆ: ''ಸ್ವಾರ್ಥಕ್ಕಾಗಿ ದೇವರನ್ನು ಅಂಗಲಾಚಿ ಬೇಡಿಕೊಳ್ಳುವುದರಿಂದ ವ್ಯಕ್ತಿಯ ಸ್ವಾಭಿಮಾನಕ್ಕೆ ಪೆಟ್ಟು ಬೀಳುತ್ತದೆ. ಆತ್ಮವಿಶ್ವಾಸಕ್ಕೆ ಆಘಾತವುಂಟಾಗುತ್ತದೆ. ಮನೋದೌರ್ಬಲ್ಯದ ಲಕ್ಷಣವಾಗುತ್ತದೆ. ಅಸಹಾಯಕತನದ ಚಿಹ್ನೆಯಾಗುತ್ತದೆ. ಒಂದು ವಿಧದಲ್ಲಿ ಹೇಡಿತನದ ಪ್ರದರ್ಶನವೂ ಹೌದು.''

ನಾಸ್ತಿಕವಾದ ಏಕೆ ಶ್ರೇಷ್ಠವಾದುದೆಂದು ಕೆ. ಎಸ್. ಭಗವಾನರ ''ಶಂಕರಾಚಾರ್ಯ ಮತ್ತು ಪ್ರತಿಗಾಮಿತನ'' ಕೃತಿಯಲ್ಲಿ ಕಾಣಬಹುದು. ಅವರು ತಿಳಿಸುತ್ತಾರೆ : ''ನಾಸ್ತಿಕವಾದವೆಂದರೆ ಸಂಪೂರ್ಣ ಶಕ್ತಿ, ಶಕ್ತಿಯಿಲ್ಲದವರು ಇತರರನ್ನೋ ಇಲ್ಲ ದೇವರನ್ನೋ ಅವಲಂಬಿಸುತ್ತಾರೆ. ಶಕ್ತಿಯಿಂದ ಸ್ವಾವಲಂಬನೆ, ದೌರ್ಬಲ್ಯದಿಂದ ಪರಾವಲಂಬನೆ. ಸ್ವಾವಲಂಬನೆಯಿಂದ ಸ್ವಾತಂತ್ರ್ಯ; ಪರಾವಲಂಬನೆಯಿಂದ ಪಾರತಂತ್ರ್ಯ. ಹಾಗಾಗಿ ಎಲ್ಲರೂ ನಾಸ್ತಿಕರಾಗಲಾರರು. ನಾಸ್ತಿಕವಾದ ಎಲ್ಲ ವಾದಕ್ಕಿಂತ ಹೆಚ್ಚಿನ ಜವಾಬ್ದಾರಿಯನ್ನೂ ಸಂಯಮವನ್ನೂ ಬೇಡುತ್ತದೆ. ಯಾರಿಗೆ ತಮ್ಮಲ್ಲಿ ಆತ್ಮವಿಶ್ವಾಸವಿದೆಯೋ, ಧೈರ್ಯವಿದೆಯೋ, ಉನ್ನತ ಆಲೋಚನಾಶಕ್ತಿ ಇದೆಯೋ, ವೈಚಾರಿಕತೆ ಇದೆಯೋ ಅವರು ಮಾತ್ರ ನಾಸ್ತಿಕವಾದಿಗಳಾಗಬಲ್ಲರು. ಆದ್ದರಿಂದ ನಾಸ್ತಿಕ ಧರ್ಮ ಎಂದರೆ

*ಮುಂದಿನ ಪುಟಕ್ಕೆ*

**ಗುಂಡೂರಾವ್ ಹೆಬ್ರಿ**

# ಶಿವಪ್ರಕಾಶ್ ಅವರ 'ಮದುವೆ ಹೆಣ್ಣು' ನಾಟಕದಲ್ಲಿ ಭಾವತೀವ್ರತೆ ಮತ್ತು ಕರುಣೆ

ಹಿಂದೂ ಧರ್ಮದಲ್ಲಿ ಕಂಡುಬರುವ ಮೌಢ್ಯತೆ ಸಂಪ್ರದಾಯ ವಿಧಿ ಮತ್ತು ಬೌದ್ಧ ಧರ್ಮದ ಪ್ರೀತಿ ಕರುಣೆ ಜನ್ಮಾಂತರ ಸಂಬಂಧ ಇವೆರಡನ್ನು ಎತ್ತಿ ತೋರಿಸುವ ಸೃಷ್ಟಿಯೇ 'ಮದುವೆ ಹೆಣ್ಣು'. ನಾಟಕಕಾರ ಶಿವಪ್ರಕಾಶರ ಈ ಕಥಾವಸ್ತುವನ್ನು ಹೊಂದಿದ ನಾಟಕವನ್ನು ಹೊನ್ನಾಳಿಯ 'ಹೊಳೆರಂಗ' ಕಲಾತಂಡದವರು ಇತ್ತೀಚೆಗೆ ಕಲಾತ್ಮಕವಾಗಿ ಪ್ರದರ್ಶಿಸಿದರು. 'ಮದುವೆ ಹೆಣ್ಣು' ಗ್ರೀಕ್ ದುರಂತ ನಾಟಕದ ಪರಂಪರೆಯನ್ನು ನೆನಪಿಸುತ್ತದೆ. ಅಲ್ಲಲ್ಲಿ ಶೇಕ್ಸ್‌ಪಿಯರ್ ನಾಟಕದ ಪಾತ್ರದ ಛಾಯೆಯೂ ಕಂಡುಬರುತ್ತದೆ. ಸುಂದರ ಪರಿಸರದ ಹಿನ್ನೆಲೆಯಲ್ಲಿ ಅಂದು ಪ್ರದರ್ಶಿತವಾದ ನಾಟಕ ಅರ್ಥಪೂರ್ಣವಾಗಿತ್ತು.

ಕೇರಳದ ಖ್ಯಾತ ರಂಗಕರ್ಮಿ ಪ್ರೊ. ಚಂದ್ರದಾಸನ್ ಅವರ ಅಭಿಪ್ರಾಯದಂತೆ ''ಈ ನಾಟಕ ಮಾನವನ ಮೂಲ ಸ್ವಭಾವದ ಭಾವತೀವ್ರತೆ, ಮಹತ್ವಾಕಾಂಕ್ಷೆ, ಗರ್ವ, ದ್ವೇಷ, ಪ್ರೇಮಗಳ ಮೂಲಕ ಬದುಕು ದುರಂತಗೊಳ್ಳುವುದನ್ನು ಚಿತ್ರಿಸುತ್ತದೆ.''



ನಾಟಕದ ಒಂದು ದೃಶ್ಯ

ಒಂದು ಬುಡಕಟ್ಟಿನ ಕುಲದ ಮದುವಣಿಗನ ಪ್ರೇತ ಸಮಣಿಗೆ ತನ್ನ ಹಿಂದಿನ ಬದುಕಿನ ಘಟನೆಗಳನ್ನು ನಿರೂಪಿಸುತ್ತ ಸಮಣಿಯಿಂದ ಇಂದಿನ ದ್ವಂದ್ವಗಳನ್ನು ಬಿಡಿಸುವುದರಲ್ಲಿ ಕಥೆ ಮುಂದುವರಿಯುತ್ತಾ ಹೋಗುವುದು. ಕುಲದ ನಿಯಮದ ಪ್ರಕಾರ ವಧುದಕ್ಷಿಣೆಯಾಗಿ ಸದೃಢ ಪುರುಷನ ತಲೆಬುರುಡೆಯನ್ನು ವರ ತರಬೇಕು. ಆದರೆ ಪ್ರಮಾದವಶಾತ್ ವಿಧಿ ನಿಯಮದಂತೆ ಮದುವೆ ಹೆಣ್ಣಿನ ತಲೆಬುರುಡೆಯನ್ನೇ ಹಿಡಿದುಕೊಂಡು ಬರುತ್ತಾನೆ. ಕುಲಪುರೋಹಿತನ ಮಾತು ನಿಜವಾಗುವುದು. ಜೊತೆಗೆ ಸಾವಿನಾಚೆಯ ದಂಡೆಯಿಂದ ಮತ್ತೆ ಬದುಕಿಗೆ ಮರಳುವುದನ್ನು ಹೇಳಲಾಗಿದೆ.

ನಿರ್ದೇಶಕನಾದ ಚಂದ್ರದಾಸನ್ ಬೇಟೆಗಾರ ಬಲಿಯನ್ನು ಬೇಟೆಯಾಡುವುದು, ಬಲಿಯೇ ಬೇಟೆಗಾರನನ್ನು ಬೇಟೆ ಮಾಡುವುದು ಅಥವಾ ಬಲಿ ಹಾಗೂ ಬೇಟೆಗಾರ ಇಬ್ಬರೂ ಬೇಟೆಯಲ್ಲಿ ಲೀನರಾಗುವುದೇ ಮೂಲ ಸತ್ಯ ಎಂದಿದ್ದಾರೆ.

ಇಲ್ಲಿ ಮರಗಳು, ಮಳೆ, ಪಿಶಾಚಿಗಳು ಮಾತನಾಡುತ್ತವೆ. ಕಥಾ ನಿರೂಪಣೆಯನ್ನು ಮರಗಳು ಮತ್ತು ಮದುವಣಿಗನ ಪ್ರೇತ ಮಾಡುತ್ತವೆ - ಕಥೆಗೆ ಹಿಮ್ಮೇಳವಾಗಿ ಬಿದಿರಹಳ್ಳಿ ನರಸಿಂಹಮೂರ್ತಿಯವರ ''ತುಂಬಿ ಹರಿಯೇ ತಾಯಿ ತುಂಗಭದ್ರೆ'' ಈ ಹಾಡು ಅರ್ಥವತ್ತಾಗಿದೆ. ಶ್ರೀಮತಿ ಶಾಂತಾ ಹಿರೇಮಠ ಅವರ ಶ್ರಾವ್ಯಧ್ವನಿಯಲ್ಲಿ ಎಲ್ಲ ಹಾಡುಗಳು ನಾಟಕಕ್ಕೆ ಮೆರುಗನ್ನು ತಂದಿವೆ. ಆದರೆ ವಾದ್ಯ ನುಡಿಸುವಿಕೆಯಲ್ಲಿ ಅಲ್ಲಿ ತಾಳ ತಪ್ಪಿ ವಾದನ ಅಲ್ಲಲ್ಲಿ ಕರ್ಕಶವೆನಿಸುತ್ತದೆ. ನಾಟಕದ ಕೊನೆಯಲ್ಲಿ ತುಂಗಭದ್ರೆಯ ಮಡಿಲಲ್ಲಿ ದೀಪಗಳನ್ನು ತೇಲಿಬಿಡುವ ಕ್ರಮ ಸಾಂಕೇತಿಕವಾಗಿದೆ.

ಒಂದು ನಾಟಕಕ್ಕೆ ಅದರ ಪರಿಸರ, ದೇಶ, ಜನಾಂಗಕ್ಕೆ ತಕ್ಕಂತೆ ಭಾಷೆ ಇದ್ದರೆ ಪ್ರಧಾನ. ಆದರೆ ಬುಡಕಟ್ಟಿನ ಜನಾಂಗದ ಕುರಿತು ಇರುವ ಈ ನಾಟಕದಲ್ಲಿ ಸರಳವಲ್ಲದ ಗ್ರಾಂಥಿಕ ಭಾಷೆಯನ್ನು ಉಪಯೋಗಿಸಿದ್ದಾರೆ. ಶಿವಪ್ರಕಾಶ ಅವರು ಒಂದು ಸಂದರ್ಶನದಲ್ಲಿ ಹೇಳಿದಂತೆ ''ಈ ವಸ್ತು ಏಳು ವರ್ಷಗಳಿಂದ ಕಾಡಿತ್ತು. ಸೋಲಿಗರ ಹಟ್ಟಿಯಲ್ಲಿ ನಡೆಯುವ ಕಥೆ ಇದು.'' ಕರ್ನಾಟಕದ ಕೊಳ್ಳೇಗಾಲ, ಚಾಮರಾಜನಗರ ಪ್ರದೇಶದಲ್ಲಿ ವಾಸಿಸುವ ಸೋಲಿಗರಿಗೆ ಅವರದೇ ಆದ ಸೋಲಿಗ ನುಡಿ ಇದೆ. ಹಾಗಾಗಿ ಅದಷ್ಟು ಕಡೆ ಆಡುಭಾಷೆಯನ್ನು ಉಪಯೋಗಿಸಿದ್ದರೆ ಇನ್ನೂ ಹೆಚ್ಚು ಪರಿಣಾಮಕಾರಿಯಾಗುತ್ತಿತ್ತು.

ಇಡೀ ನಾಟಕದಲ್ಲಿ ಗಮನ ಸೆಳೆದವರು ಸುರೇಶ್ ಹೊಸಕೇರಿ (ಮದುವಣಿಗ) ಮತ್ತು ಶಿಕ್ಷಕರಾದ ಕೆ.ಸಿ. ಮಂಜಪ್ಪ (ಪ್ರೇತ). ಸುರೇಶ್ ಅವರ ಆವೇಶ ಭರಿತ ಭಾವತೀವ್ರ ಅಭಿನಯ ಶ್ರೇಷ್ಠಮಟ್ಟದ್ದು. ದೀಪಾ (ಸಮಣಿ) ಅವರು ತಮ್ಮ ಪಾತ್ರಕ್ಕೆ ಜೀವ ತುಂಬಿದ್ದಾರೆ. ಅರವಿಂದ (ಕುಲಗುರು) ಕೆಲವೇ ನಿಮಿಷಗಳವರೆಗೆ ಕಾಣಿಸಿಕೊಂಡರೂ ಪರಿಣಾಮಕಾರಿ ಅಭಿನಯ ನೀಡಿದ್ದಾರೆ. ಅಪ್ಸರಾ ಬಾನು (ಮದುವಣಗಿತ್ತಿ ಗೆಳತಿ) ಮಿಂಚಿ ಮಾಯವಾದರೂ ಪ್ರೇಕ್ಷಕರ ಮನದಲ್ಲಿ ಅಚ್ಚೊತ್ತಿದ್ದಾರೆ. ಆಶಾ (ಮುದುಕಿ), ರಾಮು (ಮದುವಣಗಿತ್ತಿ ತಂದೆ) ಮರಗಳು ಮಳೆ ಪಿಶಾಚಿಗಳಾಗಿ ಹೈಸ್ಕೂಲಿನ ಬಾಲಕ - ಬಾಲಕಿಯರು ತಮ್ಮ ಪಾತ್ರಗಳನ್ನು ಸಮರ್ಥವಾಗಿ ಅಭಿನಯಿಸಿದ್ದಾರೆ.

ಸ್ವಾಭಾವಿಕವಾಗಿ ದೊರಕುವ ಮೂಲ ವಸ್ತುಗಳನ್ನು ಮತ್ತು ಕನಿಷ್ಠ ರಂಗ ಸಲಕರಣೆಗಳನ್ನು ಉಪಯೋಗಿಸಿ ರಂಗ ಸಜ್ಜಿಕೆಯನ್ನು ಶ್ರೀ ಎ. ಜಿ. ಕೃಷ್ಣಪ್ಪನವರ ಸಹಯೋಗದಿಂದ ನಿರ್ಮಿಸಿದ ಸುಧೀರಬಾಬು ಅವರ ಪ್ರಯತ್ನ ಕನಸಿನ ಲೋಕಕ್ಕೆ ಕರೆದೊಯ್ಯುವುದು. ಅಂತೆಯೇ ವಸ್ತ್ರಾಲಂಕಾರ ಸಹ ತಕ್ಕಮಟ್ಟಿಗೆ ಚೆನ್ನಾಗಿತ್ತು.

ಕೊರತೆಗಳ ಪಟ್ಟಿಯನ್ನು ನಿಡಿದಾಗಿಸಿ ವಿಮರ್ಶೆ ಮಾಡುವ ಉದ್ದೇಶ ಇದಲ್ಲ. ಪ್ರೇಕ್ಷಕರು ಮೆಚ್ಚಿದ್ದಾರೆ. ಇಂದಿನ ಬಣ್ಣದ ಬದುಕಿನ ಬೆಳಕಿನ ಕಾಲದಲ್ಲಿ ಇಂಥ ನಾಟಕಗಳು ಬೆಳೆಯಬೇಕು. ನಾವು ಬೆಳೆಸಬೇಕು.

ಯು. ಎನ್. ಸಂಗನಾಳಮಠ
ಉಪನ್ಯಾಸಕರು, ೨ನೇ ಕ್ರಾಸ್, ಹೈಸ್ಕೂಲ್ ಬಡಾವಣೆ, ಹೊನ್ನಾಳಿ.

---

*ಹಿಂದಿನ ಪುಟದಿಂದ*

ಆತ್ಮನಂಬಿಕೆಯ ಧರ್ಮ. ದೈವವಾದದಿಂದ ಬಿಡಿಸಿಕೊಂಡು ವಾಸ್ತವ ವಾದದಲ್ಲಿ ಬೇರೂರಿದ ಜಡವಾದವೇ ನಾಸ್ತಿಕವಾದ; ನಾಸ್ತಿಕವಾದವೇ ಮಾನವತಾವಾದ.''

ನಾಸ್ತಿಕನಾಗುವುದು ಎಷ್ಟು ಕಷ್ಟವೋ, ನಾಸ್ತಿಕವಾಗಿ ಬಾಳುವುದೂ ಕಷ್ಟವೇ ಸರಿ. ಇದೊಂದು ರೀತಿ ಪ್ರವಾಹಕ್ಕೆ ವಿರುದ್ಧವಾಗಿ ಈಜುವುದಾಗಿದೆ. ಚಿಕ್ಕಂದಿನಿಂದಲೂ ನಮ್ಮನ್ನು ಬಂಧಿಸಿರುವ ನಂಬಿಕೆಗಳ ಸಂಕೋಲೆಗಳಿಂದ ಬಿಡಿಸಿಕೊಂಡು ಮುಕ್ತ ವೈಚಾರಿಕ ಚಿಂತನೆ ನಡೆಸಿದರೆ ಮಾತ್ರವೇ ನಾಸ್ತಿಕನಾಗಲು ಸಾಧ್ಯ. ಸ್ವತಂತ್ರವಾಗಿ ವಿಚಾರಮಾಡುವ ಶಕ್ತಿಯಿರುವ ಯಾವುದೇ ಮಾನವನು ದೇವರ ಅಸ್ತಿತ್ವವನ್ನು ಒಪ್ಪಿಕೊಳ್ಳಲು ಸಾಧ್ಯವಿಲ್ಲ. ನಮ್ಮಲ್ಲಿ ಇಂದು ಬೆಳೆದುಬಂದಿರುವ ಹೆಚ್ಚಿನ ಮೂಢನಂಬಿಕೆಗಳಿಗೆ ಮುಖ್ಯ ಕಾರಣವೇ ದೇವರಲ್ಲಿನ ನಂಬಿಕೆ. ಗೋರಾ ಅವರು ಹೇಳುವಂತೆ ''ಈ ಧರ್ಮ ಕರ್ಮಗಳ ಸಿದ್ಧಾಂತ ಮನುಷ್ಯನ ಶೋಷಣೆಗೆ ಮೂಲ. ಇದಕ್ಕೆ ಆಧಾರ ದೇವರಲ್ಲಿನ ನಂಬಿಕೆ. ಇದು ನನ್ನ ಹಣೆಬರಹ, ಪೂರ್ವಾರ್ಜಿತ ಕರ್ಮ ಎಂದುಕೊಳ್ಳುವ ಮನುಷ್ಯ ಮೃಗಕ್ಕಿಂತ ಕೀಳು. ಅದು ಅವನನ್ನು ಪ್ರತಿಭಟನೆಯ ಮಾರ್ಗ ತಪ್ಪಿಸಿ ನಿಷ್ಕ್ರಿಯತೆಗೆ ಒಯ್ಯುತ್ತದೆ. ಆದ್ದರಿಂದ ದೇವರಲ್ಲಿ, ಹಣೆಬರಹದಲ್ಲಿ ನಂಬಿಕೆ ಕಳೆದುಕೊಂಡು ಹೋದರೆ ಜನರು ಕ್ರಿಯಾಶೀಲರಾಗುತ್ತಾರೆ.''

ಬನ್ನಿ, ದೇವರನ್ನೂ, ಆತನನ್ನು ಎತ್ತಿಹಿಡಿಯುವ ಮತಧರ್ಮವನ್ನೂ ನಿರಾಕರಿಸೋಣ. ಮಾನವೀಯತೆಯಿಂದ ಕೂಡಿದ ಮಾನವ ಧರ್ಮವನ್ನು ಎತ್ತಿಹಿಡಿಯೋಣ. ಮಾನವ ಸಮಾಜದ ಸತ್ವ, ಸಹಬಾಳ್ವೆಯ ಅಗತ್ಯ, ಮನೋಧರ್ಮದ ವೈಚಾರಿಕತೆ, ಬುದ್ಧಿವಂತಿಕೆ ಇವುಗಳನ್ನೇ ನೆಲೆಗೊಂಡು ಮಾನವ ನೀತಿ ಧರ್ಮ ನಿಲ್ಲಬೇಕು.

ಗುಂಡೂರಾವ್ ಹೆಬ್ರಿ
ಲಕ್ಷ್ಮಿ ಡ್ರೆಸ್ ಸೆಂಟರ್, ಬಸ್‌ನಿಲ್ದಾಣದ ಎದುರು, ಹೆಬ್ರಿ - ೫೭೬ ೧೧೨, ಉಡುಪಿ ಜಿಲ್ಲೆ

HOSATHU Kannada Monthly / November 2001 Rs. 10
RNI Regn. No. KARKAN/1999/614 REGD. CPMG / KA / BGE – 7 / 2001 Licenced to post without prepayment. Licence No. WPP-14






# ಮೈಸೂರು ಸ್ಯಾಂಡಲ್ ಆರೈಕೆ
# ...ಮಾತೃಪಾಲನೆ ತರುವಾಯ ಇದೇ ಪ್ರಶಸ್ತ

## *Mysore Sandal*
## Baby Soap

ನಿಮ್ಮ ಮುದ್ದಿನ ಮಗುವಿಗಾಗಿಯೇ ವಿಶೇಷ ಆಸಕ್ತಿಯಿಂದ ಸೃಷ್ಟಿಸಲಾಗಿದೆ. ಅತಿ ಪರಿಶುದ್ಧ ಸಾಮಗ್ರಿಗಳಿಂದ ತಯಾರಾದದ್ದು - ಸೌಮ್ಯವಾದ ಶ್ರೀಗಂಧ ತೈಲ, ಪುಷ್ಟಿದಾಯಕ ಬಾದಾಮಿ ಎಣ್ಣೆ, ಮೃದುವಾದ ಗ್ಲಿಸರೀನ್ ಹಾಗೂ ಮತ್ತಿತರ ತೇವಾಂಶದಾಯಕ ಅಂಶಗಳಿಂದ ಕೂಡಿದ್ದು, ನಿಮ್ಮ ಮಗುವಿನ ಚರ್ಮವನ್ನು ಮೃದುವಾಗಿ, ಹೊಳಪುಳ್ಳದ್ದಾಗಿ ಹಾಗೂ ಸೋಂಕಿನಿಂದ ದೂರವಾಗಿ ಇಡುತ್ತದೆ.




## *Mysore Sandal*
## Baby Powder

ಅತ್ಯಂತ ಉತ್ತಮವಾದ ಘಟಕಾಂಶಗಳಿಂದ ತಯಾರಾದದ್ದು - ನಿಮ್ಮ ಮಗುವಿನ ಮೃದುವಾದ ಚರ್ಮದ ಸ್ತರಗಳಲ್ಲಿನ ಬೆವರನ್ನು ಹೀರಲು ನೆರವಾಗುವ ಶ್ರೀಗಂಧ ಹಾಗೂ ಬಾದಾಮಿ ಇವುಗಳನ್ನು ಹೊಂದಿದೆ. ಇದರಿಂದ ಚರ್ಮ ಕೆಂಪುಗಟ್ಟುವ ಸಂದರ್ಭಗಳು ಕಡಿಮೆ - ಅಲ್ಲದೆ ನಿಮ್ಮ ಮಗುವಿನ ಚರ್ಮವನ್ನು ಇಡೀ ದಿನ ಶುಷ್ಕವಾಗಿ ಹಾಗೂ ಪರಿಮಳಯುಕ್ತವಾಗಿಡುತ್ತದೆ.






ಹಾಗೂ ನಮ್ಮ ಆನ್-ಲೈನ್ ಸ್ಟೋರ್‌ನಲ್ಲಿ
**www.mysoresandal.com**
ವಿಸ್ತಾರ ಶ್ರೇಣಿಯಲ್ಲಿ ದೊರೆಯುವ ಉತ್ಪನ್ನಗಳನ್ನು ಖರೀದಿಸಿ




**ಕರ್ನಾಟಕ ಸಾಬೂನು ಮತ್ತು ಮಾರ್ಜಕ ನಿಯಮಿತ**
ಪೋ.ಬ.ನಂ.5531, ಬೆಂಗಳೂರು - ಪೂಣೆ ಹೆದ್ದಾರಿ, ರಾಜಾಜಿನಗರ,
ಬೆಂಗಳೂರು - 560 055 ದೂರವಾಣಿ : 337 1106, 337 6922, 337 0469
ಫ್ಯಾಕ್ಸ್ : 080337 0498, ಈಮೇಲ್ : sandal@giasbg01.vsnl.net.in
ಶಾಖೆಗಳು : • ಕಲ್ಕತ್ತ • ಚೆನ್ನೈ • ಕಾನ್ಪುರ್ • ಮುಂಬೈ • ನವದೆಹಲಿ • ಹೈದರಾಬಾದ್

CANCO • BLR • KSDL • 1107 • 2000

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore-560 058 and Published ... Embassy Centre, Crescent Road, P. B. 5159, Bangalore-560 001. Chief Editor : Dr. G. Ramakrishna